

## ದೇಸಿಯೊಳ್ ಪುಗುವುದು

## ಪೊಕ್ಕು ಮಾರ್ಗದೊಳೆ ತಳ್ವುದು

**ಎಂ. ಎಂ. ಕಲಬುರ್ಗಿ**

ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂತಹ ಜೀವನ ಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ–ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕು ಮಾಡಿದೆ. ಹಿಂದಿನದು ಕನ್ನಡ–ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ–ಇಂಗ್ಲೀಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲೀಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವ ನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ–ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು. ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವ, ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯ ಸಂಸ್ಕೃತಿಯಿಂದ ಎಚ್ಚರವಹಿಸಿ ತುಂಬಿಕೊಳ್ಳುವ ಕೆಲಸ ನಮ್ಮಲ್ಲಿ ನಡೆಯಬೇಕಾಗುತ್ತದೆ. ಒಟ್ಟಾರೆ ಅನ್ಯ ಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಸ್ಥಾನಿಕದಲ್ಲಿ ಬದುಕಿಸಬೇಕಾಗಿದೆ, ಜಾಗತಿಕದಲ್ಲಿ ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕ ವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ. ಹೊರತು ಮನುಷ್ಯ ಸಮಾಜದ ವಿಕೃತ ಸ್ಥಿತಿಯ ದುರಂತವೆಂದು ಕರೆಯುವುದಿಲ್ಲ. ಹೀಗಾಗಿಯೇ ಭಾರತದ ಎಡಪಂಥೀಯ ಚಿಂತಕರಿಗಾಗಲೀ, ಬಲಪಂಥೀಯ ಚಿಂತಕರಿಗಾಗಲೀ, ಪಶ್ಚಿಮದ ಮಾನವಶಾಸ್ತ್ರದ ಗಿಳಿಪಾಠವನ್ನು ಕಲಿತು ನಮ್ಮನ್ನು ಅಧ್ಯಯನ ಮಾಡುವ ಜ್ಞಾನಿಗಳಿಗಾಗಲೀ ಇದುವರೆಗೂ ತಳ ಸಮುದಾಯಗಳ ಸಮಷ್ಟಿ ಸಾಂಸ್ಕೃತಿಕ ಸಂವೇದನೆಯ ವಿರಾಟ್ ದರ್ಶನ

ಸಾಧ್ಯವಾಗಿಲ್ಲ. ಅಧ್ಯಯನಕ್ಕಾಗಿ ಅಧ್ಯಯನ ಮಾಡಿ ಪುಟಗಟ್ಟಲೆ ಬರೆಯುವವರಿಂದಾಗಿಯೇ ಈ ಸಮುದಾಯಗಳ ಎಷ್ಟೋ ಸಾಂಸ್ಕೃತಿಕ ಅರ್ಥಗಳು ಜಾರಿ ಹೋಗುತ್ತಿವೆ.

ಹೀಗಾಗಿಯೇ ಎಲ್ಲ ಸಮುದಾಯಗಳ ರೂಪ ವಿರೂಪಗಳನ್ನು ಏಕಕಾಲಕ್ಕೆ ಹುಡುಕುವ ತಿದ್ದುವ ಹೊಸ ಜೀವ ಸಂಬಂಧಗಳಿಂದ ಒಂದನ್ನೊಂದು ಹೊಂದಿಸುವ ವೈಚಾರಿಕ ಸಮಷ್ಟಿತನಕ್ಕೆ ಬಂಧಿಸುವ ಜವಾಬ್ದಾರಿಯನ್ನು ಆಯಾ ಕ್ಷೇತ್ರಗಳ ಎಲ್ಲರೂ ಒಟ್ಟಾಗಿಯೇ ನಿಭಾಯಿಸ ಬೇಕಾಗಿದೆ. ಯಾವತ್ತೂ ಒಂದು ದೇಶದ ಅತ್ಯುತ್ತಮ ರಾಜಕೀಯ ವ್ಯವಸ್ಥೆಗೆ ಅಲ್ಲಿ ಅತ್ಯುತ್ತಮ ವಾದ ಸಾಂಸ್ಕೃತಿಕ ವ್ಯವಸ್ಥೆ ಇದ್ದಾಗ ಮಾತ್ರ ಎಲ್ಲರ ಕನಸುಗಳಿಗೂ ಸಮನಾದ ಸೂಕ್ತವಾದ ಸಮಷ್ಟಿ ನ್ಯಾಯ ದೊರಕುತ್ತದೆ. ಇಲ್ಲವಾದಲ್ಲಿ ಇಡೀ ಸಂಸ್ಕೃತಿಯ ಮತ್ತು ರಾಜಕಾರಣ ಕ್ರೂರ ರೂಪಗಳು ಸಮುದಾಯದ ಹೊಸ ತಲೆಮಾರುಗಳನ್ನು ತನ್ನ ದವಡೆಗಳಿಗೆ ಎಳೆದು ಕೊಳ್ಳುತ್ತಿರುತ್ತವೆ.

ಇಂತಹ ಅಪಾಯದ ಈ ಹೊತ್ತಿನಲ್ಲಿ ದಲಿತ ಸಂಸ್ಕೃತಿ ಅಧ್ಯಯನ ಪೀಠವು ತಳ ಸಮುದಾಯಗಳನ್ನು ಮತ್ತು ಅವುಗಳ ಸಾಂಸ್ಕೃತಿಕ ಚರಿತ್ರೆಯನ್ನು ಸಮಕಾಲೀನ ಅನುಭವಗಳಿಂದ ಕಟ್ಟಿಕೊಳ್ಳಬೇಕೆಂಬ ಆಶಯದಿಂದ ಈಗಾಗಲೇ ಅನೇಕ ಬಗೆಯ ಬರಹದ ಯೋಜನೆಗಳನ್ನು ಮುಂದುವರೆಸಿಕೊಂಡು ಬರುತ್ತಿದೆ. ಅವುಗಳಲ್ಲಿ ಎಸ್. ಎಸ್. ಹಿರೇಮಠ ಅವರು ಬರೆದ 'ದಲಿತ ಸಂಸ್ಕೃತಿ' ಕೃತಿಯೂ ಒಂದು. ದಲಿತ ಸಂಸ್ಕೃತಿಯ ಬಗ್ಗೆ ವಿಶೇಷ ಪ್ರೀತಿಯನ್ನೂ, ಕಾಳಜಿಯನ್ನೂ ತೋರುವ ಹಿರೇಮಠರು ಈ ಕೃತಿಯಲ್ಲಿ ಪ್ರಾಚೀನ ಸಾಂಸ್ಕೃತಿಕ ಆಕರಗಳಿಂದ ದಲಿತ ಸಂಸ್ಕೃತಿಯನ್ನು ವಿಶ್ಲೇಷಿಸುವ ಹಾಗೂ ಸಮಕಾಲೀನ ಒತ್ತಡಗಳಿಗೆ ಪೂರಕವಾದ ವಾದಗಳಿಂದ ವಿಚಾರ ಮಂಡಿಸುವ ಕ್ರಮದಲ್ಲಿ ನಮ್ಮ ಕೋರಿಕೆಯ ಮೇರೆಗೆ ಈ ಕೃತಿಯನ್ನು ಬರೆದುಕೊಟ್ಟಿದ್ದಾರೆ. ಇಂತಹ ಕಾಳಜಿಬದ್ಧವಾದ ಕೆಲಸವನ್ನು ಮಾಡಿ ಕೊಟ್ಟಿದ್ದಕ್ಕೆ ದಲಿತ ಸಂಸ್ಕೃತಿ ಅಧ್ಯಯನ ಪೀಠದ ಪರವಾಗಿ ಅವರನ್ನು ಅಭಿನಂದಿಸುತ್ತೇನೆ.

೧೧-೧-೨೦೦೧ ಮೊಗಳ್ಳಿ ಗಣೇಶ್

ವಿದ್ಯಾರಣ್ಯ ಮುಖ್ಯಸ್ಥರು

ದಲಿತ ಸಂಸ್ಕೃತಿ ಅಧ್ಯಯನ ಪೀಠ

ಕನ್ನಡ ವಿಶ್ವವಿದ್ಯಾಲಯ

## ಮೊದಲು ಹೇಳಬೇಕಿರುವ ಮಾತು

ಕನ್ನಡ ವಿಶ್ವವಿದ್ಯಾಲಯದ 'ದಲಿತ ಸಂಸ್ಕೃತಿ ಅಧ್ಯಯನ ಪೀಠ'ದ ಸಂಚಾಲಕರಾದ ಶ್ರೀ ಮೊಗಳ್ಳಿ ಗಣೇಶ್ ಅವರು 'ದಲಿತ ಸಂಸ್ಕೃತಿ'ಯ ಕುರಿತು ೧೫೦ ಪುಟಗಳ ಪುಸ್ತಕ ರಚನೆಗೆ ಕೇಳಿದಾಗ, 'ಹಬ್ಬಗಳು', 'ಜಾತ್ರೆಗಳು', 'ಮಾದರ ಚನ್ನಯ್ಯನ ನಾಡಿನಲ್ಲಿ' ಎಂಬ ಗ್ರಂಥಗಳು ಮತ್ತು 'ಸಂಕ್ರಮಣ' ಮೊದಲಾದ ಪತ್ರಿಕೆಗಳಲ್ಲಿ ಬಂದ ಲೇಖನಗಳ ಮೂಲಕ ನಾನು ಮಾಡುತ್ತಿದ್ದ ದಲಿತವಾದಿ ಚಿಂತನೆಯನ್ನು ಕ್ರೋಡೀಕರಿಸಿಕೊಳ್ಳಲು ಮತ್ತು ಪುನರ್ವಿಮರ್ಶಿಸಿಕೊಳ್ಳಲು ಒಂದು ಅವಕಾಶ ಒದಗಿತೆಂದು ಭಾವಿಸಿದೆ. ಸಿಕ್ಕ ಅಲ್ಪ ಅವಧಿಯಲ್ಲೇ ಈ ಕೆಲಸವನ್ನು ತೃಪ್ತಿಕರವಾಗಿ ಮಾಡಿದ್ದೇನೆಂದು ಅನಿಸದು.

ಗಣೇಶ್ ಅವರು, ಮಾಹಿತಿ, ಅದರ ವರ್ಣನೆಗಿಂತ, ಬೌದ್ಧಿಕ ವಿಶ್ಲೇಷಣೆ, ಹೊಸ ಕಲ್ಪನೆ, ತರ್ಕ, ಆಲೋಚನೆ, ಭಿನ್ನಸ್ವೋಪಜ್ಞತೆಯಿರಬೇಕೆಂದು ನಿರೀಕ್ಷಿಸಿದ್ದರು. ಅವರ ಆಶಯಗಳಿಗೆ ತಕ್ಕಂತೆ ಈ ಕೃತಿಯ ಬರಹವಿದೆಯೊ ನನಗೆ ಅನುಮಾನ. ಏಕೆಂದರೆ ಇಂಥ ಕೃತಿ ರಚನೆಗೆ ಬೇಕಾದ ಒಂದು ಹೊಸ ತರ್ಕವನ್ನು ಸಾಧಾರವಾಗಿ ಮಂಡಿಸುವುದಕ್ಕೆ ಈವರೆಗೆ ಬೇರೆ ಬೇರೆ ವಿದ್ವಾಂಸರು ಮಾಡಿರುವ ಆಲೋಚನೆ ಮತ್ತು ನೀಡಿರುವ ಮಾಹಿತಿಗಳನ್ನು ಗಮನಿಸಲೇ ಬೇಕಾಗುತ್ತದೆಂದು ನನ್ನ ಗ್ರಹಿಕೆ. ಅವರಿಗಿಂತ ಸ್ವಲ್ಪ ಮಟ್ಟಿಗಾದರೂ ಬೇರೆ ರೀತಿ ಆಲೋಚಿಸಲು ನನಗೆ ಇಲ್ಲಿ ಸಾಧ್ಯವಾಗಿದೆ ಎಂದುಕೊಂಡಿದ್ದೇನೆ. ಮಂಡಿಸಲಿರುವ ವಾದಕ್ಕೆ ನನಗೆ ಹೊಸದಾದ, ಬೇರೆ ಬೇರೆ ಶಿಸ್ತುಗಳಿಂದ ಬೆಂಬಲ ಪಡೆಯುವಾಗಲೂ ಸಾಕಷ್ಟು ಎಚ್ಚರಿಕೆ ಬೇಕಾಗುತ್ತದೆಂದು ಬಲ್ಲೆ.

ಇಷ್ಟಾಗಿಯೂ ಇಲ್ಲಿರುವ ತಪ್ಪು, ಕೊರತೆ, ಇತಿಮಿತಿಗಳಿಗೆ ಜವಾಬ್ದಾರನಾಗಿರುವುದರಿಂದ, ಓದುಗರು ಅಂಥವನ್ನು ನನ್ನ ಗಮನಕ್ಕೆ ತಂದರೆ ಕೃತಜ್ಞನು.

ನನ್ನ ಪ್ರಯತ್ನಗಳಿಗೆ ಬೆಂಬಲವಿರುವ ದಲಿತ ಮಿತ್ರರಿಗೆ, ಈ ಬರಹಕ್ಕೆ ಅವಕಾಶ ಒದಗಿಸಿ ಕೊಟ್ಟಿರುವ ಗೆಳೆಯ ಗಣೇಶ್ ಅವರಿಗೆ, ಉದಾರವಾದಿ ದೃಷ್ಟಿಕೋನದಿಂದ ವಿಶ್ವ ವಿದ್ಯಾಲಯದ ಏಳ್ಗೆಗೆ ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿರುವ ಕುಲಪತಿಗಳು, ನನ್ನ ಗುರುಗಳಾದ ಡಾ. ಎಂ.ಎಂ. ಕಲಬುರ್ಗಿ ಅವರಿಗೆ, ನಲ್ಮೆಯ ಗೆಳೆಯರಾದ ಕುಲಸಚಿವ ಶ್ರೀ ಮಲ್ಲೇಪುರಂ ಜಿ. ವೆಂಕಟೇಶ ಅವರಿಗೆ, ಪ್ರಸಾರಾಂಗದ ನಿರ್ದೇಶಕರಾದ ಪ್ರಿಯ ಶ್ರೀ ಎ. ವಿ. ನಾವಡ ಅವರಿಗೆ ಆತ್ಮೀಯ ವಂದನೆಗಳು.

೧-೬-೨೦೦೦ ಎಸ್.ಎಸ್. ಹಿರೇಮಠ

## ಅಧ್ಯಾಯ : ೧

---

**ದಲಿತ :**

'ಹಿಂದೂ' ಎಂಬ ಪದದಂತೆ 'ದಲಿತ'ವೂ ಈಚಿನ ಸೃಷ್ಟಿ. ಆದರೆ 'ಹಿಂದೂ' ಪದಕ್ಕಿರುವ ಮತೀಯ ವಾಸನೆ ದಲಿತಕ್ಕಿಲ್ಲ. ಎರಡಕ್ಕೂ ರಾಜಕೀಯ ಆಯಾಮವಂತೂ ಇದೆ. ರಾಷ್ಟ್ರೀಯ ವಿಮೋಚನಾ ಚಳುವಳಿಯ ಸಂದರ್ಭದಲ್ಲಿಯೇ ಡಾ. ಅಂಬೇಡಕರ ಅವರು 'ಹಿಂದೂ' ಪರಿಕಲ್ಪನೆಯ ವಿರುದ್ಧ, ಹಿಂದೂಗಳ ವಿರುದ್ಧ, ದಲಿತ ನೆಲೆಯಲ್ಲಿ ನಿಂತು ಹೋರಾಡಿದರು. 'ಸವರ್ಣೀಯರು', 'ಮೇಲ್ಜಾತಿ ಜನಗಳು', 'ಹಿಂದೂಗಳು'; ಅವರಲ್ಲಿ ದಲಿತರು ಸೇರುವುದಿಲ್ಲ ಎಂಬ ಕಲ್ಪನೆ ಅಲ್ಲಿ ಖಚಿತವಿತ್ತು.

ಇನ್ನೊಂದೆಡೆ ಎಡವಾದಿ ಚಿಂತಕರು ಈ ಎರಡೂ ಪದಗಳನ್ನು ಆಕಸ್ಮಿಕವಾಗಷ್ಟೇ ಬಳಸುತ್ತ ಬಂದಿದ್ದಾರೆ. ಅವರಿಗೆ ಎಲ್ಲ ಜಾತಿಗಳಲ್ಲಿರುವ ಬಡವರ ಮತ್ತು ದುಡಿಮೆಗಾರರ ಐಕ್ಯತೆ ಮುಖ್ಯ ಎಂಬ ವಿಚಾರವಿರುವುದರಿಂದ, ಚರ್ಚೆಯ ಪ್ರಧಾನ ಪರಿಕಲ್ಪನೆಗಳನ್ನಾಗಿ ಅವರು 'ಹಿಂದೂ', 'ದಲಿತ'ಗಳನ್ನು ಬಳಸಲಿಲ್ಲ.

ಕರ್ನಾಟಕದಲ್ಲಿ 'ದಲಿತ'ಕ್ಕೆ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ತುಳಿತಕ್ಕೆ ಒಳಗಾದ ಜಾತಿ ಜನಸಮೂಹ ಎಂಬ ಸ್ಥೂಲವಾದ ಅರ್ಥವನ್ನು ಕಲ್ಪಿಸಲಾಯಿತು. ಆದರೆ ಎಸ್.ಸಿ. (ಪರಿಶಿಷ್ಟ ಜಾತಿ), ಎಸ್.ಟಿ(ಪರಿಶಿಷ್ಟ ಪಂಗಡ) ಮತ್ತು ಹಿಂದುಳಿದ ಜಾತಿಗಳಲ್ಲಿ ಯಾವ ಯಾವ ಜಾತಿಗಳು 'ದಲಿತ'ದಲ್ಲಿ ಸೇರಬೇಕೆಂದು ಸ್ಪಷ್ಟವಾಗಿ ನಿರ್ಧಾರವಾಗಲಿಲ್ಲ.

ಒಂದು ದಾಖಲೆಯ ಪ್ರಕಾರ ಭಾರತದಲ್ಲಿ, ಮುಟ್ಟಿದರೆ ಮೈಲಿಗೆಯಾಗುವ ಅಂದರೆ ಅಸ್ಪೃಶ್ಯರ ೪೨೯ ಜಾತಿಗಳಿವೆ ಎಂದೂ, ಇವರು ಭಾರತದ ಜನಸಂಖ್ಯೆಯ ಶೇಕಡಾ ೧೪.೯ ರಷ್ಟಿದ್ದಾರೆಂದೂ ತಿಳಿದು ಬಂದಿದೆ.

ಕರ್ನಾಟಕದ ದಲಿತರೆಂದರೆ, ಹೊಲೆಯರು, ಮಾದಿಗರು, ಸಮಗಾರರು, ಡೋರ, ಡಕ್ಕಲ, ಮಾಚಾಳ, ಪಂಬದ, ಪರವ, ನಲಿಕೆ, ಕೊರಗ, ಮನ್ಸ, ಮೇರ ಮೊದಲಾದ ಅಸ್ಪೃಶ್ಯ ಜಾತಿ ಜನ ಎಂಬುದು ಗ್ರಹಿತವಾಗೇ ಇತ್ತು. ಇವರ ನೇತೃತ್ವದಲ್ಲಿ ಉಳಿದ ಶೋಷಿತ ಜಾತಿಗಳು ನೆರೆಯಬೇಕು ಎಂಬ ಕಲ್ಪನೆ ಬೆಳೆಯಿತು. ಮುಖ್ಯವಾಗಿ 'ದಲಿತ ಸಂಘರ್ಷ ಸಮಿತಿ'ಯು ಸಂಘಟನೆ ಮತ್ತು ಸಿದ್ಧಾಂತದ ನೆಲೆಯಲ್ಲಿ ಈ ತತ್ವವನ್ನು ಪ್ರತಿಪಾದಿಸಿತು.

ಈ ಬರಹದ ಸಂದಂರ್ಭದಲ್ಲಿ ಅಸ್ಪೃಶ್ಯರನ್ನು ಮಾತ್ರ ದಲಿತರು ಎಂದು ಪರಿಗಣಿಸಲಾಗಿದೆ.

ಕರ್ನಾಟಕದ ದಲಿತರಲ್ಲಿ ಹೊಲೆಯರು ಮತ್ತು ಮಾದಿಗರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಇವರ ಸಂಸ್ಕೃತಿಯನ್ನೇ ಹೋಲುವ ಅಸ್ಪೃಶ್ಯರು ಆಂಧ್ರ, ತಮಿಳುನಾಡು ಮತ್ತು ಕೇರಳಗಳಲ್ಲಿದ್ದಾರೆ. ಕನ್ನಡ, ತೆಲುಗು, ತಮಿಳು, ಮಲೆಯಾಳುಗಳಂತೂ ದ್ರಾವಿಡ ಭಾಷೆಗಳು. ಈ ಭಾಷೆಗಳನ್ನಾಡುವ ರಾಜ್ಯಗಳ ದಲಿತರಲ್ಲಿರುವ ಸಮಾನಾಂಶಗಳು ಭಾರತದ ದಲಿತರ ಚರ್ಚೆಯ ಸಂದರ್ಭದಲ್ಲಿ ಪ್ರಧಾನ ನೆಲೆಗಟ್ಟನ್ನು ಒದಗಿಸುತ್ತವೆ. ಇಂಡೋ ಆರ್ಯನ್ ಭಾಷೆಗಳಾದ ಮರಾಠಿ, ಗುಜರಾಥಿ, ಬಂಗಾಲಿ, ಪಂಜಾಬಿ, ಹಿಂದಿ

ಮೊದಲಾದ ಭಾಷೆಗಳನ್ನಾಡುವ ದಲಿತರೂ ಕೂಡ ದ್ರಾವಿಡ ಭಾಷಿಕ ದಲಿತರಿಗಿಂತ ಭಿನ್ನವಾಗಲಾರರು ಎಂದು ಪ್ರತಿಪಾದಿಸಲು ಬೇಕಾದ ಸಾಕ್ಷ್ಯಾಧಾರಗಳು ಸಾಕಷ್ಟಿವೆ.

ಒಟ್ಟಾರೆ ಇಡೀ ದೇಶದ ಅಸ್ಪೃಶ್ಯರ ಬದುಕು ಬವಣೆ, ಸಂಸ್ಕೃತಿ ಪರಂಪರೆ ಒಂದೇ ಆಗಿದೆ. ಇದು ಬರಿ ಸ್ಥೂಲವಾದ ಗ್ರಹಿಕೆಯಷ್ಟೇ ಅಲ್ಲ, ಸಂಬಂಧ ಪಡುವ ವಿವಿಧ ಸಾಮಾಜಿಕ ಶಿಸ್ತುಗಳಿಂದ ಸಮರ್ಥಿಸಲ್ಪಡುತ್ತಿರುವ ವಿಚಾರ.

ಪ್ರಾದೇಶಿಕ, ಭೌಗೋಳಿಕ ವಿಭಿನ್ನತೆಗಳಿಂದಾಗಿ, ದಲಿತರ ಅಖಂಡ ಸಂಸ್ಕೃತಿಯಲ್ಲಿ ವೈವಿಧ್ಯತೆಗಳು ಸೂಕ್ಷ್ಮ ವ್ಯತ್ಯಾಸಗಳಿರುವುದು ಸಹಜ. ಆಯಾ ಪ್ರದೇಶದ ಆರ್ಥಿಕ ಬೆಳವಣಿಗೆಗೆ ಅನುಗುಣವಾಗಿ ಉಂಟಾಗಿರುವ ಸಾಮಾಜಿಕ ಬೆಳವಣಿಗೆಯ ಏರುಪೇರುಗಳನ್ನು ಕೂಡ ಗಮನಿಸಬೇಕಾಗುತ್ತದೆ. ಬೇರೆ ಬೇರೆ ಸಂಸ್ಕೃತಿ ಜನಸಮೂಹಗಳ ಚಾರಿತ್ರಿಕ ಪ್ರಭಾವಗಳು, ದಲಿತ ಸಂಸ್ಕೃತಿಯಲ್ಲಿ ವ್ಯತ್ಯಾಸಗಳಾಗಲು ಕಾರಣವಾಗಿವೆ. ಪ್ರತಿಯೊಂದು ರಾಜ್ಯದ ದಲಿತರ ಬದುಕು ಮತ್ತು ಸಂಸ್ಕೃತಿ ಪರಂಪರೆಗಳ ದಾಖಲೆಯಾಗಬೇಕಾದ ಅಗತ್ಯವಿದೆ. ಈ ವರೆಗೆ ನಡೆದಿರುವ ಕೆಲಸಗಳು ತೃಪ್ತಿಕರವಾಗಿಲ್ಲ.

**ಪ್ರಧಾನ ಸಮಸ್ಯೆ :**

ದಲಿತರ ವಿಮೋಚನೆಗಾಗಿ ಹೋರಾಡುತ್ತ ಬಂದ ವ್ಯಕ್ತಿಗಳು, ಸಂಘಟನೆಗಳು ದಲಿತರ ಸಂಸ್ಕೃತಿ ಪರಂಪರೆಯನ್ನು ಗ್ರಹಿಸಿದ್ದು ಹೇಗೆ? ವಸ್ತು ಸ್ಥಿತಿಯ ದಾಖಲೀಕರಣದ ಬಗ್ಗೆ ಇವು ಕಾಳಜಿ ವಹಿಸಿದವೇ? ದಲಿತ ಸಂಸ್ಕೃತಿ ಇತಿಹಾಸವನ್ನು ಸಿದ್ಧಾಂತ ಮತ್ತು ಹೋರಾಟದಲ್ಲಿ ಬೆಸೆಯಲಾಯಿತೇ?

ದಲಿತರು ಕ್ರೂರ ಹಿಂಸೆಗೆ ಒಳಗಾಗುತ್ತ ಬಂದುದರಿಂದ ಅವರ ವಿಮೋಚನೆಗಾಗಿ, ಪೂರ್ವನಿರ್ಧಾರಿತ ಚಿಂತನೆಗಳಿಂದ, ಅವರ ಮಧ್ಯೆ ಪ್ರವೇಶಿಸಲಾಯಿತೇ ಹೊರತು, ಅವರ ಸಂಸ್ಕೃತಿಯ ಮಧ್ಯದಿಂದ ಕಲಿಯುವ ಪ್ರಯತ್ನ ನಡೆಸಲಾಗಲಿಲ್ಲ. ದಲಿತೇತರರು; ಅವರ ಲಿಖಿತ ಪರಂಪರೆ ಮತ್ತು ಸಿದ್ಧ ಮಾದರಿಯ ಭಾರತೀಯ ಅಧ್ಯಯನಗಳು, ಅಸ್ಪೃಶ್ಯತೆಯ ಕಲಂಕ ಹತ್ತಿದ ನಂತರದ ದಲಿತರ ಬದುಕನ್ನು ಮಾತ್ರ ಗಮನಿಸಿದವು.

ಆಶ್ಚರ್ಯವೆಂದರೆ, ಕೆಲವು ಅಪವಾದಗಳನ್ನು ಹೊರತು ಪಡಿಸಿ ದಲಿತರೂ ಕೂಡ ಈ ಬಗೆಯ ಚಿಂತನೆಯಿಂದ ಹೊರತಾಗಲಿಲ್ಲ.

ಅಸ್ಪೃಶ್ಯರಾಗುವ ಮೊದಲು ದಲಿತರ ಸಂಸ್ಕೃತಿ ಏನಿತ್ತು? ಅಸ್ಪೃಶ್ಯರಾಗಬೇಕಾದ ಸ್ಥಿತಿ ಏಕೆ ಉಂಟಾಯಿತು? ಆನಂತರದ ಅವರ ಬದುಕಿನಲ್ಲಿ ಉಳಿದು ಬಂದ ಚರಿತ್ರೆ ಏನು? ಅವರು ಹೊಸದಾಗಿ ಸಾಧಿಸಿದ್ದೇನು? ಇವೇ ಮೊದಲಾದ ಪ್ರಮುಖ ಪ್ರಶ್ನೆಗಳಿಗೆ ವೈಜ್ಞಾನಿಕವಾದ ಸರ್ವಸಮರ್ಪಕವಾದ ಉತ್ತರ ಸಿಕ್ಕಲೇ ಇಲ್ಲ.

ಸಾಂಪ್ರದಾಯಿಕ ಚರಿತ್ರೆಯ ನಿರ್ಮಾಣಕ್ಕೆ ಬಳಸಲಾದ ಸೂತ್ರಗಳನ್ನೇ ದಲಿತರ ಚರಿತ್ರೆಯ ನಿರ್ಮಾಣಕ್ಕೆ ಬಳಸುವುದಾದರೆ ಎಷ್ಟೊಂದು ಅಡ್ಡಿಗಳುಂಟಾಗುತ್ತವೆಂಬುದು ಸರ್ವವಿದಿತವೇ. ನಿಜ, ಲಿಖಿತ ದಾಖಲೆಗಳಲ್ಲಿ ದಲಿತರ ಬಗ್ಗೆ ಕೆಲವು ಮಾಹಿತಿಗಳು ಲಭ್ಯವಿವೆ. ಆದರೆ ಇವು ದಲಿತ ಸಂಸ್ಕೃತಿಯ ಪ್ರಮುಖವೆನ್ನುವಂಥ ಯಾವ ಅಂಶಗಳನ್ನೂ ನೇರವಾಗಿ ಸೂಚಿಸಲಾರವು. ಇದರಿಂದಾಗಿ ನಿರಾಶೆಯಿಂದ ಕೈಚೆಲ್ಲಿ ಕೂರುವುದು ಅರ್ಥಹೀನ. ಚರಿತ್ರೆಯ ನಿರ್ಮಾಣಕ್ಕೆ ಬೇರೆ ಬೇರೆ ಅಸಂಪ್ರದಾಯಕ ಮೂಲಗಳತ್ತ ಈಗೀಗ ವಿದ್ವಾಂಸರು ಚಲಿಸುತ್ತಿದ್ದಾರೆ. ಉದಾಹರಣೆಗೆ– ಮಾನವ ಕುಲಶಾಸ್ತ್ರ (ಎಥ್ನಾಲಾಜಿ), ಜಾನಪದ (ಫೋಕ್‌ಲೋರ್), ಮಾನವಶಾಸ್ತ್ರ (ಆಂಥ್ರಾಪೊಲೊಜಿ), ಸಮಾಜಶಾಸ್ತ್ರ (ಸೋಶಿಯಲಾಜಿ), ಭಾಷಾಶಾಸ್ತ್ರ (ಲಿಂಗ್ವಿಸ್ಟಿಕ್ಸ್) ಮೊದಲಾದ ಶಿಸ್ತುಗಳ ಉಪಯೋಗ.

ಕರ್ನಾಟಕದ ವಿದ್ವತ್‌ಕ್ಷೇತ್ರದಲ್ಲಿ ಈ ಯಾವ ಶಾಸ್ತ್ರ ಶಿಸ್ತುಗಳು 'ಕನ್ನಡ'ದ ಹುಡುಕಾಟದ ಹಿನ್ನೆಲೆಯಲ್ಲಿ ಪ್ರವೃತ್ತವಾಗದೆ ಇರುವುದರಿಂದ ದಲಿತರ ಚರಿತ್ರೆಯ ಪೂರ್ಣ ಚಿತ್ರ ಮೂಡಿ ಬರಲು ಸಾಧ್ಯವಾಗಿಲ್ಲ.

ದಲಿತರು ಹೆಚ್ಚಾಗಿ ಅನಕ್ಷರಸ್ಥರು. ಅವರ ನಂಬಿಕೆ ಮತ್ತು ಆಚರಣೆಗಳು ದಲಿತ ವಿದ್ವಾಂಸರ ಅವಗಣನೆಗೀಡಾದವು. ಹೋರಾಟಗಾರರಿಗೆ ಅಲ್ಲೆಲ್ಲಾ ಸವರ್ಣೀಯರ ಶೋಷಣೆಯ ವಿವಿಧ ಮುಖಗಳೇ ಕಾಣಿಸಿದವು. ಇಂಥ ಪರಿಸ್ಥಿತಿಯಲ್ಲಿ "ಸಿಂದ್ ಮಾದಿಗರ ಸಂಸ್ಕೃತಿ" (ಕೆ.ರಾಮಯ್ಯ), 'ಮಾಸ್ತಿಕರ ಸಂಸ್ಕೃತಿ' (ಲಕ್ಷ್ಮೀಪತಿ.ಕೆ)ಯಂಥ ಕೆಲವು ಬರಹಗಳು ಅಪವಾದದಂತೆ ಕಂಗೊಳಿಸುತ್ತಿವೆ.

ದಲಿತರು ಅನುಭವಿಸುತ್ತಿರುವ ನೋವು, ಹಿಂಸೆ, ಅಪಮಾನ, ಬಡತನ, ದಾರಿದ್ರ್ಯಗಳು ಭೀಕರವಾಗಿರುವುದಕ್ಕೂ, ಅವರ ಆದಿಮ ಸಮೃದ್ಧ ಸಂಸ್ಕೃತಿಗೂ ಯಾವ ಸಂಬಂಧವೂ ಕಾಣಬರುವುದಿಲ್ಲವಾದ್ದರಿಂದ ದಲಿತ ಸಿದ್ಧಾಂತ, ಸಂಘಟನೆ, ಹೋರಾಟದ ಸಂದರ್ಭದಲ್ಲಾದ

ಸಮಸ್ಯೆಗಳು ಸಾಮಾನ್ಯವಾದುವಲ್ಲ. ತಾತ್ತ್ವಿಕವಾಗಿ ಬುದ್ಧ, ಬಸವ, ಗಾಂಧಿಗಳನ್ನು ಹೆಸರಿಸಲಾಗುತ್ತಿದ್ದರೂ ಅಂಬೇಡಕರ ಅವರ ಪ್ರಭಾವ ಹೆಚ್ಚಾಯಿತು. ಅವರ ಚಿಂತನೆಯ ಕೆಚ್ಚು ಹೆಚ್ಚು ಗಟ್ಟಿಕೊಳ್ಳುತ್ತಿದೆ; ಸಬಲೀಕರಣಗೊಳ್ಳುತ್ತಿದೆ. “ದಲಿತ ಎಂಬುದು ಇವತ್ತಿನ ಸಂದರ್ಭದಲ್ಲಿ ಕೆಳಜಾತಿಗಳ ಅರಿವಿನ ವಿಕಾಸವನ್ನೂ ಹಕ್ಕೊತ್ತಾಯದ ದನಿಯನ್ನು, ಸಕಾರಾತ್ಮಕವಾದ, ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ಮಾನವೀಯ ಒಪ್ಪಂದಗಳನ್ನು ನಿರೂಪಿಸುವ ಸಂಕಥನಗಳ ಸಂಕೇತ”ವಾಗಿದೆ. (ಮೊಗಳ್ಳಿ ಗಣೇಶ: ‘ದಲಿತರು ಮತ್ತು ಜಾಗತೀಕರಣ’. ಪು.೨೪)

ಅಂಬೇಡಕರ ಅವರ ಕಾಲ, ಜೀವನಸ್ಥಿತಿ, ಅವರ ಅಧ್ಯಯನಶೀಲ ಪ್ರವೃತ್ತಿಗೂ ಸವಾಲಾಗಿತ್ತು. ಆಗಿನ್ನೂ ಹಲವು ಕ್ಷೇತ್ರಗಳಲ್ಲಿ ಶೋಧನೆಗಳೇ ಪ್ರಾರಂಭವಾಗಿರಲಿಲ್ಲ. ಹೀಗಾಗಿ ಅಂಬೇಡಕರ ಅವರಿಂದ ದಲಿತರ ಸಮಗ್ರ ಚರಿತ್ರೆಯನ್ನು ನಿರೀಕ್ಷಿಸುವುದು ತಪ್ಪಾಗುತ್ತದೆ. ಅವರು ಸವೆಸಿದ ದಾರಿ ಕಡಿಮೆಯೇನಿರಲಿಲ್ಲ. ಆದರೆ ಅವರು ನಿಂತಲ್ಲಿಂದ ಮುಂದೆ ಸಾಗಬೇಕಿದೆ. ರಾಷ್ಟ್ರೀಯ ವಿಮೋಚನಾ ಚಳುವಳಿಯ ಸಂದರ್ಭದಲ್ಲಿ ಅಂಬೇಡಕರ ಅವರು ಹುಟ್ಟದೆ ಇದ್ದಿದ್ದರೆ ಭಾರತ ದಲಿತರನ್ನು ಕೇಳುವವರು ಯಾರೂ ಇರುತ್ತಿರಲಿಲ್ಲ. ಭಾರತದ ದಲಿತರ, ಬಡವರ ಕ್ರಾಂತಿಕರಿ ಚಿಂತನೆಯನ್ನು ಸಮೃದ್ಧವಾಗಿಸಿದವರು ಡಾ. ಬಾಬಾಸಾಹೇಬ. ಪ್ರಮುಖವಾಗಿ ವೈದಿಕವಾಙ್ಮಯದಲ್ಲಿರುವ ದಲಿತರ ಬವಣೆಯ ಚಿತ್ರಣವನ್ನು ಅವರಷ್ಟು ಸರ್ವಸಮರ್ಥವಾಗಿ ಕಟ್ಟಿಕೊಟ್ಟವರು ಬೇರಾರೂ ಇಲ್ಲ. ದಲಿತವಾದದ ಆಧುನಿಕ ಸ್ವರೂಪ ಅವರ ಬರಹಗಳಿಂದಲೇ ಬಹಳಷ್ಟು ಆಕಾರ ಪಡೆದಿದೆ.

**ಸಂಸ್ಕೃತಿ :**

ತನ್ನ ಅಗತ್ಯಗಳನ್ನು ಪೂರೈಸಿಕೊಳ್ಳಲು ಪ್ರಕೃತಿಯ ಜೊತೆ ಒಡನಾಡಿದ ಫಲವಾಗಿ, ಉಳಿದೆಲ್ಲ ಪ್ರಾಣಿಗಳಿಗಿಂತ ಮಾನವ, ಭಿನ್ನ ನೆಲೆಯಲ್ಲಿ ನಾಗರಿಕತೆಯನ್ನು ಸಾಧಿಸುತ್ತ ಬಂದ. ಉತ್ಪಾದನೆ ಮತ್ತು ವಿತರಣೆಯ ಪ್ರಕ್ರಿಯೆಯಲ್ಲಿ ತನ್ನ ನಡುವೆ ಸಾಮಾಜಿಕಾರ್ಥಿಕ ಸಂಬಂಧಗಳನ್ನು ಹೊಂದಿದ. ಈ ಅಡಿಪಾಯದ ಮೇಲೆ ಕಲೆ, ವಿಜ್ಞಾನ, ಧರ್ಮ, ಕಾಯಿದೆ ಕಾನೂನು, ರಾಜ್ಯ ವ್ಯವಸ್ಥೆ ಮೊದಲಾದ ಮೇಲ್ ರಚನಾಂಶಗಳು ಬೆಳೆದವು. ಇವನ್ನು ತಮ್ಮ ತಮ್ಮ ವರ್ಗ ಸಮರ್ಥನೆಗೆ ವಿವಿಧ ಜನಸಮುದಾಯಗಳು ಬಳಸಿಕೊಂಡವು. ಭಾರತದ ಜಾತಿ ವ್ಯವಸ್ಥೆ ಅಡಿಪಾಯಾತ್ಮಕ ಘಟಕವೂ ಆಗಿರುವುದರಿಂದ, ಸಾಂಸ್ಕೃತಿಕ ಮೇಲ್‌ರಚನೆಯ ಜೊತೆ ಗಾಢವಾದ ಒಳಸಂಬಂಧ ಹೊಂದಿತು.

ಬುಡಕಟ್ಟುಗಳು ಜಾತಿಗಳಾದ ನಂತರವೂ ದಲಿತರ ಭೂಮಿ ಸಂಬಂಧ ತಪ್ಪಲಿಲ್ಲ. ಮಾಲಿಕತ್ವ ಮಾತ್ರ ತಪ್ಪಿತು. ಇದರಿಂದಾಗಿ 'ದಲಿತ ಸಂಸ್ಕೃತಿ'ಯ ಮಾತೃ ಪಂಥೀಯ, ತಾಂತ್ರಿಕ ಪಂಥೀಯ, ಶಾಕ್ತ ಪಂಥೀಯ, ಹಳ್ಳಿ ಕೃಷಿ ಸಂಬಂಧಿ ಸಾಂಸ್ಕೃತಿಕ ಮೌಲ್ಯಗಳು ಭಾರತದ ಒಡಲೊಳಗೆ ಜೀವಧಾರೆಯಾಗಿ ಹಾಲೂಡುತ್ತಲೇ ಬಂದವು. ಆದರೆ ಮೇಲ್ಜಾತಿ, ಮೇಲ್ವರ್ಗದ ಲಿಖಿತ ಪರಂಪರೆ, ಧರ್ಮ, ದೇಗುಲ ವಿಜ್ಞಾನ ಕಲೆಗಳಂಥ ಸಾಂಸ್ಕೃತಿಕಾಂಶಗಳು ಢಾಳಾಗಿ ಕಂಡದ್ದರಿಂದ ಇದೇ ಭಾರತೀಯ ಸಂಸ್ಕೃತಿ ಎಂದು ಹೇಳುತ್ತ ಬರಲಾಗಿದೆ. ಇದು ಪೂರ್ಣ ಸತ್ಯವಲ್ಲ.

ಸಿಂಧೂ ನಾಗರಿಕತೆಯಿಂದ ಮೊದಲು ಮಾಡಿಕೊಂಡು ಈ ವರೆಗೂ ಭಾರತೀಯ ದಲಿತರ ಶ್ರಮ ಸಾಧನೆಯ ಅಗಾಧತೆಯನ್ನು, ಮಾನವಕುಲ ವಿವರಣ ಶಾಸ್ತ್ರೀಯ, ಮಾನವ ಶಾಸ್ತ್ರೀಯ, ಜಾನಪದೀಯ, ಪ್ರಾಚ್ಯ ಶಾಸ್ತ್ರೀಯ ಶಿಸ್ತುಗಳಿಂದ ಪ್ರವೇಶಿಸಿ ಅವರ ಸಾಂಸ್ಕೃತಿಕ ಸಾಧನೆಯ ಹಿರಿಮೆಯನ್ನು ಎತ್ತಿ ತೋರಿಸಬೇಕಿದೆ. ಒಂದು ರೀತಿಯಿಂದ ಇದು ನಮಗಿರುವ ಇತಿಮಿತಿ. ಆದರೆ ಇದು ಕಡಿಮೆ ಮಹತ್ವದ್ದು ಎಂಬ ಭಾವನೆ ಸಲ್ಲದು. ತೆಗೆದು ಹಾಕಲಾಗದಂಥ ಗಟ್ಟಿ ಊಹೆಗಳನ್ನು ಮಾಡಲು ಬೇಕಾದ ಮಾಹಿತಿಗಳು ಸಮೃದ್ಧವಾಗಿವೆ. ಈ ಜೀವಂತ ನಿದರ್ಶನಗಳು ನಮ್ಮನ್ನು ಬರಿ ಊಹೆಯ ಮಟ್ಟಕ್ಕೆ ನಿಲ್ಲಿಸಲಾರವು. ಮರೆತು ಹೋದ ಇಲ್ಲವೇ ಕಳೆದು ಹೋದ ದಲಿತರ ಅತ್ಯಂತ ಘನವಾದ ಸಾಂಸ್ಕೃತಿಕ ಸನ್ನಿವೇಶಕ್ಕೆ ತಲುಪಿಸುತ್ತವೆ.

ಚರಿತ್ರೆಯುದ್ದಕ್ಕೂ ಕೀಳುಜನ, ಹೀನರು, ಅಸ್ಪೃಶ್ಯರು ಎಂಬ ಅನವಶ್ಯಕ ಅವಹೇಳನಕ್ಕೆ ತುತ್ತಾಗಿ, ಅಪಮಾನದಿಂದ ಬೇಯುತ್ತಿರುವ ಜನಕುಲವು, ಎದೆಯುಬ್ಬಿಸಿ ಸವರ್ಣೀಯರ ಮುಖಕ್ಕೆ ಹೊಡೆದು ಹೇಳುವಂಥ ಅದ್ಭುತ ಸಂಸ್ಕೃತಿ ಪರಂಪರೆಯನ್ನು ಹೊಂದಿರುವುದು ಎಂಥ ಸಂಭ್ರಮವನ್ನುಂಟು ಮಾಡಲಾರದು? ಅದು ದಲಿತರ ವಿಮೋಚನೆಯ ತತ್ತ್ವಕ್ಕೆ ಸಮರ್ಥ ಅಡಿಪಾಯವನ್ನು ಒದಗಿಸುತ್ತದೆ. ಸ್ವಾಭಿಮಾನದಿಂದ ತಲೆ ಎತ್ತಲು ನ್ಯಾಯಯುತ ಸಮರ್ಥನೆಯನ್ನು ನೀಡುತ್ತದೆ. ದಲಿತೇತರರ ಈವರೆಗಿನ ಅಪರಾಧಕ್ಕೆ, ಪಾಪ ಕೃತ್ಯಗಳಿಗೆ ತಕ್ಕ ಪಾಠವನ್ನು ಕಲಿಸುತ್ತದೆ. ಅತ್ಯಂತ ಕೆಳಗೆ ತುಳಿಯಲ್ಪಟ್ಟವರೇ ಹಿಂದೊಂದು ಕಾಲದಲ್ಲಿ ಅತ್ಯಂತ ಉನ್ನತಮಟ್ಟದಲ್ಲಿದ್ದು ಆಗಿನೆಲ್ಲ ಜನ ಕುಲಗಳಿಗೆ ವಿವಿಧ ಬಗೆಯ ಜ್ಞಾನವನ್ನು ನೀಡಿದವರೆಂದು ಸಾಬೀತು ಮಾಡುತ್ತದೆ.

ತಾವು ಭಾರತ ದೇಶದಲ್ಲಿಯೇ ಸರ್ವೋತ್ಕೃಷ್ಟ ಪರಂಪರೆಯವರೆಂದು ಹೇಳಿಕೊಳ್ಳುವ ಬ್ರಾಹ್ಮಣರಿಗೇ ಜ್ಞಾನದ ಮತ್ತೊಂದು ಮಾನವೀಯ ಮುಖವನ್ನು ದಯಪಾಲಿಸಿದವರು ದಲಿತರು ಎಂದು ಪ್ರತಿಪಾದನೆ ಮಾಡಲು ಸಾಧ್ಯವಿರುವುದರಿಂದ ಈವರೆಗಿನ ಚರಿತ್ರೆಯೆ ಬುಡಮೇಲಾಗಬೇಕಾಗುತ್ತದೆ. ಇದರಿಂದ 'ಬೀಮಯುಗ'ವೆಂದು ಯಾವುದನ್ನು ಕರೆಯಲಿಚ್ಚಿಸುತ್ತೇವೊ ಅದಕ್ಕೆ ತಕ್ಕನಾದ ತಾತ್ವಿಕ ಸಮರ್ಥನೆ ದೊರಕಿದಂತಾಗುತ್ತದೆ.

**ಹಲವು ಪ್ರಶ್ನೆಗಳು :**

ಭಾರತದ ಚರಿತ್ರೆಯ ಲೇಖಕರು ಸಿಂಧೂನಾಗರೀಕತೆಯ ಬಗ್ಗೆ ವಿವೇಚಿಸುವುದೇನೋ ನಿಜ. ಆದರೆ ಅಲ್ಲಿದ್ದ ಜನಕುಲಗಳಾವುವು? ಅವು ಈಗಲೂ ಇವೆಯೆ? ಸಿಂಧೂ ನಾಗರಿಕತೆ ಮತ್ತು ಸಂಸ್ಕೃತಿ ಪರಂಪರೆ ಇಂದಿಗೂ ಮುಂದುವರೆದಿದ್ದರೆ ಚರಿತ್ರೆಯಲ್ಲಿ ಹೊಂದುಗಡಿಯದಂತೆ ಇದರ ನಿರೂಪಣೆ ಏಕೆ ಬರಲಿಲ್ಲ? ಸಿಂಧು ನಾಗರಿಕತೆ ಆಕಸ್ಮಿಕ ಘಟನೆಯಲ್ಲ, ಅದು ಹುಟ್ಟಿ ಬೆಳೆದಷ್ಟೇ ತೀವ್ರವಾಗಿ ನಾಶಹೊಂದಲಿಲ್ಲ. ಹರಪ್ಪ, ಮೊಹೆಂಜೊದಾರೊದಂಥ ಕೆಲವು ನಗರಗಳು ನಾಶವಾದವು ನಿಜ. ಆದರೆ ಈ ನಗರಗಳ ಜನ, ಇವನ್ನು ಬೆಳೆಸಿದ ಹಿನ್ನೆಲೆ ನಾಡಿನ ಜನ ಎಲ್ಲ ಎಲ್ಲಿ ಹೋದರು? ಆರ್ಯ ವೈದಿಕರ ಜತೆ ಅವರು ಬೆರೆತಿದ್ದರೆ ಈಗಲೂ ಅವರ ಪೀಳಿಗೆ ಅಸ್ತಿತ್ವದಲ್ಲಿರಬೇಕಲ್ಲ? ಋಗ್ವೇದ ಕಾಲದ ಆರ್ಯವೈದಿಕರ ಸಂಸ್ಕೃತಿಗೂ, ಉಪನಿಷತ್ ಕಾಲದ ವೈದಿಕರ ಸಂಸ್ಕೃತಿಗೂ ತುಂಬ ಅಂತರವಿದೆ ಎನ್ನುವ ವಿದ್ವಾಂಸರು ಅದಕ್ಕೆ ಏನು ಕಾರಣವೆಂದು ಯಾಕೆ ಯೋಚಿಸಲಿಲ್ಲ? ಪ್ರಗತಿಯನ್ನು ಸಾಧಿಸಿದ ವೈದಿಕರಿಗೆ ಮೂಲ ಪ್ರೇರಣೆ ಬಂದುದೆಲ್ಲಿಂದ? ಇವರ 'ಶ್ರೇಷ್ಠ' ಸಂಸ್ಕೃತಿಯ ಒಳಗಿರುವ ಹೂರಣ ಯಾರದು? ಅದರಲ್ಲಿ ಟೊಳ್ಳೆಷ್ಟು, ಗಟ್ಟಿ ಎಷ್ಟು? ಇಂಥ ಪ್ರಶ್ನೆಗಳನ್ನು ಕೇಳಿಕೊಳ್ಳಲಿಲ್ಲ.

ಇವಾವೂ ಉತ್ತರವೇ ಇಲ್ಲದ ಪ್ರಶ್ನೆಗಳೇನಲ್ಲ. ಆದರೆ ಉತ್ತರವನ್ನು ಪಡೆಯಲು ನಡೆದ ಪ್ರಾಮಾಣಿಕ ಪ್ರಯತ್ನಗಳೆಲ್ಲಿವೆ? 'ದ್ರಾವಿಡವಾದ'ವನ್ನು ಚರಿತ್ರಕಾರರೆಲ್ಲ ಕಡೆಗಣಿಸಿದವರೇ. ಅಂದರೆ ಭಾರತದ ಚರಿತ್ರೆಯ ಬರಹಗಳಲ್ಲಿ ಸಿಂಧೂ ಸಂಸ್ಕೃತಿ ಪರಂಪರೆಯನ್ನು ಸಮರ್ಥವಾಗಿ ಮುಂದುವರೆಸಿಕೊಂಡು ಹೋದ ದಕ್ಷಿಣ ಭಾರತ ಅವಗಣನೆಗೀಡಾದದ್ದೇ ಹೆಚ್ಚು. ದ್ರಾವಿಡ ಮೂಲದ ಚರಿತ್ರೆಗೂ, ದಲಿತರ ಚರಿತ್ರೆಗೂ ನಿಕಟ ಸಂಬಂಧವಿರುವುದರಿಂದ ಈ ಮಾತನ್ನು ಒತ್ತಿ ಹೇಳಬೇಕಿದೆ.

ಈ ವರೆಗೆ ನಡೆದಿರುವ ಪ್ರಯತ್ನಗಳ ಹಿನ್ನೆಲೆಯಲ್ಲ. ಹೆಚ್ಚಿನದೇನನ್ನಾದರೂ ಹೇಳಲು ನಮಗೆ ಸಾಧ್ಯವಿದಯೇ?

ಇದೆ.

ಈ ವಿಷಯದಲ್ಲಿ, ಆರ್.ಎಸ್.ಶರ್ಮಾ, ಡಿ.ಡಿ.ಕೋಸಾಂಬಿ, ರೋಮಿಲಾಥಾಪರ್, ದೇವಿಪ್ರಸಾದ ಚಟೋಪಾಧ್ಯಾಯ ಮೊದಲಾದವರಿಂದ ನಮಗೆ ಹೆಚ್ಚಿನ ನೆರವು ದೊರಕುತ್ತದೆ. ಅವರು ಉತ್ತರಗಳಿಗೆ ಸಾಕಷ್ಟು ಸಮೀಪ ಬರುತ್ತಾರೆ. ಆದರೆ ಮತ್ತೆಲ್ಲೋ ನಿಂತು ಬಿಡುತ್ತಾರೆ.

**ದಲಿತಾಧ್ಯಯನ :**

ಇಂದು ಸ್ತ್ರೀವಾದಿ ಚಿಂತನೆ ಗಣನೀಯವಾಗಿ ಬೆಳೆದಿರುವಂತೆ, ದಲಿತವಾದಿ ಚಿಂತನೆ ಬೆಳೆಯಬೇಕಾದ ಅವಶ್ಯಕತೆ ಇದೆ. 'ದಲಿತವಾದ'ವು ಸಮಾಜ ವಿಜ್ಞಾನಗಳ ಬೆಂಬಲದಿಂದ ವೈಜ್ಞಾನಿಕವಾಗಿ ರೂಪುಗೊಳ್ಳಬೇಕು. ವರ್ಗ ಸಮಾಜ ಮಹಿಳೆಯರನ್ನು ಶೋಷಿಸಿದಂತೆ, ಜಾತಿ ಸಮಾಜ ದಲಿತರನ್ನು ಶೋಷಿಸಿದೆ. ಜಾತಿಯಲ್ಲಿ ವರ್ಗವೂ ಬೆರೆತಿದ್ದುದರಿಂದ ಎರಡು ಬಾಯಿ ಕತ್ತಿಯಂತೆ ಅದು ದಲಿತರನ್ನು ಹೆರಚಿದೆ. ಸವರ್ಣೀಯರಿಗೆ ದಲಿತರು ಉತ್ಪಾದಿಸಿದ ವಸ್ತುಗಳು ಮೈಲಿಗೆಯಾಗಲಿಲ್ಲ ಆದರೆ ಉತ್ಪಾದಕರನ್ನು ಅಸ್ಪೃಶ್ಯರನ್ನಾಗಿಸಿದ ಈ ನೀಚತನ ಚಾರಿತ್ರಿಕ ವ್ಯಂಗ್ಯ.

ದಲಿತರ ಆದಿಮ ಸಂಸ್ಕೃತಿಯ ಅಪಾರ ಕೊಡುಗೆಯ ಕಲ್ಪನೆಯಿದ್ದಿದ್ದರೆ ಚರಿತ್ರೆಯಲ್ಲಿ ಈ ಅಪರಾಧ ನಡೆಯುತ್ತಿರಲಿಲ್ಲವೇನೋ. ದಲಿತರಿಗೆ ಕೃತಜ್ಞರಾಗಬೇಕಿದ್ದವರೇ, ಅವರನ್ನು ಅಮಾನವೀಯವಾಗಿ ದಮನಿಸಿದ್ದು ಜಾಗತಿಕ ಶೋಷಿತರ ಇತಿಹಾಸದ ಅತ್ಯಂತ ಭೀಕರ ಅಧ್ಯಾಯವಾಯಿತು.

ದಲಿತರ ಸಮಗ್ರವಾದ ಚರಿತ್ರೆಯ ನಿರ್ಮಾಣಕ್ಕೆ ದಲಿತವಾದಿ ದೃಷ್ಟಿಕೋನದ ಅಗತ್ಯವಿದೆ. ದಲಿತ ವಿಮೋಚನೆ ಭಾರತದ ಎಲ್ಲ ಶೋಷಿತ ವರ್ಗಗಳ ವಿಮೋಚನೆಯನ್ನು ಒಳಗೊಳ್ಳುತ್ತದೆ. ಹಾಗಾಗಿ ದಲಿತ ಕ್ರಾಂತಿ ಭಾರತದ ಕ್ರಾಂತಿಯ ಒಳಗುಟ್ಟಾಗಿದೆ. ಇಲ್ಲಿ ಸಮತಾವಾದಿ ದೃಷ್ಟಿಕೋನವಷ್ಟೇ ಕ್ರಾಂತಿಕಾರಿ ಸಿದ್ಧಾಂತವಾಗಿ ನೆರವಿಗೆ ಬರಲಾರದು. ಅದರ ಜತೆ ದಲಿತವಾದಿ, ಸ್ತ್ರೀವಾದಿ ನೆಲೆಗಳೂ ಬೆಸೆದುಕೊಳ್ಳಬೇಕು. ಬ್ರಾಹ್ಮಣರಾದಿಯಾಗಿ ಯಾವ ಜಾತಿ ಕೋಮಿನವರೂ ಮಾರ್ಕ್ಸವಾದಿಯಾಗಬಲ್ಲರು ಆದರೆ ದಲಿತವಾದಿಯಾಗುವುದು ಸುಲಭವಲ್ಲ. ವರ್ಗ ಹೋರಾಟದ ಜೊತೆ ಧರ್ಮ–ಜಾತಿ ಹೋರಾಟವೂ ಬೆಸೆದುಕೊಳ್ಳದಿದ್ದರೆ ಭಾರತದ ಸಮಾಜವಾದಿ ಕ್ರಾಂತಿ ಸಫಲವಾಗದು.

ದಲಿತ ಸಂಸ್ಕೃತಿಯ ವಿವೇಚನೆ, ದಲಿತ ವಿಮೋಚನೆಯ ಅನಿವಾರ್ಯ ಭಾಗವಾಗಿ ಬೆಳೆದು ಬರುತ್ತದೆ ಎಂಬ ಆಶಯವಿರುವುದರಿಂದ ಈ ಮಾತುಗಳನ್ನು ಹೇಳಲೇಬೇಕಾಗುತ್ತದೆ. ಮೊಗಳ್ಳಿ ಗಣೇಶ ಅವರು "ದಲಿತತ್ವ ಎನ್ನುವುದು ಒಂದು ಬಿಡುಗಡೆಯ ಪ್ರಕ್ರಿಯೆಯ, ಅಂತರಂಗದ ಸಾಕ್ಷೀ ಪ್ರಜ್ಞೆಯ, ಒಳದನಿಯಾಗಿ, ಸಮುದಾಯಗಳ ಸಾಂಸ್ಕೃತಿಕ ಪುನರ್‌ರಚನೆಯಾಗಿ, ಪರಿಶೀಲನೆಯಾಗಿ, ಆಧುನಿಕತೆಯ ಜತೆ ಮುಖಾಮುಖಿಯಾಗುವ ಸ್ಥಿತಿ" ಎಂದು ಹೇಳುವುದನ್ನು ಗಮನಿಸಿ. (ಪೂರ್ವೋಕ್ತ ಪು. ೩೨)

**ಚರಿತ್ರೆಯ ರಚನೆಯಲ್ಲಿ ನಡೆದಿರುವ ಮೋಸ :**

ಭಾರತದ ಚರಿತ್ರೆಯ ರಚಯಿತರಲ್ಲಿ ವೈಜ್ಞಾನಿಕ ಖಾಚಿತ್ಯ ಕಂಡುಬರುವುದು ಎಡವಾದಿ ಇತಿಹಾಸಕಾರರಲ್ಲಿಯೇ. ಸಾಂಪ್ರದಾಯಿಕ ಇತಿಹಾಸಕಾರರಲ್ಲಿ ನಮಗೆ ವಿಫುಲವಾದ ಮಾಹಿತಿಯಷ್ಟೇ ದೊರಕಿತು. ಅದನ್ನು ಬಳಸಿಕೊಂಡು 'ನಿಜವಾದ ಚರಿತ್ರೆ'ಯನ್ನು ಪುನರ್‌ನಿರ್ಮಾಣ ಮಾಡಿಕೊಳ್ಳಬೇಕಾಗುತ್ತದೆ.

ಎಡವಾದಿ ಚಿಂತಕರಲ್ಲೇ ಯಾರಲ್ಲೂ ದಲಿತವಾದಿ ದೃಷ್ಟಿಕೋನ ಕಂಡುಬರುವುದಿಲ್ಲ. ಹೀಗಾಗಿ ಎಷ್ಟೋ ಮಹತ್ವದ ಪುಟಗಳ ಬರಹಕ್ಕೆ ಅವರು ಎರವಾದರು. ಎಷ್ಟೋ ಕಡೆ ಗ್ಯಾಪ್‌ಗಳನ್ನುಳಿಸಿದರು ಅಥವಾ 'ವ್ಯಾಕ್ಯುಂ' ಸೃಷ್ಟಿಸಿದರು. ದ್ರಾವಿಡ ಚಿಂತನೆ, ದಲಿತ ಚಿಂತನೆ ಮಾತ್ರ ಈ ಕೊರತೆಯನ್ನು ನೀಗಿಸಬಲ್ಲವು.

ಕೆಲವು ನಿದರ್ಶನಗಳ ಮೂಲಕ ಈ ಸಂಗತಿಗಳನ್ನು ಖಚಿತ ಪಡಿಸಿಕೊಳ್ಳಬಹುದು.

ಮೊಟ್ಟಮೊದಲ ಸಿಂಧೂ ನಾಗರಿಕತೆಗೆ ಕಾರಣವಾದ ಜನಕುಲಗಳು ಯಾವುವು ಎಂಬ ಪ್ರಶ್ನೆ.

ಜಗತ್ತಿನ ಯಾವ ಪ್ರಾಚೀನ ನಾಗರಿಕತೆಗಳಿಗಿಂತ ಭಾರತದ ಸಿಂಧೂ ನಾಗರಿಕತೆಗೆ ಇರುವ ಒಂದು ವೈಶಿಷ್ಟ್ಯವನ್ನು ಗುರುತಿಸಲಾಗುತ್ತದೆ. ಅದೆಂದರೆ–ಭಾರತದಲ್ಲಿ ಮಾತ್ರ ತುಂಬ ಪ್ರಾಚೀನ ಕಾಲದಿಂದ ಸಂಸ್ಕೃತಿ ಪರಂಪರೆ ಹೊಂದುಗಡಿಯದಂತೆ ಪರಿಷ್ಕರಣಗೊಂಡಾದರೂ ಉಳಿದುಬಂದಿದೆ. ಹಾಗಿದ್ದರೆ ಸಿಂಧೂ ನಾಗರಿಕರು ಯಾರೆಂಬುದನ್ನು ಗುರುತಿಸಲು ಇಂದಿನ ದ್ರಾವಿಡ ಜನ ಕುಲಗಳ ಅಧ್ಯಯನದಿಂದ ಸಾಧ್ಯವಾಗುತ್ತದೆಯೇ?

ವೃತ್ತಿಗಳ ಆಧಾರದಿಂದ ಸಿಂಧೂ ನಾಗರಿಕರಲ್ಲಿ ಮುಖ್ಯವಾಗಿ ಕೃಷಿಕರು, ವ್ಯಾಪಾರಸ್ಥರು, ಪುರೋಹಿತರು, ಸಂಗೀತ, ನೃತ್ಯ ಮೊದಲಾದ ಕಲಾವಿದರು, ತಂತ್ರಜ್ಞರು, ಲಿಪಿಕಾರರು, ಕುಂಬಾರರು, ಇಟ್ಟಂಗಿ ಮಾಡುವವರು, ಬಡಗಿಗಳು, ನೇಕಾರರು, ಮನೆ ಕಟ್ಟುವವರು, ವಿವಿಧ ಧಾತು ಕೆಲಸಗಾರರು, ಕೂಲಿಕಾರರು, ಪಶುಪಾಲಕರು ಇದ್ದರೆಂಬುದನ್ನು ಗುರುತಿಸಲಾಗಿದೆ.

ಬೇಸಾಯಗಾರ ಹಳ್ಳಿಗಳ ಹಿನ್ನೆಲೆ ನಾಡನ್ನು ('ಹಿಂಟರ್‌ಲ್ಯಾಂಡ್') ಅವಲಂಬಿಸಿ ಹರಪ್ಪ, ಮೊಹೆಂಜೊದಾರೊ ಮೊದಲಾದ ನಗರಗಳಿದ್ದವು. ಆಲ್ಚಿನ್, ಡಿ.ಕೆ. ಚಕ್ರವರ್ತಿ, ಪಾಂಡೆ, ಘೋಷ್, ಮಾರ್ಷಲ್ ಮೊದಲಾದ (ನಗರಗಳಿದ್ದವು.) ಅನೇಕ ವಿದ್ವಾಂಸರು ಈ ನಾಗರಿಕತೆಯ ವಿವರಗಳನ್ನು ಒದಗಿಸಿದ್ದಾರೆ. ೫ ಲಕ್ಷ ಚದುರು ಮೈಲುಗಳಷ್ಟು ವಿಸ್ತಾರವಾದ ಪ್ರದೇಶದಲ್ಲಿ ಸಿಂಧೂ ನಾಗರಿಕ ಜನಸಮುದಾಯಗಳು ಹರಡಿದ್ದವು. ಆ ಕಾಲದ ಜಗತ್ತಿನ ಯಾವ ಪ್ರಾಚೀನ ನಾಗರಿಕತೆಗಿಂತಲೂ ಇದು ದೊಡ್ಡದಾಗಿತ್ತು.

ಮೊಹೆಂಜೋದಾರೋ ಒಂದೇ ನಗರದ ಜನಸಂಖ್ಯೆ ಸುಮಾರು ಐವತ್ತು ಸಾವಿರದಷ್ಟಿತ್ತು. ಗೋರ್ಡೊನ್ ಚೈಲ್ಡೆ ಅವರ ವಿಚಾರದ ಆಧಾರದಲ್ಲಿ ದೇವಿ ಪ್ರಸಾದ ಚಟೋಪಾಧ್ಯಾಯ ಅವರು ಹರಪ್ಪ ಮೊಹೆಂಜೋದಾರೋ ನಗರಗಳಿಗೆ ಹಿನ್ನೆಲೆ ನಾಡಿನ ಗ್ರಾಮೀಣ ಭಾಗದಿಂದ 'ಅಧಿಕ ಉತ್ಪನ್ನ'ವು (ಸರ್‌ಪ್ಲಸ್ ಪ್ರೊಡಕ್ಷನ್) ಧಾರ್ಮಿಕ ಮೂಢನಂಬಿಕೆ ಉಂಟು ಮಾಡಿದ ಭಯದಿಂದ ಹರಿದು ಬರುತ್ತಿತ್ತೆಂದೂ, ಪ್ರಬಲವಾದ ರಾಜ್ಯಾಡಳಿತವಿರಲಿಲ್ಲವೆಂದೂ ಹೇಳುತ್ತಾರೆ. ಕಬ್ಬಿಣ, ರಥ, ಕುದುರೆಗಳು ಈ ಜನಕ್ಕೆ ಗೊತ್ತಿರಲಿಲ್ಲ. ಬಲವಾದ ಅಸ್ತ್ರ, ಶಸ್ತ್ರ, ಸೈನ್ಯಗಳ ಕೊರತೆಯಿಂದಾಗಿ ಅವರು ಇವೆಲ್ಲ ಬಳಸುತ್ತಿದ್ದ, ಆದರೆ ಇವರಿಗಿಂತ ಅನಾಗರಿಕರಾಗಿದ್ದ ಆರ್ಯ ವೈದಿಕರಿಂದ ನಾಶಹೊಂದಿದರು. ನದಿಯ

ಮಹಾಪೂರದಿಂದಲೋ, ವಿದೇಶಿ ವ್ಯಾಪಾರದ ನಷ್ಟದಿಂದಲೋ, ಸಾಂಕ್ರಾಮಿಕ ರೋಗಗಳಿಂದಲೋ, ಹೇಗೋ ಒಟ್ಟಾರೆ ಈ ನಗರಗಳು ನಾಶವಾಗಿರಬೇಕೆಂದು ನಿರ್ದಿಷ್ಟವಾಗಿ ಹೇಳಲಾಗದೆ ವಿದ್ವಾಂಸರು ಗೊಂದಲಗೊಳ್ಳುತ್ತಾರೆ. ಸುಮಾರು ೫೦೦ ವರ್ಷಗಳವರೆಗೆ ವಿಜ್ರಂಭಿಸಿದ ಸಿಂಧೂ ನಾಗರಿಕತೆ ನಿಧಾನವಾಗಿ ಹಾಳಾಗಿ ಕೊನೆ ಕೊನೆಗೆ ಕೊಳೆಗೇರಿಯಂತಾಯಿತು (ನೋಡಿ: 'ರಿಲಿಜನ್ ಎಂಡ್ ಸೊಸೈಟಿ': ದೇವಿಪ್ರಸಾದ ಚಟೋಪಾಧ್ಯಾಯ ೧೯೮೭)

ಹೀಗೆ ಹೇಳುವ ವಿದ್ವಾಂಸರು ಕೆಲವು ಮುಖ್ಯ ಸಂಗತಿಗಳನ್ನೇ ಮರೆಯುತ್ತಾರೆ. ಹರಪ್ಪ ಮೊಹೆಂಜೋದಾರೊದಂಥ ನಗರಗಳು ನಾಶವಾಗಿರಬಹುದು, ಆದರೆ ೫ ಲಕ್ಷ ಚದುರು ಮೈಲಿ ಪ್ರದೇಶದ ಈ ನಾಗರಿಕತೆಯ ಜನಕುಲಗಳೆಲ್ಲಿ ಹೋದವು? ದಂಡಿಯಾಗಿ ದಾಖಲೆಗಳು ಸಿಗುತ್ತವೆಂಬ ಕಾರಣಕ್ಕೆ ಬರಿ ನಗರಗಳನ್ನಷ್ಟೇ ಗಮನಿಸಿ ಸಿಂಧೂ ನಾಗರಿಕತೆಯ ಚರಿತ್ರೆ ಬರೆಯುವುದು ಸರಿಯೆ?

ಇಲ್ಲಿ ದೊರಕುವ ಮುದ್ರೆಗಳು, ಧಾತುಗಳಿಂದ ನಿರ್ಮಿತ ಪ್ರತಿಮೆಗಳು, ಮೊದಲಾದ ಧಾರ್ಮಿಕ ಭೌತಿಕ ವಸ್ತುಗಳು, ತಾಯಿ ಪಂಥ, ಶೈವಪಂಥಗಳನ್ನು ಪ್ರಧಾನವಾಗಿ ಸೂಚಿಸುತ್ತವೆ. ಇವಾವೂ ವೈದಿಕಾರ್ಯರ ಮೊದಲ ಗ್ರಂಥವಾದ ಋಗ್ವೇದದಲ್ಲಿ ಸಿಕ್ಕಲಾರವು. ಆದರೆ ಅವೆಲ್ಲ ಇಂದಿಗೂ ದ್ರಾವಿಡ ಜನಕುಲಗಳಲ್ಲಿ ಉಳಿದು ಬಂದಿವೆ. ಇವುಗಳ ಅಧ್ಯಯನದಿಂದ ಸಿಂಧೂ ನಾಗರಿಕ ಜನಕುಲಗಳ ಗುರುತು ಹಿಡಿಯಲು ಸಾಧ್ಯವಿದೆ. ಈ ಅಂಶಕ್ಕೇನೆ ಯಾವ ವಿದ್ವಾಂಸರೂ ಒತ್ತು ಕೊಡಲಿಲ್ಲ.

ಇಲ್ಲಿಯೇ ದಲಿತರ ವಿಸ್ಮೃತಿಗೀಡಾದ ಚರಿತ್ರೆಯ ಮೊದಲ ಪುಟಕ್ಕೆ ಪ್ರವೇಶಿಸುತ್ತೇವೆ.

ಸಿಂಧೂ ನಗರ ನಾಗರಿಕತೆಯಲ್ಲಿ ಪಿತೃದೈವಗಳ ಆರಾಧಕರು ಮತ್ತು ಮಾತೃ ದೈವಗಳ ಆರಾಧಕರು ಜೊತೆಗೂಡಿದ್ದರೆಂಬುದಕ್ಕೆ ಅಲ್ಲಿ ಸಿಗುವ ಅವಶೇಷಗಳೇ ಆಧಾರಗಳಾಗಿವೆ.

ಆದಿಮ ಪಶುಪಾಲಕರು ಪಿತೃದೈವಗಳ ಆರಾಧಕರೂ, ಪಿತೃಪ್ರಧಾನ ಸಮಾಜ ವ್ಯವಸ್ಥೆ ಹೊಂದಿರುವವರೂ; ಬೇಸಾಯಗಾರರು ಮಾತೃದೈವಗಳ ಆರಾಧಕರೂ, ಮಾತೃಪ್ರಧಾನ ಸಮಾಜ ವ್ಯವಸ್ಥೆ ಹೊಂದಿರುವವರೆಂದು, ಅನೇಕ ವಿದ್ವಾಂಸರು ಜಗತ್ತಿನಲ್ಲಿ ಅನೇಕ ಕಡೆ ದೊರಕುವ ಸಾಕ್ಷ್ಯಾಧಾರಗಳಿಂದ ನಿರ್ಣಯಿಸಿದ್ದಾರೆ. ಭಾರತದಲ್ಲಿ ಮಾತೃಪ್ರಧಾನ ಸಮಾಜ ಮಾತೃದೈವ ಪಂಥಗಳು ಹೇಗಿದ್ದವು ಎಂಬ ಅಮೂಲ್ಯ ಅಧ್ಯಯನವನ್ನು ದೇವಿ ಪ್ರಸಾದ ಚಟೋಪಾಧ್ಯಾಯ 'ಲೋಕಾಯತ' ಎಂಬ ತಮ್ಮ ಕೃತಿಯಲ್ಲಿ ಮಾಡಿದ್ದಾರೆ.

ಆದರೆ ಅಲ್ಲಿಯೂ ಅವರು ದ್ರಾವಿಡರಲ್ಲಿ ಯಾರು ಮೊದಲ ಬೇಸಾಯಗಾರರು ಮತ್ತು ಯಾರು ಮೊದಲ ಪಶುಪಾಲಕರು ಎಂಬ ಅತ್ಯಂತ ಮಹತ್ವದ ಪ್ರಶ್ನೆಯನ್ನು ಕೇಳಿಕೊಳ್ಳಲಿಲ್ಲ. ಈ ಪ್ರಧಾನ ಪ್ರಶ್ನೆಯೇ ನಮ್ಮನ್ನು ದಲಿತರ ಮೂಲದತ್ತ ಕೊಂಡೊಯ್ಯುತ್ತದೆಂಬುದನ್ನು ಮನಗಂಡಾಗ ಇದರ ಪ್ರಾಮುಖ್ಯತೆಯನ್ನು ನಿರ್ಲಕ್ಷಿಸಲಿಕ್ಕಾಗುವುದಿಲ್ಲ.

ಹೀಗಾಗಿ ನಮ್ಮ ಅಧ್ಯಯನ ಇಲ್ಲಿಂದಲೇ ಪ್ರಾರಂಭವಾಗಬೇಕು. ಕನ್ನಡ ಮೂಲ ಜನಕುಲಗಳ ಆಳವಾದ ಅಧ್ಯಯನ ಮಾಡಿದ ಮೊದಲಿಗರಲ್ಲಿ ಶಂ.ಬಾ.ಜೋಷಿ ಪ್ರಮುಖರು. ಅವರೂ ಕೂಡ ಕನ್ನಡ ಜನಕುಲಗಳಲ್ಲಿ ಇಂದಿಗೂ ಅಸ್ತಿತ್ವದಲ್ಲಿರುವ ಕೃಷಿಕರು ಮತ್ತು ಪಶುಪಾಲಕರು ಎಂಬ ಎರಡು ಪ್ರತ್ಯೇಕ ಸಂಸ್ಕೃತಿ ನೆಲೆಗಳ ಆಧಾರದಲ್ಲಿ ವಿವೇಚನೆ ಮಾಡಲಿಲ್ಲ.

ಇವೆರಡೂ ಪ್ರತ್ಯೇಕ ಸಾಂಸ್ಕೃತಿಕ ಪರಂಪರೆಗಳೆಂದು ಸ್ಪಷ್ಟವಾಗಿ ಹೇಳುವ ದೇವಿಪ್ರಸಾದ ಚಟೋಪಾಧ್ಯಾಯರು ದ್ರಾವಿಡರಲ್ಲಿ ಯಾರು ಆದಿಮ ಬೇಸಾಯಗಾರರು ಎಂದು ಶೋಧಿಸಲು ಯತ್ನಿಸಲಿಲ್ಲ.

ಮಾತೃಪ್ರಧಾನ ಸಮಾಜದ ಅವಶೇಷಗಳಾದ ಮಾತೃಪಂಥ, ಮಾತೃದೈವ; ಬೇಸಾಯದಲ್ಲಿ ಮಹಿಳೆಯರ ಪಾತ್ರ, ಮಾತೃದೈವದ ಪಾತ್ರ; ಇವೆಲ್ಲಕ್ಕೂ ದಲಿತರಿಗಿರುವ ಗಾಢ ಸಂಬಂಧ ಇವುಗಳ ಬಗ್ಗೆ ನಮ್ಮ ದೇಶದಲ್ಲಿ ವಿಪುಲ ಮಾಹಿತಿಗಳಾಗಿವೆ. ಅವನ್ನು ಈವರೆಗೆ ಅಲಕ್ಷಿಸುತ್ತ ಬಂದು ತಪ್ಪು ಮಾಡಲಾಗಿದೆ. ಮಹಿಳಾ ವಿಮೋಚನಾ ಚಳುವಳಿಕಾರರೂ, ಸ್ತ್ರೀವಾದಿ ಚಿಂತಕರೂ ಈ ಸಂಗತಿಗಳನ್ನು ಗಮನಿಸಲಿಲ್ಲ. ದುರ್ದೈವವೆಂದರೆ ಇಂದಿಗೂ ಈ ಬಗೆಯ ಯಾವ ಕಾಳಜಿ ಕಾಣುತ್ತಿಲ್ಲ. ಹಾಗಾಗಿ ದೇಸಿ ಮೂಲದ ಸ್ತ್ರೀವಾದಿ ಚಿಂತನೆಯ ದೊಡ್ಡ ಕೊರತೆ ಎದ್ದು ಕಾಣುವಂತಾಗಿದೆ. ಇದರಿಂದ ಬರಿ ದಲಿತವಾದಕ್ಕಷ್ಟೇ ಅನ್ಯಾಯವಾಗಿಲ್ಲ ಸ್ತ್ರೀವಾದಿ ಚಿಂತನೆ ಮತ್ತು ವಿಮೋಚನೆಗೂ ಅನ್ಯಾಯವಾಗಿದೆ.

ದೇವಿಪ್ರಸಾದ ಚಟೋಪಾಧ್ಯಾಯ, ಡಿ.ಡಿ.ಕೋಸಾಂಬಿ ಮೊದಲಾದ ಚಿಂತಕರ ವಿಚಾರಗಳನ್ನು ವಿವೇಚಿಸಲು ಇಲ್ಲಿ ಅವಕಾಶವಿಲ್ಲ. ಇದು ತುಂಬ ಮುಖ್ಯ ಕೆಲಸವಾದರೂ ಕೂಡ ಅದನ್ನು ಬದಿಗಿಟ್ಟು ದಲಿತ ಸಂಸ್ಕೃತಿಯ ಸ್ವರೂಪವನ್ನು ತಿಳಿದುಕೊಳ್ಳಲು ಇವರಿಂದ ಸಿಕ್ಕುವ ನೆರವನ್ನು ಪಡೆದುಕೊಂಡರೆ ಸಾಕೆಂದು ತೋರುತ್ತದೆ.



# ಅಧ್ಯಾಯ : ೨

## ಆರ್ಯ ವೈದಿಕರು :

ಸಿಂಧೂ ನಾಗರಿಕರ ಜತೆ ಹೋಲಿಸಿ, ಆರ್ಯವೈದಿಕರು ಅವರಿಗಿಂತ ಹಿಂದುಳಿದ, ಅನಾಗರೀಕರಾಗಿದ್ದರೆಂದು ಬಹುತೇಕ ಎಲ್ಲ ವಿದ್ವಾಂಸರು ನಿರ್ಣಯಿಸುತ್ತಾರೆ. ಆಕಳು, ಹೋರಿ, ಕುದುರೆಗಳನ್ನು ಸಾಕಿಕೊಂಡು ಭೂಮಧ್ಯ ಸಮುದ್ರ ಪ್ರದೇಶದಿಂದ ಇರಾಣದ ಮೂಲಕ ಭಾರತಕ್ಕೆ ಬಂದ ಪಶುಪಾಲಕ ಆರ್ಯ ವೈದಿಕರು ಪಿತೃಪ್ರಧಾನ ಸಮಾಜದವರು. ಪಿತೃದೈವಗಳೇ ಅವರ ವೇದಗಳಲ್ಲಿ ಪ್ರಥಮ ಪ್ರಾಶಸ್ತ್ಯ ಪಡೆದಿವೆ. ಯಜ್ಞ ಅವರ ಆರ್ಥಿಕ ಚಟುವಟಿಕೆಯ ಕೇಂದ್ರವಾಗಿತ್ತು. ಅವರ ನೇತಾರ ಇಂದ್ರ, ಅಗ್ನಿ, ವಾಯು, ವರುಣ ಮೊದಲಾದವರು ಮಾನವರೇ. ಕಾಲಾಂತರದಲ್ಲಿ ಇವೆಲ್ಲ ದೈವಗಳಾದವು. ಬುಡಕಟ್ಟು ಸ್ಥಿತಿಯಲ್ಲಿದ್ದ ಈ ಜನಕುಲಗಳು ಅನೇಕ ಗೋತ್ರಗುಂಪುಗಳಾಗಿದ್ದವು. 'ಪುರಂದರ', 'ವೃತ್ರಹನ್' (ವೃತ್ರ = ಅಣೆಕಟ್ಟು)ನಾದ ಇಂದ್ರ ಸಿಂಧೂ ನಾಗರಿಕತೆಯ ನಗರ ಕೋಟೆ, ನೀರಾವರಿ ಒಡ್ಡುಗಳನ್ನು ನಾಶಮಾಡಿದವ. ಹೀಗೆ ಖಚಿತ ಚಿತ್ರ ನೀಡಿರುವ ವಿದ್ವಾಂಸರು ಆರ್ಯವೈದಿಕರ, ಅದರಲ್ಲೂ ಬ್ರಾಹ್ಮಣರ ಸಂಸ್ಕೃತಿ ಸರ್ವಶ್ರೇಷ್ಠವಾಗಲು ಕಾರಣವೇನೆಂಬುದನ್ನು ಹೇಳಲಾರರು.

ಸಿಂಧೂ ನಾಗರಿಕತೆ ನಾಶವಾದ ನಂತರ ಅನೇಕ ಶತಮಾನಗಳವರೆಗೆ ಭಾರತದಲ್ಲಿ 'ಕತ್ತಲೆಯ ಯುಗ'ವಿತ್ತೆಂದು ಹೇಳುವ ಇತಿಹಾಸಕಾರರು ಮರೆಮಾಚುವ ಸಂಗತಿ ಎಂದರೆ ಆ ಕಾಲದಲ್ಲಿ ಆರ್ಯವೈದಿಕರು ವಲಸೆಗಾರಿಕೆಯಿಂದ ನೆಲಸುಗಾರಿಕೆಗೆ ಬೆಳೆದುಬರಲು, ಸಿಂಧೂ ನಾಗರಿಕತೆಗೆ ಕಾರಣವಾದ ದ್ರಾವಿಡ ಮತ್ತು ಇತರ ಜನಕುಲಗಳೇ ಕಾರಣವಾದವೆಂಬುದು. 'ಅನಾಗರಿಕರಾಗಿದ್ದ', ಆರ್ಯವೈದಿಕರು ದ್ರಾವಿಡರಿಂದಲ್ಲದೇ 'ನಾಗರಿಕ'ರಾಗುವುದು ಶಕ್ಯವೇ ಇರಲಿಲ್ಲ. ಈ ಅಂಶವನ್ನು ವಿದ್ವಾಂಸರು ಪ್ರತಿಪಾದಿಸಲಿಲ್ಲ. ಅಪವಾದದಂತೆ ತೋರುವ ಕೆಲವರ ಈ ಬಗೆಯ ಮಾತುಗಳನ್ನು 'ಪ್ರಖ್ಯಾತ'ರೆನಿಸಿಕೊಂಡ ಇತಿಹಾಸಕಾರರು ತಮಾಷೆ ಮಾಡಿದ್ದೇ ಹೆಚ್ಚು. ಅಥವಾ ಪ್ರಸ್ತಾಪವಾಗುವ ಕೆಲವು ಸಂಗತಿಗಳಲ್ಲಿ ಅಸ್ಪಷ್ಟತೆ ಮತ್ತು ಗೊಂದಲಗಳೇ ಇವೆ, ಇಲ್ಲವೇ ಅವು 'ಪಾಸಿಂಗ್ ರೆಫೆರೆನ್ಸ್' ಆಗುತ್ತವೆ. ನಿದರ್ಶನಕ್ಕೆ ರೋಮಿಲಾ ಥಾಪರ್ ಅವರ ಈ ಮಾತು ಗಮನಿಸಿ, "ಕೊನೆಯ ಮೂರು ವೇದಗಳಾದ ಸಾಮ ಯಜುರ್ ಹಾಗೂ ಅಥರ್ವಣಗಳು ಅವುಗಳು ಚಿತ್ರಿಸುವ ಸಮಾಜದ ದೃಷ್ಟಿಯಿಂದ ಗಮನಾರ್ಹವಾಗಿ ಬೇರೆಯೇ ಆಗಿವೆ. ಅವುಗಳ ಭೌಗೋಳಿಕ ಗಮನವೂ ಕೂಡ ಪಂಜಾಬ್ ಮತ್ತು ಹರಿಯಾಣಾ ಆಗಿರದೆ ದೋಆಬ್ ಮತ್ತು ಗಂಗಾ ಕಣಿವೆಯ ನಡುಪ್ರದೇಶಕ್ಕೆ ಸ್ಥಳಾಂತರವಾಗುತ್ತದೆ. ಗೋವಳ ಜೀವನದಿಂದ ಕೃಷಿಕ ಜೀವನದೆಡೆಗೆ ಸಾಗಿದ ಹಾಗೂ ನಗರ ಜೀವನ ಆರಂಭವಾದ ಚಿತ್ರ ಅವುಗಳಲ್ಲಿ ಮೂಡಿದೆ. ಈ ಭೌಗೋಳಿಕ ಸ್ಥಾನವನ್ನು ಗೆದ್ದುಕೊಂಡರೆನ್ನಲು ಯಾವ ಆಧಾರವೂ ಇಲ್ಲ. ನಂತರದ ವೈದಿಕ ಸಾಹಿತ್ಯವು ಪ್ರತಿನಿಧಿಸುವುದು ಇಂಡೊ–ಆರ್ಯನ್ ಭಾಷಿಕರು ಆ ಮೊದಲೇ ಅಲ್ಲಿ ನೆಲೆನಿಂತ ಜನರೊಡನೆ ಸಾಂಸ್ಕೃತಿಕವಾಗಿ ಬೆರೆತುದನ್ನು ಎಂಬುದಾಗಿ ಸೂಚಿಸಲಾಗಿದೆ. ಭಾಷಾ ಶಾಸ್ತ್ರೀಯ ಆಧಾರವು ಈ ಹೇಳಿಕೆಯನ್ನು ಬೆಂಬಲಿಸುತ್ತದೆ. ದ್ರಾವಿಡ ಮೂಲದ ಶಬ್ದಗಳು ಋಗ್ವೇದದಲ್ಲಿವೆಯೆಂಬುದು ಸ್ವಾರಸ್ಯದ ಅಂಶ.... ದ್ರಾವಿಡ ಭಾಷೆಗಳಿಂದ ಈ ಎರವಲು ಪಡೆಯುವಿಕೆಯು ಕ್ರಿ.ಪೂ. ೧೦೦೦ದಿಂದ ೫೦೦ರವರೆಗೆ ನಂತರದ ವೇದ ಕಾಲವೆಂದು ಕರೆಯಲಾಗುವ ಅವಧಿಯಲ್ಲಿ ನಡೆದವು.... ಆರ್ಯ ಭಾಷೆ ಮಾತನಾಡುವ ಜನಗಳ ಗುಂಪುಗಳು ಉತ್ತರ ಭಾರತಕ್ಕೆ ವಲಸೆ ಬಂದು ನೆಲೆನಿಂತು ಸ್ಥಳೀಯ ಜನರ ಜತೆ ಬೆರೆತರು. ಈ ಪರಸ್ಪರ ಪ್ರಕ್ರಿಯೆಯಿಂದಲೇ ಮುಂದಿನ ಸಂಸ್ಕೃತಿ ಉಂಟಾಯಿತು" ('ಗತಕಾಲದ ಬಗ್ಗೆ ಪೂರ್ವಗ್ರಹ' : ಪು. ೨೮–೨೯)

ಇಲ್ಲಿ ದ್ರಾವಿಡವನ್ನು ಭಾಷಾಶಾಸ್ತ್ರೀಯವಾಗಷ್ಟೇ ನೋಡಲಾಗಿದೆ. ದ್ರಾವಿಡರಲ್ಲಿ ಯಾವ ಜನಕುಲಗಳು ಕೃಷಿಗೆ ಕಾರಣರು, ಅವರು ಯಾವ ಸಾಂಸ್ಕೃತಿಕಾಂಶಗಳು ವೈದಿಕರನ್ನು ಹೇಗೆ ಬೆಳೆಸಿದವು ಎಂಬ ಚಿಂತನೆಯಿಲ್ಲ.

**ದಲಿತರು ಕೃಷಿಕರೇ ? ಪಶುಪಾಲಕರೇ ? :**

ಜನಾಂಗೀಯ ಆಧಾರದಲ್ಲಿ ದಲಿತರು ಪ್ರತ್ಯೇಕ ಗುಂಪಲ್ಲ ಎಂಬುದನ್ನು ಸಾಧಾರವಾಗಿ ಅಂಬೇಡಕರ ಅವರು ಹಿಂದೆಯೇ ವಾದಿಸಿದ್ದಾರೆ. ದ್ರಾವಿಡರಲ್ಲಿ ದಲಿತರು ಪ್ರಧಾನ ಭಾಗವಾಗಿದ್ದರು ಎಂಬುದು ಖಚಿತ. ದ್ರಾವಿಡರ ಮೂಲವನ್ನು ಇನ್ನೂ ಶೋಧಿಸಲಾಗದಿದ್ದರೂ ಆಸ್ಟ್ರೋಲೈಡ್, ನಿಗ್ರೋಯಿಟ್ ಮತ್ತು ಮೆಡಿಟರೇನಿಯನ್ ಜನಕುಲಗಳು ಒಂದಾಗಿ ದ್ರಾವಿಡರ ಜನನವಾಗಿದೆ ಎಂಬುದನ್ನಂತೂ ಮಾನವಶಾಸ್ತ್ರೀಯ ಆಧಾರದಲ್ಲಿ ಸ್ಪಷ್ಟ ಪಡಿಸಲಾಗಿದೆ. ದ್ರಾವಿಡರ ಮೂಲ ಮತ್ತು ಅತ್ಯಂತ ಪ್ರಾಚೀನ ಜೀವನ ಸ್ವರೂಪಗಳು ತಿಳಿದು ಬಾರದ ಸಂಗತಿಗಳಾದರೂ ಪ್ರಾಚ್ಯಶಾಸ್ತ್ರ ಹೇಳುವ ಶಿಲಾಯುಗ, ನವಶಿಲಾಯುಗ ಮೊದಲಾದ ಚರಿತ್ರಪೂರ್ವ ಕಾಲದಲ್ಲಿ ಅವರು ಹೇಗಿದ್ದರೆಂದು ತಿಳಿಯಲು ಸ್ವಲ್ಪ ಮಟ್ಟಿಗಾದರೂ ಸಾಧ್ಯವಾಗಿದೆ.

ಕರ್ನಾಟಕದ ಪ್ರಾಚ್ಯಶಾಸ್ತ್ರೀಯ ಶೋಧನೆಗಳಲ್ಲಿ ಜನಕುಲಗಳನ್ನು ಗುರುತಿಸುವ ಪ್ರಯತ್ನ ನಡೆಯದೆ ಇರುವುದರಿಂದ ಅನಿವಾರ್ಯವಾಗಿ ನಾವು ಮಾನವ ಕುಲಶಾಸ್ತ್ರದಂಥ ಬೇರೆ ಶಿಸ್ತುಗಳ ನೆರವನ್ನು ಅಪೇಕ್ಷಿಸಬೇಕಾಗುತ್ತದೆ.

ವೃತ್ತಿಯಾಧಾರದಲ್ಲಿ ದ್ರಾವಿಡರಲ್ಲೂ ಪಶುಪಾಲಕರು ಮತ್ತು ಬೇಸಾಯಗಾರರಿದ್ದರು. ಅಚ್ಚರಿಯ ಸಂಗತಿ ಎಂದರೆ ದ್ರಾವಿಡ ಪಶುಪಾಲಕರು, ಆರ್ಯವೈದಿಕ ಪಶುಪಾಲಕರಂತೆ ಉನ್ನತಮಟ್ಟಕ್ಕೇರದಿರುವುದು. ಆರ್ಯವೈದಿಕ ಪಶುಪಾಲಕರಲ್ಲಿ 'ಬ್ರಾಹ್ಮಣರು' ಪ್ರತ್ಯೇಕಗೊಂಡು ಭಾರತೀಯ ಸಾಮಾಜಿಕ ಜಾತಿ ಶ್ರೇಣೀಕರಣದಲ್ಲಿ ಅತ್ಯುನ್ನತ ಸ್ಥಾನದಲ್ಲಿ ವಿರಾಜಮಾನರಾದ ಘಟನೆಗೂ ಈ ನಾಡಿನ ಮೂಲ ಬೇಸಾಯಗಾರರಾಗಿದ್ದ ದಲಿತರು ಭೂಮಿ ಕಾಣಿ ಕಳೆದುಕೊಂಡು ಅಸ್ಪೃಶ್ಯರಾದುದಕ್ಕೂ ನಿಕಟ ಸಂಬಂಧವಿದೆ. ಒಂದು ಜಾತಿ ಅತ್ಯನ್ನತ ಸ್ಥಾನದಲ್ಲೂ ಇನ್ನೊಂದು ಅತ್ಯಂತ ಕೆಳಗೂ ಸ್ಥಾಪಿತವಾಗಬೇಕಾದರೆ ಅದರಲ್ಲೇನೋ ತರ್ಕವಿರಬೇಕಷ್ಟೇ. ಯಾವುದೂ ವಿನಾಕಾರಣ ಘಟಿಸಲಾರದು. ಇದು ಬರಿ ಊಹೆಯೂ ಅಲ್ಲ ಎಂಬುದನ್ನು ಮುಂದೆ ನೋಡಲಿದ್ದೇವೆ.

ಇಂದಿಗೂ ಉಳಿದು ಬಂದಿರುವ 'ಜಾತಿ ವ್ಯವಸ್ಥೆ' ದ್ರಾವಿಡರಲ್ಲಿ ಆದಿಮ ಜನಕುಲಗಳ ಶೋಧನೆಗೆ ನೆರವಾಗುತ್ತಿರುವುದು ವಿಚಿತ್ರ ವಿಪರ್ಯಾಸ. ಜಾತಿ ವ್ಯವಸ್ಥೆಯ ಬಗ್ಗೆ ನನ್ನದೇ ಆದ ಬೇರೆ ಚಿಂತನೆಗಳಿವೆ, ("ಮಾದರ ಚನ್ನಯ್ಯನ ನಾಡಿನಲ್ಲಿ") ಅವನ್ನಿಲ್ಲಿ ವಿವರಿಸುವ ಅವಶ್ಯಕತೆ ಇಲ್ಲ. ಆದರೆ ಜಾತಿಯ ಆಂತರಿಕ ರಚನೆ ಮತ್ತು ಬಾಹ್ಯ ರಚನೆಯಂಥ ಮೂಲಭೂತ ಸಂಗತಿಗಳನ್ನು ಗ್ರಹಿಸಿಕೊಳ್ಳದಿದ್ದರೆ ಅಧ್ಯಯನ ಗೊಂದಲಗೊಳ್ಳುವ ಸಾಧ್ಯತೆಯಿದೆ.

ಗ್ರಾಮಗಳಲ್ಲಿ ಜಾತಿಯ ಆಂತರಿಕ ರಚನೆಯಲ್ಲಿ ಬುಡಕಟ್ಟು ಲಕ್ಷಣಗಳು ಉಳಿದು ಬಂದವು. ಅನೇಕ ಜಾತಿಗಳ ಊರೊಟ್ಟಿನ ಸಂಬಂಧದಲ್ಲಿ ಜಾತಿಯ 'ಬಾಹ್ಯ ರಚನೆ' ರೂಪುಗೊಂಡಿತು. ದೀರ್ಘಕಾಲದ ಜಾತಿಬದ್ಧ ಫ್ಯೂಡಲ್ ವ್ಯವಸ್ಥೆಗೆ ಹೊಂದುವಂತೆ 'ಗ್ರಾಮ'ಗಳು ರಚಿತವಾದವು. ದ್ರಾವಿಡ ಪಶುಪಾಲಕರಾದ ಕುರುಬ, ಬೇಡ, ಗೊಲ್ಲ, ಕಾಪು, ಕಮ್ಮ, ವೇಲನ್, ನಾಯರ್, ಗೌಡ ಮೊದಲಾದ ಜನಕುಲಗಳು ಭಾರತದ ಜಾತಿ ಶ್ರೇಣೀಕರಣದಲ್ಲಿ ಮಧ್ಯ ಇಲ್ಲವೇ ಕೆಳಹಂತಕ್ಕೆ ಸೇರಿದವು. ಅವರು 'ಹಟ್ಟಿ ಸಂಸ್ಕೃತಿ' ನಿರ್ಮಾತೃಗಳು. ಪಶುಪಾಲಕರಾದ್ದರಿಂದ ಪಿತೃಪ್ರಧಾನ ಸಮಾಜ ವ್ಯವಸ್ಥೆಯಲ್ಲಿದ್ದವರು. ಆದರೆ ಆರ್ಯ ವೈದಿಕ ಪಶುಪಾಲಕ ಸಂಸ್ಕೃತಿಗೂ ದ್ರಾವಿಡ ಪಶುಪಾಲಕ ಸಂಸ್ಕೃತಿಗೂ ಸ್ಪಷ್ಟ ಅಂತರವಿದೆ. ಮೂಲದಲ್ಲಿ ತಾವೂ ಪಶುಪಾಲಕರೇ ಎಂಬುದನ್ನು ಮರೆತ ಆರ್ಯ ವೈದಿಕರು ದ್ರಾವಿಡ ಪಶುಪಾಲಕರನ್ನು ಕೀಳಾಗಿ, ಕ್ಷುಲ್ಲಕವಾಗಿ ಕಂಡ ನೀಚತನ ಆಗಾಧ. ಏಕಲವ್ಯ, ವಾಲ್ಮೀಕಿ, ಶಂಭೂಕರಂಥ ಪ್ರಖ್ಯಾತ

ಹೆಸರುಗಳಿರುವ ವ್ಯಕ್ತಿಗಳಲ್ಲದೆ, ಪುರಾಣ, ಕತೆ, ಕಾವ್ಯಗಳಲ್ಲಿ ಚಿತ್ರಿತವಾಗಿರುವ (ಉದಾ: 'ಪಂಚತಂತ್ರ'ದಲ್ಲಿ ಬೇಡರು) ದ್ರಾವಿಡ ಪಶುಪಾಲಕ ಜನತೆ ಆರ್ಯ ವೈದಿಕರ ಕುಹಕ ಬುದ್ಧಿಗೆ ಬಲಿಯಾದವರು. ಮ್ಯಾಸನಾಯಕರಲ್ಲಿರುವ ಜನಪದ ಕತೆಗಳಿಗೂ 'ಪಂಚತಂತ್ರ'ದಲ್ಲಿರುವ ಬೇಡರ ಚಿತ್ರಣಕ್ಕೂ ಹೋಲಿಕೆ ಮಾಡಿನೋಡಿದರೆ ಆರ್ಯವೈದಿಕರ ಕುತಂತ್ರ, ಘಾತುಕತನ ಎಷ್ಟೆಂದು ಬಯಲಾಗುತ್ತದೆ. ಚರಿತ್ರೆಯ ನಿರ್ಮಾಣದಲ್ಲಿ ಈ ಜನಕುಲಗಳ ಪಾತ್ರ ಗಣನೀಯವಾದರೂ ಬ್ರಿಟೀಷರ ವಸಾಹತು ಕಾಲದ ವಿದ್ವಾಂಸರಿಂದ ಮೊದಲು ಮಾಡಿಕೊಂಡು ಭಾರತೀಯ ಮೇಲ್ಜಾತಿ ಲೇಖಕರೂ ಇವರನ್ನು 'ಕಳ್ಳರು', 'ದರೋಡೆಕೋರರು', 'ಕೀಳುಜನ', 'ಕ್ಷುದ್ರರು' ಎಂದೇ ನೋಡಿದರು. ಥರ್‌ಸ್ಟನ್, ಅನಂತ ಕೃಷ್ಣ ಅಯ್ಯರ್, ನಂಜುಂಡಯ್ಯ ಮೊದಲಾದವರ ಬರಹಗಳನ್ನು ಗಮನಿಸಬಹುದು.

'ದ್ರಾವಿಡ ಸಂಸ್ಕೃತಿ' ನಿರ್ಮಾಣಗೊಂಡದ್ದೇ ದ್ರಾವಿಡ ಪಶುಪಾಲಕರು ಮತ್ತು ಬೇಸಾಯಗಾರರು ಸಮೀಕರಣಗೊಂಡಿದ್ದರಿಂದ. ನಮ್ಮ ನಾಡಿನ ಪ್ರತಿಯೊಂದು ಗ್ರಾಮದಲ್ಲಿ ಕಾಣುವ 'ನಂದಿ' (ಬಸವ, ಎತ್ತು, ಹೋರಿ) ಮ್ಯಾಸ ನಾಯಕ ಸಂಸ್ಕೃತಿ ಕೊಡುಗೆ. ಇದು ಶಿವಲಿಂಗದ ಮುಂದೆ ಅಥವಾ ಸ್ವತಂತ್ರವಾಗಿ ಸ್ಥಾಪಿತವಾಗಿರುತ್ತದೆ. ಲಿಂಗದ ಮೇಲ್ಭಾಗ ಶಿಶ್ನ, ಕೆಳಭಾಗ ಯೋನಿ ಎಂದು ವಿದ್ವಾಂಸರು ನಿರ್ವಚಿಸಿದ್ದಾರಷ್ಟೇ. ಶಿಶ್ನರಾಧಕರೂ ದ್ರಾವಿಡ ಪಶುಪಾಲಕರು; ಬೇಸಾಯಗಾರರು ಯೋನಿಪೂಜಕರೆನ್ನುವುದಾದರೆ ಇವರಿಬ್ಬರ ಮಿಲನದ ಸಂಕೇತವೇ 'ಲಿಂಗ'ವಾಗುತ್ತದೆ. ಭೈರವ, ಸಿದ್ಧ, ಮೈಲಾರ, ಶಿವ, ನಾಥ, ಮೊದಲಾದ ಪಂಥಗಳು; ಇಂದಿಗೂ ದ್ರಾವಿಡ ಪಶುಪಾಲಕರಲ್ಲಿ ಜೀವಂತವಾಗಿವೆ. ಈ ಚರ್ಚೆಯನ್ನಿಲ್ಲಿ ಹಿಗ್ಗಿಸುವುದು ಅಪ್ರಸ್ತುತ. ದಲಿತರಿಗೂ, ಸವರ್ಣೀಯ ದ್ರಾವಿಡ ಜಾತಿಕುಲಗಳಿಗೂ ಮೊದಲಿನಿಂದಲೂ ನಿಕಟ ಸಂಬಂಧವಿದೆ ಎಂಬ ಅಂಶವನ್ನಷ್ಟೇ ಇಲ್ಲಿ ಒತ್ತಿ ಹೇಳಬೇಕಿದೆ. ಇದು ಮಹತ್ವದ ಸಂಗತಿ ಏಕೆಂದರೆ ಅಸ್ಪೃಶ್ಯ ದಲಿತರನ್ನು ಸವರ್ಣೀಯ ಜಾತಿಗಳು, "ನೋಡುತ್ತಿರುವ" ಇಂದಿನ ರೀತಿ; ಸ್ವತಃ ದಲಿತರೇ ತಾವು ಪ್ರತ್ಯೇಕವೆಂದು ಭಾವಿಸಿರುವುದು, ಇವೆಲ್ಲ ಅಸಂಬದ್ಧವೆಂದು ತಿಳಿಯಬೇಕಿದೆ. 'ಅಸ್ಪೃಶ್ಯತೆ' ದುರುದ್ದೇಶಪೂರ್ವಕವಾಗಿ, ಕೃತಕವಾಗಿ, ಅನ್ಯಾಯದಿಂದ ಸೃಷ್ಟಿಸಿದ ಘಾತುಕನ. ಹಾಗೆ ನೋಡಿದರೆ ಇದರಲ್ಲಿ ಯಾವ ತರ್ಕವೂ ಇಲ್ಲ. ದ್ರಾವಿಡ ಜನಪದ ಗುರುವರ್ಗದಲ್ಲಿ ಬರುವ ಗ್ವಾರಪ್ಪ, ಗ್ವಾರಮ್ಮ, ದಾಸಪ್ಪ, ದಾಸಮ್ಮ, ಜೋಗಪ್ಪ, ಜೋಗಮ್ಮಗಳಲ್ಲಿ ದಲಿತ ಪುರುಷ ಸ್ತ್ರೀಯರನ್ನೂ ಒಳಗೊಂಡಂತೆ ಎಲ್ಲ ಜಾತಿಯವರೂ ಸೇರಿಲ್ಲವೇ? ಇಲ್ಲಿ ಜಾತಿ ಪ್ರತ್ಯೇಕತೆ ಇರುವುದಿಲ್ಲ. (ವಿವರಗಳಿಗೆ ನೋಡಿ: "ಕನ್ನಡ ಜನಪದ ಗುರು ಪರಂಪರೆ." ಎಸ್.ಎಸ್.ಹಿರೇಮಠ. ಪ್ರಸಾರಾಂಗ. ಗುಲಬರ್ಗಾ ವಿಶ್ವವಿದ್ಯಾಲಯ)

ದ್ರಾವಿಡರಲ್ಲಿ ಅಧಿಕ ಸಂಖ್ಯೆಯಲ್ಲಿರುವುದು ಪಶುಪಾಲಕ ಜನಕುಲಗಳೇ. ಇವರ ಮೂಲದ ಬಗ್ಗೆ ಗಟ್ಟಿಯಾದ ಯಾವ ಮಾತು ಹೇಳಲಾಗಿಲ್ಲ. ಇವರ 'ಹಟ್ಟಿ ಸಂಸ್ಕೃತಿ', 'ಹಳ್ಳಿ ಸಂಸ್ಕೃತಿ'ಗಿಂತ ಪೂರ್ಣ ಭಿನ್ನವಿತ್ತು ಎಂಬುದಂತೂ ನಿಜ.

**ಪ್ರಾಚ್ಯ ಶಾಸ್ತ್ರದ ಆಧಾರ :**

ಕರ್ನಾಟಕದ ಪ್ರಾಚ್ಯಶಾಸ್ತ್ರೀಯ ಶೋಧನೆಗಳಲ್ಲಿ ೧) ಆದಿ ಹಳೆಶಿಲಾಯುಗ ೨) ಮಧ್ಯ ಹಳೆಶಿಲಾಯುಗ ೩) ಅಂತ್ಯ ಹಳೆಶಿಲಾಯುಗ ೪) ಸೂಕ್ಷ್ಮ ಶಿಲಾಯುಗ ೫) ಶಿಲಾತಾಮ್ರಯುಗ ೬) ಕಬ್ಬಿಣಯುಗದ ಬೃಹತ್ ಶಿಲಾಸಂಸ್ಕೃತಿಗಳ ವಿವಿಧ ಜನಕುಲಗಳ ಒಡನಾಟವನ್ನು ಹೊಂದುಗಡಿಯದಂತೆ ವಿವರಿಸಲು ಸಾಧ್ಯವಿದೆ. ಇಲ್ಲೆಲ್ಲ ಶಿಲಾಯುಧಗಳು ಮತ್ತು ಉಪಕರಣಗಳು ಪ್ರಧಾನವಾಗಿವೆ. ನದಿ ಅಥವಾ ಹಳ್ಳಗಳ ದಂಡೆಗಳಲ್ಲಿ, ನಂತರ ದೂರ ದೂರದ ಬಯಲುಗಳಲ್ಲಿ ಈ ಜನಕುಲಗಳು ವಾಸವಾಗಿದ್ದವು. ಮೀನುಗಾರಿಕೆ, ಬೇಟೆ, ಪಶುಪಾಲನೆ, ಕುಮ್ರಿಬೇಸಾಯ ಇವು ಹಂತ ಹಂತವಾಗಿ ಈ ಜನ ಸಾಧಿಸಿಕೊಂಡು ಬಂದ ವೃತ್ತಿಗಳು.

ಕರ್ನಾಟಕದಲ್ಲಿ ಇತಿಹಾಸ ಪೂರ್ವಕಾಲದ ನೂತನ ಶಿಲಾಯುಗದ (ಶಿಲಾ ತಾಮ್ರಯುಗ) ೨೦೦, ಮತ್ತು ಬೃಹತ್ ಶಿಲಾಯುಗದ (ಕಬ್ಬಿಣಯುಗ) ೬೮೦ ಸ್ಥಳಗಳು ಶೋಧಿತವಾಗಿರುವುದಾಗಿ ತಿಳಿಸುವ ಅ.ಸುಂದರ ಅವರು, ಇವುಗಳಲ್ಲಿ ಹರಪ್ಪಾ ಸಂಸ್ಕೃತಿಯ ಪ್ರಭಾವ ಮತ್ತು ಕುರುಹುಗಳನ್ನು ಸ್ಪಷ್ಟವಾಗಿ ಗುರುತಿಸಿ, ಕರ್ನಾಟಕದ ಇತಿಹಾಸದಲ್ಲಿ ಕಳೆದುಹೋದ ಕೊಂಡಿಯನ್ನು ಜೋಡಿಸಲೆತ್ನಿಸಿದ್ದಾರೆ. ("ಮಾನ"-೧೯೯೨ರಲ್ಲಿ ಲೇಖನ) ಆದರೆ ಆ ಜನ ಸಂಸ್ಕೃತಿಯು ಇಂದುಳಿದಿರುವ ಯಾವ ಜನಕುಲಗಳ ಜತೆ ಹೊಂದುತ್ತವೆಂದು ಯಾವ ಪ್ರಾಚ್ಯ ಶೋಧಕರೂ ಸಾಮಾನ್ಯವಾಗಿ ಹೇಳುವುದಿಲ್ಲ. ಅಂತೂ ಹರಪ್ಪ ಸಂಸ್ಕೃತಿಗೂ ಕರ್ನಾಟಕದ ಆದಿಯ ಜನಸಮುದಾಯಗಳಿಗೂ ನಿಕಟ ಸಂಬಂಧವನ್ನು ಕಲ್ಪಿಸುತ್ತಿರುವುದು ಕಡಿಮೆ ಮಹತ್ವದ ಸಂಗತಿಯಲ್ಲ. ಕೃಷ್ಣಾ ತುಂಗಭದ್ರಾ ಬಯಲಿನ ಶಿಲಾ ತಾಮ್ರಯುಗ ಸಂಸ್ಕೃತಿ ಕಾಲ ಕ್ರಿ.ಪೂ. ೨೨೦೦-೮೦೦ ಎಂದೂ, ಇದು ಹರಪ್ಪಾದ ಕ್ರಿ.ಪೂ. ೨೫೦೦-೧೭೦೦ ಈ ಕಾಲಕ್ಕೆ ಸರಿಹೊಂದುತ್ತವೆಂದೂ ಸುಂದರ ಹೇಳುತ್ತಾರೆ. ಸಿಂಧೂ ಪ್ರದೇಶದಿಂದ ತುಂಗಭದ್ರೆಯ ವರೆಗೆ ಬಂದಿರಬಹುದಾದ ಈ ಜನರ ನೆಲೆಗಳು ದಾರಿ ಮಧ್ಯದ ಮಹಾರಾಷ್ಟ್ರದಲ್ಲೂ (ಗೋದಾವರಿ, ತಾಪಿ, ನರ್ಮದಾ ಬಯಲು) ದೊರಕಿವೆ. ಇದನ್ನು ವ್ಯಾಪಾರಿ ಸಂಬಂಧವೆಂದು ಗುರುತಿಸಲಾಗಿದೆ. ಹರಪ್ಪಾದ ಆಭರಣಗಳಿಗೆ ಬೇಕಿದ್ದ ಬಂಗಾರ ಕರ್ನಾಟಕದ ಕೋಲಾರ ಮತ್ತು ಹಟ್ಟಿಗಳಿಂದ ಹೋಗಿರಬೇಕು. ಹರಪ್ಪಾ ಅವನತಿಗೊಂಡ ನಂತರದ ಸಂಸ್ಕೃತಿ ಮಹಾರಾಷ್ಟ್ರ, ಕರ್ನಾಟಕದ ಹಲವಾರು ಭಾಗಗಳಲ್ಲಿ ಮುಂದುವರೆದಿರುವುದನ್ನು ಗುರುತಿಸಲಾಯಿತು. ನೂತನ ಶಿಲಾಯುಗದ ಕೊನೆಗೆ ಮತ್ತು ಹಳ್ಳೂರಿನ ಕಬ್ಬಿಣಯುಗದಲ್ಲಿ ಸಿಗುವ ಕಪ್ಪು, ಕೆಂಪು ವರ್ಣದ ಮೃತ್‌ಪಾತ್ರೆಗಳು. ಲೋಥಾಲ್ (ಹರಪ್ಪ) ಸಂಸ್ಕೃತಿಯಲ್ಲಿ ಸಿಕ್ಕುವನ್ನೇ ಹೋಲುತ್ತವೆ. ಇದು ಲೋಥಾಲ್ ಜನರೇ ಈ ಕಡೆ ವಲಸೆ ಬಂದಿರುವುದನ್ನು ಸೂಚಿಸುತ್ತದೆ. ತೆಕ್ಕಲಕೋಟೆ, ಸಂಗನಕಲ್ಲು ನೆಲೆಗಳ ಶಿಲಾತಾಮ್ರಯುಗದ ಕಾಲ ಊರ್ಜಿತಗೊಂಡದ್ದು ಹರಪ್ಪ ಸಂಸ್ಕೃತಿ ಅವನತಿಗೊಂಡ ಕಾಲದ ನಂತರ. (ಕ್ರಿ.ಪೂ. ೧೭೦೦-೮೦೦)

ಕೃಷ್ಣಾ ಮೇಲ್ದಂಡೆ ಪ್ರದೇಶದಲ್ಲಿ ೩೧ ನೆಲೆಗಳ ಶೋಧ ಮಾಡಿ ಸುಂದರ ಅವರು ಇದು ಶಿಲಾತಾಮ್ರಯುಗ ಸಂಸ್ಕೃತಿಯ ಕೇಂದ್ರವಾಗಿತ್ತೆಂದು ತೋರಿಸಿದ್ದಾರೆ. ಬ್ರೂಸ್ ಫೂಟ್‌ರು ಸಂಗನಕಲ್ಲು (ಬಳ್ಳಾರಿ) ಪ್ರದೇಶ ನೂತನ ಶಿಲಾಯುಗದ ಸಂಸ್ಕೃತಿಯ ಕೇಂದ್ರಸ್ಥಾನವೆಂದು ಹೇಳಿದ್ದರು. ಕೃಷ್ಣಾ ಪ್ರದೇಶದ ಸಂಸ್ಕೃತಿ ಸಂಗನಕಲ್ಲು ಪ್ರದೇಶಕ್ಕೆ ಹರಿದು ಬಂದು ಅಲ್ಲಿಯ ಸಂಸ್ಕೃತಿಯ ಜೊತೆ ಬೆರೆತಿರುವುದನ್ನು ಸುಂದರ ನಿರ್ಧರಿಸಿರುವುದು ಹೊಸ ಬೆಳವಣಿಗೆ. ಇದು ಮಸ್ಕಿ, ಪಿಕ್ಳಿಹಾಳ, ಸಿಂಗನಪಳ್ಳಿವರೆಗೆ ಹಬ್ಬಿರುವುದು ಕಂಡು ಬಂದಿದೆ. ಈ ಸಂಸ್ಕೃತಿ (ಈ ಸಂಸ್ಕೃತಿ) ಮೊಹೆಂಜೊದಾರೊವಿನಿಂದ ಬಂದಿದೆ ಎಂದು ಸುಂದರ ಹೇಳುತ್ತಾರೆ. ಮೃತ್‌ಪಾತ್ರೆಗಳ ಜ್ಯಾಮಿತಿ ಚಿತ್ರಗಳು, ವಿಚಿತ್ರ ದ್ವಿವರ್ಣಚಿತ್ರಗಳು ಮೊಹೆಂಜೋದಾರೊದಲ್ಲಿ ಮಾತ್ರ ಸಿಗುವುದೆಂದು ಕಾರಣಿಸಿದ್ದಾರೆ.

ಆದರೆ ಅವರು ಹೇಳುವ ಒಂದು ಸಂಗತಿ ಬೇರೆ ರೀತಿ ಆಲೋಚಿಸುವುದಕ್ಕೆ ಪ್ರೇರಣೆ ನೀಡುತ್ತದೆ. "ಒಟ್ಟಿನಲ್ಲಿ ಕೃಷ್ಣಾ ಮೇಲ್ದಂಡೆಯ ಮೃತ್‌ಪಾತ್ರೆಗಳಲ್ಲಿಯ ವರ್ಣಚಿತ್ರ ಸಂಪ್ರದಾಯವನ್ನು ನೋಡಿದರೆ ಈ ಪ್ರದೇಶವು ಹರಪ್ಪ ಸಂಸ್ಕೃತಿಯ ಪೂರ್ವಹಂತದಿಂದ ಹಿಡಿದು ಈ ಸಂಸ್ಕೃತಿಯು ಅನಂತರ ಕಾಲದವರೆಗೂ ಸಿಂಧೂ ಪ್ರದೇಶದೊಡನೆ ನಿಕಟ ಸಂಪರ್ಕ ಹೊಂದಿತ್ತೆಂದು ಹೇಳಬಹುದು". ಅಂದರೆ ಕೃಷ್ಣಾ ಪ್ರದೇಶದ ಸಂಸ್ಕೃತಿ ಹರಪ್ಪ ಸಂಸ್ಕೃತಿಯಿಂದಲೇ ಹುಟ್ಟಿದ್ದಲ್ಲ. ಅದಕ್ಕೂ ಪೂರ್ವದಲ್ಲಿದ್ದುದು. ಹರಪ್ಪ ಸಂಸ್ಕೃತಿಯಿಂದ ಅದು ಪ್ರಭಾವಿತಗೊಂಡು ಅಭಿವೃದ್ಧಿಗೊಂಡಿರಬೇಕು.

ಬಳ್ಳಾರಿ, ರಾಯಚೂರು ಜಿಲ್ಲೆಯ ಹಂಪಿ, ಪಿಕಳಿಹಾಳ, ತೊಗಲುಗುಡ್ಡಗಳಲ್ಲಿ ಹರಪ್ಪ ಸಂಸ್ಕೃತಿಯಲ್ಲಿ ಕಾಣುವ ಮೊಸಳೆ ಚಿತ್ರಗಳು ಕಂಡು ಬರುವುದನ್ನು ಗುರುತಿಸಿದ್ದಾರೆ. ಹಿರೇ ಬೆಣಕಲ್ಲಿನ ನಿಂತ ಮಾನವನ ಕಲ್ಲಾಸರೆ ಚಿತ್ರವು ಕೋಡು ಬಾಲಗಳನ್ನು ಒಳಗೊಂಡಿದ್ದು; ಇದರ ಪಕ್ಕ ಚಿಗರೆ, ನವಿಲು, ಗೂಳಿಗಳ ಚಿತ್ರಗಳಿದ್ದು ಇವೆಲ್ಲ ಮೊಹೆಂಜೊದಾರೊ ಮುದ್ರಿಕೆಗಳಲ್ಲಿ ಕಂಡುಬರುತ್ತವೆ. ಹರಪ್ಪಾ ಅಕ್ಷರಗಳೂ ಚಿತ್ರಿತವಾಗಿವೆ. ಬ್ರಾಹ್ಮಿ 'ಮ'ಅಕ್ಷರವೂ ಇದೆ. ಇವುಗಳ ಕಾಲ ಕ್ರಿ.ಪೂ. ೧೨೦೦-೭೦೦.

ಸಗಣಿ ಗುಂಪಿಗಳನ್ನು ಸುಟ್ಟ ಬೂದಿ ದಿಬ್ಬಗಳು; ಈ ಹೆಸರಿನ ಗ್ರಾಮ ನಾಮಗಳು, ಈ ಸಂಸ್ಕೃತಿಗಳ ಇನ್ನೊಂದು ವೈಶಿಷ್ಟ್ಯ. ಇಂಥ ಬೂದಿಗುಡ್ಡೆಗಳ ನಿರ್ಮಾಣ ಕಬ್ಬಿಣ ಯುಗದಷ್ಟೊತ್ತಿಗೆ ನಿಂತಿದೆ. ಅಂದರೆ ಸಗಣಿಯನ್ನು ಇಲ್ಲಿಂದ ಮುಂದೆ ಬೇಸಾಯಕ್ಕೆ ಗೊಬ್ಬರವಾಗಿ ಬಳಸುವ ರೂಢಿ ಜಾರಿಗೆ ಬಂದಿರಬಹುದೆಂದು ತೋರುತ್ತದೆ.

ಸವದತ್ತಿ ಹತ್ತಿರದ ಒಂದು ಕಲ್ಲ ಮೇಲಿನ ಚಿತ್ರ ಮತ್ತು ಲಿಪಿ ಮೊಹೆಂಜೊದಾರೊದ ಒಂದು ಮನೆಯಲ್ಲಿ ದೊರೆತ ತಾಮ್ರದ ಗಟ್ಟಿಯ ಮೇಲಿನ ಚಿತ್ರ, ಲಿಪಿಯನ್ನು ತುಂಬಾ ಹೋಲುತ್ತದೆ. ಅದೇ ರೀತಿ ಗುಡ್ನಾಪುರ (ಶಿರ್ಶಿತಾ)ದಲ್ಲೂ ಒಂದು ರೇಖಾಚಿತ್ರವುಳ್ಳ ಕಲ್ಲು ಸಿಕ್ಕಿದೆ. ಇಲ್ಲಿ 'ಉ' ಎಂಬ ಕನ್ನಡ ಅಕ್ಷರವಿದೆ. ಈ ಎಲ್ಲ ಚಿತ್ರಗಳು ಹರಪ್ಪ ಸಂಸ್ಕೃತಿಯ ಅವನತಿಯ ಕಾಲದವೆಂದೂ, ಅವರು ಈ ಪ್ರದೇಶಗಳಿಗೆ ವಲಸೆ ಬಂದಿರಬಹುದೆಂದೂ ವಿದ್ವಾಂಸರು ತರ್ಕಿಸಿದ್ದಾರೆ. ಕಾವೇರಿ ಬಯಲು, ತಮಿಳು ನಾಡುಗಳಲ್ಲೂ ಮೊಹೆಂಜೊದಾರೊದಲ್ಲಿರುವ ಚಿಹ್ನೆ, ಲಿಪಿ, ಬ್ರಾಹ್ಮಿ ಲಿಪಿ(ಕ, ಗ, ದ, ಅಕ್ಷರ) ಕಂಡು ಬಂದಿವೆ. ಏಣಿ, ಸೂರ್ಯ, ಡಮರುಗ, ಜೋಡೆತ್ತಿನ ಗಾಡಿ, ಹಾವು, ಗುಣಾಕಾರ, ತ್ರಿಕೋನ ಚಿಹ್ನೆ ಚಿತ್ರಿತವಾಗಿವೆ. ಹೀಗೆ ಬೃಹತ್ ಶಿಲಾ ಸಂಸ್ಕೃತಿಗೂ ಹರಪ್ಪ ಸಂಸ್ಕೃತಿಗೂ ನಿಕಟ ಸಂಬಂಧವಿದೆ.

ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಜನಕುಲಗಳಲ್ಲಿ ಸಾಂಸ್ಕೃತಿಕ ವ್ಯತ್ಯಾಸವಿರುವುದನ್ನು ಈ ಸಂಸ್ಕೃತಿ ಅಧ್ಯಯನ ತಿಳಿಸುತ್ತದೆ. ದಕ್ಷಿಣ ಭಾರತದಲ್ಲಿ ಮಾತ್ರ ದೊಡ್ಡ ಪ್ರಮಾಣದಲ್ಲಿ ಕಂಡು ಬರುವ ಬೃಹತ್ ಶಿಲಾಗೋರಿಗಳ ಜನಕುಲಗಳು ಕುಶಲಕಲೆಗಾರರಾಗಿದ್ದರು. ನೇಗಿಲು ಕುಳ, ಕುಡಗೋಲು, ಬತ್ತ, ರಾಗಿ, ಕಬ್ಬಿಣ ಬಾಣ, ಗಾಡಿ, ಚಕ್ರ, ನೂಲುವ ತಕಲಿ, ಆಭರಣ ಇವೆಲ್ಲ ಈ ಸ್ಥಳಗಳಲ್ಲಿ ಸಿಕ್ಕಿವೆ. ಒಕ್ಕಲುತನ, ಗುಡಿ ಕೈಗಾರಿಕೆ, ಬೇಟೆಗಾರಿಕೆಯ ಈ ಜನ ದಲಿತರೇ ಇರಬೇಕು. ಇವರು ವಿವಿಧ ಸಂಪ್ರದಾಯಗಳಿಗೆ ಸೇರಿದೆ, ಕುದುರೆಗಳನ್ನೂ ಬಳಸುತ್ತಿದ್ದ ಬೃಹತ್ ಬುಡಕಟ್ಟಿನವರು. ದಕ್ಷಿಣ ಭಾರತಕ್ಕೆ ಭೂಮಧ್ಯ ಸಮುದ್ರ ಪ್ರದೇಶದಿಂದ ಸಮುದ್ರಮಾರ್ಗದಿಂದ ಬಂದಿರಬಹುದು. ಇದರ ಕಾಲ ಕ್ರಿ.ಪೂ. ೧೨೦೦ ರಿಂದ ೨೦೦. ನಂತರ ಇತಿಹಾಸದ ಆರಂಭ ಕಾಲದ ಸುಟ್ಟ ಇಟ್ಟಿಗೆ ಕಟ್ಟಡ, ನಾಣ್ಯಗಳು ಮೊದಲಾದ ಅವಶೇಷಗಳು ದೊರಕುತ್ತವೆ.

ನವ ಶಿಲಾಯುಗದ ಜನರೇ ಮೊಟ್ಟ ಮೊದಲ ಕೃಷಿಕರು. ಪ್ರಪಂಚದ ಇತಿಹಾಸದಲ್ಲಿ ನವ ಶಿಲಾಯುಗ ಕ್ರಿ.ಪೂ. ೯೦೦೦ದಲ್ಲಿ ಪ್ರಾರಂಭವಾದರೆ ಭಾರತದಲ್ಲಿ ಕ್ರಿ.ಪೂ ೬೦೦೦ ಸುಮಾರು

ಆರಂಭವಾಯಿತು. ವಿಂಧ್ಯ ಪರ್ವತದ ಉತ್ತರ ಅಂಚಿನ ನವಶಿಲಾಯುಗ ನಿವೇಶನಗಳು ಕ್ರಿ.ಪೂ. ೫೦೦೦ ದವಾದರೆ, ದಕ್ಷಿಣ ಭಾರತದವು ಕ್ರಿ. ಪೂ. ೨೫೦೦ಕ್ಕಿಂತ ಈಚಿನವು ಮತ್ತು ಪೂರ್ವ ಭಾರತದವು ಕ್ರಿ.ಪೂ. ೧೦೦೦ದಷ್ಟು ಈಚಿನವು. ಇಡೀ ದೇಶದ ತುಂಬ ನವಶಿಲಾಯುಗದ ಜನ ವಾಸವಾಗಿದ್ದರು. ಇವರು ಪಶುಪಾಲಕರೂ ಹೌದು. (ಆರ್. ಎಸ್. ಶರ್ಮಾ: "ಪ್ರಾಚೀನ ಭಾರತ" ೧೯೯೭, ಪು. ೩೯–೪೦)

ಪ್ರಾಚ್ಯ ಶಾಸ್ತ್ರಜ್ಞರು ಮತ್ತು ಇತಿಹಾಸಕಾರರ ಈ ವಿಚಾರಗಳ ಹಿನ್ನೆಲೆಯಲ್ಲಿ ಕೃಷಿಕ ದಲಿತರು ನವಶಿಲಾಯುಗದ ಜನಕುಲವಾಗಿದ್ದರು, ಅನೇಕ ಸಂಸ್ಕೃತಿ ಜನಗಳ ಜೊತೆ ಒಡನಾಡುತ್ತಿದ್ದರು ಎಂದು ಹೇಳಬೇಕಾಗುತ್ತದೆ. ಇದು ತೀರಾ ಸ್ಥೂಲವಾದ ಗ್ರಹಿಕೆ. ಈ ಶೋಧನೆಗಳು ಮಾನವ ಕುಲ ವಿವರಣ ಶಾಸ್ತ್ರ, ಜಾನಪದಗಳ ನೆರವಿನಿಂದ ದಲಿತರ ಇತಿಹಾಸ ರಚನೆಗೆ ಸಹಾಯವಾಗಬೇಕಿವೆ.

**ನಾಮವಿಜ್ಞಾನದ ಆಧಾರ :**

ದಲಿತರು ನಾಡಿನ ಮೊದಲ ನೆಲಸುಗಾರ ಕೃಷಿಕರಿರುವುದಾದರೆ ಅವರ ಸಂಸ್ಕೃತಿ, ಗ್ರಾಮನಾಮಗಳಲ್ಲಿ ಉಳಿದು ಬಂದಿರಲೇಬೇಕು. ಈ ಹಿನ್ನೆಲೆಯಲ್ಲಿ ಕರ್ನಾಟಕದ ಗ್ರಾಮ ನಾಮಗಳ ಅಧ್ಯಯನ ನಡೆಯಬೇಕಿದೆ. ವಲಸೆಗಾರರಾಗಿದ್ದ ಕನ್ನಡ ಕುರುಬ, ಬೇಡ, ಗೊಲ್ಲ ಮೊದಲಾದ ಜನಕುಲಗಳ ಪಶುಸಂಗೋಪನೆಗೆ ತುಂಬ ಪ್ರಶಸ್ತವಾದ ದಿಬ್ಬ, ಮೊರಡಿ, ಕುರುಚಲು ಗುಡ್ಡ, ಬಯಲು, ಹೊಳೆಹಳ್ಳಗಳ ಸಾಮೀಪ್ಯ ಇಂಥ ಪ್ರದೇಶವಿರುವಲ್ಲೆಲ್ಲ ಹಟ್ಟಿ, ರೊಪ್ಪ, ಕೊಪ್ಪ ಎಂಬ ವಾರ್ಗಿಕ (generic) ಘಟಕಗಳಿರುವ ಗ್ರಾಮಗಳು ನಮ್ಮ ನಾಡಿನಲ್ಲಿ ಕಂಡು ಬರುವುದನ್ನು ಇಲ್ಲಿ ಉದಾರಿಸಬಹುದು. ಗ್ರಾಮನಾಮಗಳಲ್ಲಿರುವ ಪೂರ್ವಪದಕ್ಕೆ ನಿರ್ದಿಷ್ಟ (specific), ಉತ್ತರ ಪದಕ್ಕೆ 'ವಾರ್ಗಿಕ' ಎನ್ನುತ್ತಾರೆ. ('ಕನ್ನಡ ನಾಮ ವಿಜ್ಞಾನ': ಡಾ. ಎಂ.ಎಂ. ಕಲಬುರ್ಗಿ ೧೯೮೫) ಆದರೆ ಹೀಗೆ ಸುಸ್ಪಷ್ಟವಾಗಿ ದಲಿತರ ಮೂಲ ಗ್ರಾಮಗಳನ್ನು ಕಂಡು ಹಿಡಿಯಲು ಸಾಧ್ಯವೇ? ಕೊಪ್ಪ, ಕೇರಿ, ಹಳ್ಳಿ ಎಂಬ ವಾರ್ಗಿಕಗಳಿರುವ ಗ್ರಾಮಗಳು ದಲಿತಮೂಲದವಾಗುವ ಸಾಧ್ಯತೆಯಿದೆ. ಹೊಲೆಯ, ಮಾದಿಗ ಹೆಸರೇ ಇರುವ ಗ್ರಾಮಗಳ ಪಟ್ಟಿಯನ್ನಂತೂ ನಂತರ ನೋಡುತ್ತೇವೆ.

ಈಗ 'ಕೊಪ್ಪ' ವಾರ್ಗಿಕವಿರುವ ಕರ್ನಾಟಕದ ಗ್ರಾಮಗಳ ಪ್ರಸರಣದ ಸ್ವರೂಪವನ್ನು ಇಲ್ಲಿ ಗಮನಿಸಲಾಗುವುದು. 'ಕೊಪ್ಪ'ವು ಯಾವ ಜನಸಂಸ್ಕೃತಿಯ ಪದ? ಬೇಸಾಯಗಾರರದ್ದೋ? ಪಶುಪಾಲಕರದ್ದೋ? ಇದು ಚರ್ಚಾಸ್ಪದ ವಿಷಯವಾದರೂ, ದಕ್ಷಿಣ ಕನ್ನಡ ಜಿಲ್ಲೆಯ ದಲಿತ ಕೊರಗರು ತಮ್ಮ 'ಮನೆ'ಗೆ 'ಕೊಪ್ಪ' ('ಕೊಟ್ಟ' ಎಂದೂ) ಎನ್ನುತ್ತಾರೆಂಬ ಮಹತ್ವದ ಅಂಶವಿದೆ. ಇದರಿಂದ 'ಕೊಪ್ಪ' ಘಟಿತ ಗ್ರಾಮನಾಮಗಳು ದಲಿತರ ಮೂಲ ನೆಲೆಗಳನ್ನು ಸೂಚಿಸುತ್ತವೆಂದು ಹೇಳಬಹುದು.

"ಕೊಪ್ಪ" ವಾರ್ಗಿಕವಿರುವ ಕರ್ನಾಟಕದ ಗ್ರಾಮಗಳ ಪ್ರಸರಣ ಹೀಗಿದೆ–

೧. ರಾಯಚೂರು ಜಿಲ್ಲೆ : ಕುಷ್ಟಗಿ ತಾಲೂಕು ೮ ಗ್ರಾಮಗಳು. (ಉದಾ : ಊಸಲಕೊಪ್ಪ, ಕಡೆಕೊಪ್ಪ, ತುಮರಿಕೊಪ್ಪ ಇತ್ಯಾದಿ) ಯಲಬುರ್ಗಾ ತಾ : ೮.
೨. ವಿಜಾಪುರ ಜಿಲ್ಲೆ : ಬದಾಮಿ ತಾ : ೧೫, ಬಾಗಲಕೋಟೆ ತಾ : ೬, ಬಸವನ ಬಾಗೇವಾಡಿ ತಾ : ೧, ಬೀಳಗಿ ತಾ : ૩, ಮುದ್ದೇಬಿಹಾಳ ತಾ : ೧, ಮುಧೋಳ ತಾ : ૩, ಹುನಗುಂದ : ತಾ ૩.
૩. ಬೆಳಗಾವ ಜಿಲ್ಲೆ : ಅಥಣಿ ತಾ : ೧, ಖಾನಾಪುರ ತಾ : ೧೭, ಗೋಕಾಕ ತಾ : ૩, ಬೆಳಗಾವ ತಾ : ೭, ಬೈಲಹೊಂಗಲ ತಾ : ೨೪, ರಾಮದುರ್ಗ ತಾ : ೧೬, ಸವದತ್ತಿ ತಾ : ೧೮.
೪. ಕಾರವಾರ ಜಿಲ್ಲೆ : ಮುಂಡಗೋಡ ತಾ :೨೧, ಯಲ್ಲಾಪುರ ತಾ : ೪, ಸಿದ್ದಾಪುರ ತಾ : ೧૩, ಶಿರ್ಶಿ ತಾ :૩೦, ಹಳಿಯಾಳ ತಾ : ೧೪
೫. ಶಿವಮೊಗ್ಗ ಜಿಲ್ಲೆ : ತೀರ್ಥಹಳ್ಳಿ ತಾ : ೧೬, ಭದ್ರಾವತಿ ತಾ : ೬, ಶಿಕಾರಿಪುರ ತಾ : ૩೨, ಶಿವಮೊಗ್ಗ ತಾ : ૩೭, ಸಾಗರ ತಾ : ೨೮, ಸೊರಬ ತಾ : ೭೧, ಹೊನ್ನಾಳ್ಳಿ ತಾ : ೮, ಹೊಸನಗರ ತಾ : ೨೦
೬. ಚಿಕ್ಕಮಗಳೂರು ಜಿಲ್ಲೆ : ಕೊಪ್ಪ ತಾ : ೫, ತರೀಕೆರೆ ತಾ : ૩, ನರಸಿಂಹರಾಜಪುರ ತಾ : ೬, ಶೃಂಗೇರಿ ತಾ : ૩,
೭. ಧಾರವಾಡ ಜಿಲ್ಲೆ : ಕಲಘಟಗಿ ತಾ : ೨૩, ಕುಂದಗೋಳ ತಾ : ૩, ಗದಗ ತಾ : ૩, ಧಾರವಾಡ ತಾ : ೨೪, ನರಗುಂದ ತಾ : ೪, ನವಲಗುಂದ ತಾ : ೨, ಬ್ಯಾಡಗಿ ತಾ : ೬, ಮುಂಡರಗಿ ತಾ : ೧, ರಾಣೆಬೆನ್ನೂರು ತಾ : ೨, ರೋಣ ತಾ : ೪, ಶಿಗ್ಗಾವ ತಾ :

೯, ಶಿರಹಟ್ಟಿ ತಾ : ೫, ಸವಣೂರು ತಾ : ೩ ಹಾನಗಲ್ಲು ತಾ : ೨೦, ಹಾವೇರಿ ತಾ : ೩, ಹಿರೇಕೆರೂರು ತಾ : ೯, ಹುಬ್ಬಳ್ಳಿ ತಾ : ೭.

ವಿಜಾಪುರ, ಬೆಳಗಾವ, ಧಾರವಾಡ, ಕಾರವಾರ, ಶಿವಮೊಗ್ಗ, ಚಿಕ್ಕಮಗಳೂರು, ರಾಯಚೂರು ಹೀಗೆ ೭ ಜಿಲ್ಲೆಗಳಲ್ಲಿ ಕೊಪ್ಪ ಘಟಿತ ಗ್ರಾಮಗಳು ಹರಡಿಕೊಂಡಿವೆ.

'ಹಟ್ಟಿ ಸಂಸ್ಕೃತಿ'ಯ ಜನ ತಮ್ಮ ವಲಸೆಗಾರಿಕೆಯನ್ನು ಬಿಟ್ಟು ಕೊಡುತ್ತ, ನೆಲಸುಗಾರ 'ಹಳ್ಳಿ ಸಂಸ್ಕೃತಿ'ಯಲ್ಲಿ ಬೆರೆಯುತ್ತಿದ್ದರು. ಇದಕ್ಕೆ ಗಟ್ಟಿಯಾದ ಆಧಾರ ನಮ್ಮ ನಾಡಿನಲ್ಲಿ ಕಾಡುಗೊಲ್ಲ–ಊರುಗೊಲ್ಲ ; ಕಾಡು–ಕುರುಬ ಊರ ಕುರುಬ; ಕಾಡ(ಮ್ಯಾಸ)ಬೇಡ–ಊರುಬೇಡ ಎಂಬ ಸ್ಪಷ್ಟ ವ್ಯತ್ಯಾಸಗಳಿರುವುದು. ಈ ಬಗೆಯ ವ್ಯತ್ಯಾಸ ಹೊಲೆಯ – ಮಾದಿಗರಲ್ಲಿಲ್ಲ. ಕಾಡುಗೊಲ್ಲ, ಮ್ಯಾಸನಾಯಕ, ಕಾಡು ಕುರುಬರು ಬುಡಕಟ್ಟು ಸ್ಥಿತಿಯನ್ನು ಹೆಚ್ಚು ಉಳಿಸಿಕೊಂಡಿದ್ದು ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ರಕ್ಷಿಸಿಕೊಂಡಿದ್ದಾರೆ. ಅವರ ದೃಷ್ಟಿಯಲ್ಲಿ ಊರು ಸೇರಿದ ಊರುಗೊಲ್ಲ, ಊರುಕುರುಬ, ಊರ ಬೇಡರು **"ಕೆಟ್ಟು ಹೋದವರು"!** ಅಂದರೆ ಇವರು ತಮ್ಮ ಅನನ್ಯ ಸಂಸ್ಕೃತಿಯನ್ನು ಕೈಬಿಟ್ಟು ಹಳ್ಳಿ, ಗ್ರಾಮಗಳ ಇತರ (ಕೃಷಿಕರ)ಜನಕುಲಗಳ ಜೊತೆ ಬೆರೆತು ಅವರ ಜೊತೆ ಸಾಂಸ್ಕೃತಿಕ ಕೊಳುಕೊಡೆಗೆ ಪಕ್ಕಾದರು ಎಂದೇ. ಇದು ಉತ್ತರ ಭಾರತದ ಆರ್ಯ ವೈದಿಕರ, ಬೌದ್ಧ ಜೈನರ ದಾಳಿ ಆಗಮನಗಳಿಗಿಂತ ಮೊದಲೆ ನಡೆದ ಪ್ರಕ್ರಿಯೆ.

'ಸಾಂಸ್ಕೃತಿಕ ಕೊಳುಕೊಡೆ'ಗಳು ನಡೆದುವೆ ಹೊರತು ಈ ಜನಕುಲಗಳು ಒಂದರೊಳಗೊಂದು ಸಂಪೂರ್ಣ ಕರಗಿಹೋಗಲಿಲ್ಲ. ಕಾಲದ ಅಂತರ ತುಂಬ ಹೆಚ್ಚಿರುವುದರಿಂದ ಇದರ ಖಚಿತ ಸ್ವರೂಪ ಎಲ್ಲಾ ಕಡೆ ಒಂದೇ ರೂಪದಲ್ಲಿ ಉಳಿಯಲಿಲ್ಲ. ಬುಡಕಟ್ಟುಗಳು ಸಂಪೂರ್ಣ ನಾಶವಾಗದೇ ನಾನಾಗಲೇ ಸೂಚಿಸಿರುವಂತೆ ಜಾತಿಯ ಆಂತರಿಕ ರಚನೆಯಲ್ಲಿ ತಮ್ಮ ಅನನ್ಯತೆಯನ್ನು ರಕ್ಷಿಸಿಕೊಂಡವು. ಕೆಲಸಲ ವೃತ್ತಿಗಳು ಬದಲುತ್ತಿದ್ದವು ಆದರೆ ಬುಡಕಟ್ಟು ವೃತ್ತಿ ಮೂಲದ ಸಾಂಸ್ಕೃತಿಕಾಂಶಗಳು ಸಂಪೂರ್ಣ ನಾಶವಾಗಲಿಲ್ಲ. ಇವು ಪರಿಷ್ಕಾರಕ್ಕೊಳಪಡುತ್ತ ಉಳಿದು ಬಂದವು. ಇದನ್ನೆ ನಾವು ದಲಿತರ ಚರಿತ್ರೆಯ ಪುನರ್ರಚನೆಗೆ ಉಳಿದಿರುವ ಆಧಾರವೆಂದು ಹೇಳುತ್ತಿರುವುದು.

ಈಗ ಹೊಲೆಯ ಮತ್ತು ಮಾದಿಗ ಪದಗಳಿಗಿರುವ ಕರ್ನಾಟಕದ ಗ್ರಾಮನಾಮಗಳನ್ನು ನೋಡುವಾ. [ಇದೇ ರೀತಿ ಕುರುಬ, ಬೇಡ, ಒಡ್ಡ ಮೊದಲಾದ ಜಾತಿಗಳ ಹೆಸರುಗಳೂ ಕೂಡ ಗ್ರಾಮನಾಮಗಳಲ್ಲಿ ಸಾಕಷ್ಟಿವೆ. ಉದಾ: ಕುರುಬರಹಳ್ಳಿ, ಒಡ್ಡರ ಹಟ್ಟಿ ಇತ್ಯಾದಿ]

೧. **ಮಾದರ ಕಲ್ಲು** : (ಶಹಪೂರ ತಾಲೂಕು, ಚಿಂತಾಮಣಿ ತಾಲೂಕು, ದೇವದುರ್ಗ ತಾಲೂಕು).
೨. **ಮಾದಿಗರ ಹಳ್ಳಿ :** (ಬಂಗಾರಪೇಟೆ ತಾಲೂಕು, ಕೃಷ್ಣ ರಾಜಪೇಟೆ ತಾಲೂಕು).
೩. **ಮಾದರಗಾಂವ :** (ಹುಮನಾಬಾದ ತಾಲೂಕು).
೪. **ಮಾದರಹಳ್ಳಿ :** (ಕನಕಪುರ ತಾಲೂಕು, ಮದ್ದೂರು ತಾಲೂಕು, ಶ್ರೀರಂಗಪಟ್ಟಣ ತಾಲೂಕು, ಗುಂಡ್ಲು ಪೇಟೆ ತಾಲೂಕು, ಟಿ.ನರಸೀಪುರ ತಾಲೂಕು, ಮೈಸೂರು ತಾಲೂಕು, ಪಾಂಡವಪುರ ತಾಲೂಕು, ಅರಸೀಕೆರೆ ತಾಲೂಕು).
೫. **ಮಾದಗ :** (ನೆಲಮಂಗಲ ತಾಲೂಕು).
೬. **ಮಾದಿಗನ ಹಳ್ಳಿ :** (ರಾಮನಗರ ತಾಲೂಕು)

ಕೃಷ್ಣ ರಾಜಪೇಟೆ ತಾಲೂಕಿನ 'ಮಾದಿಗರ ಹೊಸಹಳ್ಳಿ'ಯನ್ನು 'ಮಾದಿಹಳ್ಳಿ' ಎಂತಲೂ ಕರೆಯುತ್ತಾರೆಂದು "ಕರ್ನಾಟಕ ಗ್ರಾಮ ಸೂಚಿ"ಯಲ್ಲಿದೆ. (ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪ್ರಕಟನೆ ೧೯೮೫) ಇದು ತುಂಬ ಮುಖ್ಯವಾದ ಸಂಗತಿ ಅಥವಾ ಆಧಾರ. ಏಕೆಂದರೆ 'ಮಾದಿ' 'ಮಾದ' ಪದಗಳಿರುವ ಗ್ರಾಮ ನಾಮಗಳು, ವ್ಯಕ್ತಿ ನಾಮಗಳ ಸಂಖ್ಯೆ ಅಪಾರ. ಅವು 'ಮಾದಿಗ'ದಿಂದ ಹುಟ್ಟಿವೆ. ಉದಾ–

೭. **ಮಾದನಹಳ್ಳಿ** : (ಜಗಳೂರು ತಾ, ಚಿಕ್ಕನಾಯಕನಹಳ್ಳಿ ತಾಲೂಕು, ಸಿರಾ ತಾಲೂಕು, ಅರಸೀಕೆರೆ ತಾಲೂಕು, ನಂಜನಗೂಡು ತಾಲೂಕು, ಸಿಂದಗಿ ತಾಲೂಕು, ಆಲೂರು ತಾಲೂಕು).

೮. **ಮಾದೇನಹಳ್ಳಿ** : (ಮದ್ದೂರು ತಾಲೂಕು, ಗುಬ್ಬಿ ತಾಲೂಕು, ಸಿರಾ ತಾಲೂಕು, ಮಧುಗಿರಿ ತಾಲೂಕು, ಪಾಂಡವಪುರ ತಾಲೂಕು, ಹೊನ್ನಾಳಿ ತಾಲೂಕು, ಚನ್ನಗಿರಿ ತಾಲೂಕು).

೯. **ಮಾದಿಹಳ್ಳಿ** : (ಚಿಕ್ಕನಾಯಕನಹಳ್ಳಿ ತಾಲೂಕು, ತಿಪಟೂರು ತಾಲೂಕು, ಕೃಷ್ಣ ರಾಜಪೇಟೆ ತಾಲೂಕು, ಅರಕಲಗೂಡು ತಾಲೂಕು, ಬೇಲೂರು ತಾಲೂಕು, ಹೊಳೆನರಸೀಪುರ ತಾಲೂಕು, ಚನ್ನರಾಯ ಪಟ್ಟಣ ತಾಲೂಕು, ಆಲೂರು ತಾಲೂಕು.)

೧೦. **ಮಾದಾಪುರ** : (ಚಿಕ್ಕನಾಯಕನಹಳ್ಳಿ ತಾಲೂಕು, ಗುಬ್ಬಿ ತಾಲೂಕು, ಸಿಗ್ಗಾಂ ತಾಲೂಕು, ಸವಣೂರು ತಾಲೂಕು, ಹರಪನಹಳ್ಳಿ ತಾಲೂಕು, ಚನ್ನಪಟ್ಟಣ ತಾಲೂಕು, ಚಾಮರಾಜನಗರ ತಾಲೂಕು, ನಂಜನಗೂಡು ತಾಲೂಕು, ಹುಣಸೂರು ತಾಲೂಕು, ಕುಷ್ಟಗಿ ತಾಲೂಕು, ಹೆಗ್ಗಡದೇವನಕೋಟೆ ತಾಲೂಕು, ಮೈಸೂರು ತಾಲೂಕು, ಟಿ.ನರಸೀಪುರ ತಾಲೂಕು, ಹುನಗುಂದ ತಾಲೂಕು, ಚನ್ನಗಿರಿ ತಾಲೂಕು, ಸೊರಬ ತಾಲೂಕು, ಹೊಸನಗರ ತಾಲೂಕು, ಅರಕಲಗೂಡು ತಾಲೂಕು, ಅರಸೀಕೆರೆ ತಾಲೂಕು, ಹೊನ್ನಾಳ್ಳಿ ತಾಲೂಕು.)

೧೧. **ಮಾದಹಳ್ಳಿ** : (ಮಳವಳ್ಳಿ ತಾಲೂಕು, ಕೆ.ಆರ್.ನಗರ ತಾಲೂಕು, ನಂಜನಗೂಡು ತಾಲೂಕು, ಯಲ್ಲಾಪುರ ತಾಲೂಕು, ಹುಣಸೂರು ತಾಲೂಕು, ಮೈಸೂರು ತಾಲೂಕು, ನಾಗಮಂಗಲ ತಾಲೂಕು : ದೇವರ ಮಾದಹಳ್ಳಿ, ದೊಂಡೆ ಮಾದಹಳ್ಳಿ.)

೧೨. **ಮಾದಮ್ಮನ ಹಳ್ಳಿ** : (ಜಗಳೂರು ತಾಲೂಕು)

೧೩. **ಮಾದಲಾಪುರ** : (ಗುಬ್ಬಿ ತಾಲೂಕು)

೧೪. **ಮಾಲನಹಳ್ಳಿ** : (ಚಿಕ್ಕ ನಾಯಕನಹಳ್ಳಿ ತಾಲೂಕು)

೧೫. **ಮಾದಾಪಟ್ಟಣ** : (ಗುಂಡ್ಲುಪೇಟೆ ತಾಲೂಕು)

೧೬. **ಮಾದಲವಾಡಿ** : (ಚಾಮರಾಜನಗರ ತಾಲೂಕು)

೧೭. **ಮಾದಳ್ಳಿ** : (ಹುಣಸೂರು ತಾಲೂಕು)

೧೮. **ಮಾದನಳ್ಳಿ** : (ಹಳಿಯಾಳ ತಾಲೂಕು)

೧೯. **ಮಾದರಸನ ಹಳ್ಳಿ** : (ಕಲಬುರ್ಗಿ ತಾ)

೨೦. **ಮದರಿ** : (ಜೇವರಗಿ ತಾಲೂಕು)

೨೧. **ಮಾದಿನೂರು** : (ಕೊಪ್ಪಳ ತಾಲೂಕು)

೨೨. **ಹಿರೇಮಾದಿಹಾಳ** : (ಗಂಗಾವತಿ ತಾಲೂಕು)

೨೩. **ಮಾದವಾಡಿ** : (ಟಿ. ನರಸೀಪುರ ತಾಲೂಕು)

೨೪. **ಮಾದನೂರು** : (ಅರಕಲಗೂಡು ತಾಲೂಕು)

೨೫. **ಮಾದಲಗೇರಿ** : (ಚನ್ನರಾಯಪಟ್ಟಣ ತಾಲೂಕು)

೨೬. **ಮಾದನಗೇರಿ** : (ಕುಮಟಾ ತಾಲೂಕು)

೨೭. **ಮಾದವಳ್ಳಿ** : (ಬೇಲೂರು ತಾಲೂಕು)

೨೮. **ಮಾದಗೋಡು** : (ಆಲೂರು ತಾಲೂಕು)

೨೯. **ಮಾದೇನಕೊಪ್ಪ :** (ಶಿವಮೊಗ್ಗ ತಾಲೂಕು)
೩೦. **ಮಾದನಹಟ್ಟಿ :** (ಜಮಖಂಡಿ ತಾಲೂಕು)
೩೧. **ಮಾದರಿ :** (ಸಿಂದಗಿ ತಾಲೂಕು)
೩೨. **ಮಾದರಸನ ಕೊಪ್ಪ :** (ಸಾಗರ ತಾಲೂಕು)
೩೩. **ಹೊಲೇರ ಹಳ್ಳಿ :** (ದೇವನಹಳ್ಳಿ ತಾಲೂಕು)
೩೪. **ಹೊಲೆ ಹರಳಹಳ್ಳಿ :** (ಹೊನ್ನಾಳಿ ತಾಲೂಕು)

ಈಗ ದಲಿತ ಸಂಸ್ಕೃತಿಗೆ ಸಮೀಪವಿರುವ ಈ ಗ್ರಾಮನಾಮಗಳನ್ನು ನೋಡಿ

೩೫. **ಪೋಲಮ್ಮನ ಹಳ್ಳಿ :** (ಗುಡಿಬಂಡೆ ತಾಲೂಕು)
೩೬. **ಪೋತೇನಹಳ್ಳಿ :** (ಗೌರಿಬಿದನೂರು ತಾಲೂಕು)
೩೭. **ಪೋಲಿನಾಯಕನ ಪಲ್ಲಿ :** (ಬಾಗೇಪಲ್ಲಿ ತಾಲೂಕು)
೩೮. **ಪೋತೆಪಲ್ಲಿ :** (ಬಾಗೇಪಲ್ಲಿ ತಾಲೂಕು)
೩೯. **ಪೊಲವಾರಪಲ್ಲಿ :** (ಬಾಗೇಪಲ್ಲಿ ತಾಲೂಕು)
೪೦. **ಪೋಲೇನಹಳ್ಳಿ, ಪೋತರಾಜಪಲ್ಲಿ, :** (ಬಂಗಾರಪೇಟೆ ತಾಲೂಕು)
೪೧. **ಪೋಲೇನಹಳ್ಳಿ :** (ಕೊರಟಗೆರೆ ತಾಲೂಕು, ಮಧುಗಿರಿ ತಾಲೂಕು)
೪೨. **ಪೋತಗಲ್ :** (ರಾಯಚೂರು ತಾಲೂಕು)
೪೩. **ಪೋತನಾಳ್, ಪೋತಾಪುರ :** (ಮಾನ್ವಿ ತಾಲೂಕು)
೪೪. **ಪೋತನಹಳ್ಳಿ :** (ಚನ್ನರಾಯಪಟ್ಟಣ ತಾಲೂಕು)
೪೫. **ಹುಲಗೇರಿ :** (ಕುಷ್ಟಗಿ ತಾಲೂಕು)
೪೬. **ಹುಲಸಗೇರಿ :** (ಕುಷ್ಟಗಿ ತಾಲೂಕು)
೪೭. **ಹುಲಸನ ಹಟ್ಟಿ :** (ಗಂಗಾವತಿ ತಾಲೂಕು)

❊ 'ಮಾದಿಗರು', ಗ್ರಾಮನಾಮಗಳಲ್ಲಿ ಬರುವಷ್ಟು 'ಹೊಲೆಯ' ಪದ ಬಂದಿಲ್ಲ.

❊ 'ಮಾದ', 'ಮಾದಿ' ಈ ಪದಗಳಿರುವ ಹೆಸರುಗಳು (ಗ್ರಾಮ ಮತ್ತು ವ್ಯಕ್ತಿನಾಮಗಳು) ಉತ್ತರ ಕರ್ನಾಟಕಕ್ಕಿಂತ ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಿವೆ. ಇದು ಮಾದಿಗರ ಸಾಂಸ್ಕೃತಿಕ ಪ್ರಸರಣದ ಖಚಿತ ಸ್ವರೂಪ ಮತ್ತು ಪ್ರದೇಶ ವ್ಯಾಪ್ತಿಯನ್ನು ನಿರೂಪಿಸುತ್ತದೆ. ಅಲ್ಲದೆ ಇತರ ದಲಿತ ಹೆಸರುಗಳಿಗಿಂತ ಈ ಹೆಸರೇ ಹೆಚ್ಚು ಸಂಖ್ಯೆಯಲ್ಲಿವೆ.

❊ 'ಮಾದ', 'ಮಾದಿ' ಪದಗಳು 'ಮಹದೇವ'ದಿಂದ ನಿಷ್ಪನ್ನವಾಗಿಲ್ಲ. ಮಾದಿಗ ಸಂಸ್ಕೃತಿಗೇ ಸೇರಿದವು. (ಮುಂದೆ ನೋಡಿ)

❊ 'ಕೊರವ' ಕುಲದ ಮಹಿಳೆಯರು 'ಪೊಲೆರಮ್ಮ' ಎಂಬ ದೈವವನ್ನು ಕಣಿಹೇಳುವ ಬುಟ್ಟಿಯಲ್ಲಿಟ್ಟುಕೊಂಡು ಆರಾಧಿಸುವರೆಂದು ಥರ್‌ಸ್ಟನ್ ಬರೆದಿದ್ದಾರೆ.

ಈ ಸಂದರ್ಭದಲ್ಲಿ ತಮಿಳುನಾಡಿನ ಗ್ರಾಮಗಳ ಸ್ವರೂಪವನ್ನು ಕುರಿತು ಥರ್‌ಸ್ಟನ್ ಹೇಳಿರುವುದನ್ನು ಗಮನಿಸುವುದು ಅರ್ಥಪೂರ್ಣ.

"ಮೊಟ್ಟ ಮೊದಲ ಭೂಮಿಯ ಸಂಬಂಧ ಪರ್‍ಯಾನ್‌ರಿಗೆ (ಹೊಲೆಯರು) ಬಂದಿತು. ಚೇರಿನತ್ತಂನಲ್ಲಿ ಇರುವ ಇವರ ಆಸ್ತಿಯ ಹಕ್ಕು ಇದನ್ನು ಸಮರ್ಥಿಸುವುದು. ಚೇರಿಗಳು ಅನಾದಿ ಕಾಲದವು. ತಮಿಳುನಾಡಿನಾದ್ಯಂತ ಗ್ರಾಮ ನಿವೇಶನಗಳಲ್ಲಿ (ನತ್ತಂ) ಎರಡು ಭಾಗಗಳಿರುತ್ತವೆ. ೧.

ಗ್ರಾಮಂ–ಸಂಸ್ಕೃತ ಮೂಲದ್ದು; ೨. ಚೇರಿ(ಕೇರಿ) ದ್ರಾವಿಡ ಮೂಲದ್ದು. ಇದಕ್ಕೆ ಸಭಾ ಸ್ಥಳ ಎಂದರ್ಥ. ಪರ್ರೈಯನ್‌ರು ಇರುವ ಸ್ಥಳ 'ಪರಚೇರಿ'. (ಹೊಲಗೇರಿ) ಗ್ರಾಮ ಮತ್ತು ಚೇರಿಗಳನ್ನು ಪ್ರತ್ಯೇಕಿಸಲಾಗಿರುತ್ತದೆ. ಗ್ರಾಮಗಳಲ್ಲಿ ಈ ಚೇರಿಗಳೇ ಮೂಲದವು. ಗ್ರಾಮ ಇದಕ್ಕೆ ನಂತರ ಅಂಟಿತು. ಕೆಲವು ಗ್ರಾಮಗಳಿಗೆ ಹಲವಾರು ಚೇರಿಗಳು ಅಂಟಿರುತ್ತವೆ. ಚಿಂಗಲ್‌ಪೇಟೆಯ ತೈಯ್ಯಾಂ ಎಂಬ ಶೂದ್ರ ಗ್ರಾಮ ಪರ್ರೈಯನ್ನರ ಏಳು ಚೇರಿಗಳಿಂದ ಮಾತ್ರ ಕೂಡಿದೆ. ಪ್ರತಿ ಚೇರಿಗೂ ಒಂದೊಂದು ಹೆಸರಿದೆ. ತಮಿಳುನಾಡಿನ ಇನ್ನೂ ಹಲವಾರು ಕಡೆ ಇಂಥ ಗ್ರಾಮಗಳಿವೆ. ಈ ಗ್ರಾಮ ಮುಖಂಡ ಪರ್ರೈಯಾನ್‌ನೇ. ಬ್ರಾಹ್ಮಣರು ಈ ಚೇರಿಗಳಿಗೆ ಬಂದರೆ ಪರ್ರೈಯಾನ್‌ರು ಮೈಲಿಗೆಯಾಯಿತೆಂದು ಭಾವಿಸಿ ಆಕಳ ಶಗಣಿ ಗೊಜ್ಜಿ ಅವರನ್ನು ಓಡಿಸುತ್ತಾರೆ. ಆದರೆ ಬ್ರಾಹ್ಮಣರು ಚೇರಿಗಳನ್ನು ಪ್ರವೇಶಿಸಿದರೆ ತಮಗೆ ಸೌಭಾಗ್ಯ ಪ್ರಾಪ್ತವಾಗುತ್ತದೆಂದು ತಿಳಿಯುತ್ತಾರೆ. ಹಾಳಾದ ಪರ ಚೇರಿಗಳು ಅಗ್ರಹಾರಗಳ ನಿರ್ಮಾಣಕ್ಕೆ ಯೋಗ್ಯವಾದ ಸ್ಥಳವೆಂದು ಭಾವಿಸಲಾಗುತ್ತಿತ್ತು. ಪರ ಚೇರಿಯ ಮನೆಗಳು ತಾತ್ಕಾಲಿಕ ನಿವಾಸಗಳಲ್ಲ".

'ಚೇರಿ'ಗೆ ಇಲ್ಲಿ ಸಭಾಸ್ಥಳವೆಂದು ಹೇಳಿದೆ. ಇದು ಬುಡಕಟ್ಟು ಕುಲಗಳು ಸೇರುತ್ತಿದ್ದ 'ಸಭೆ'ಯ ಸ್ಥಳವೇ ಆಗಿರಲು ಸಾಧ್ಯ. ತಮಿಳುನಾಡಿನ ಅನುಭವ ಒಟ್ಟು ದ್ರಾವಿಡ ಜನಕುಲಗಳ ಅನುಭವವನ್ನೇ ಪ್ರತಿನಿಧಿಸುತ್ತದೆ. ನಮ್ಮ ನಾಡಿನಲ್ಲೂ ಕೇರಿ ವಾರ್ಗಿಕವಾಗಿರುವ ಗ್ರಾಮಗಳು ಸಾಕಷ್ಟಿವೆ. ಇನ್ನೊಂದೆಡೆ ಒಂದೇ ಊರಿನಲ್ಲಿ ಬೇರೆ ಬೇರೆ ಜಾತಿ ಜನಗಳನ್ನು ಒಳಗೊಂಡ ಕೇರಿ ಹೆಸರಿರುತ್ತವೆ. ಉದಾ: ಹೊಲಗೇರಿ, ಮಾದರಕೇರಿ, ಬ್ಯಾಡರಕೇರಿ, ಕುರುಬಗೇರಿ, ಉಪ್ಪಾರಗೇರಿ, ಲಿಂಗಾಯತರ ಓಣಿ ಇತ್ಯಾದಿ.

ನೀಲಗಿರಿ ಬೆಟ್ಟದಲ್ಲಿರುವ ದ್ರಾವಿಡ ಬುಡಕಟ್ಟುಗಳಲ್ಲಿ ಕೋಟ(ತ)ರೂ ಇದ್ದಾರೆ. ಇವರು ಕರಕುಶಲಕರ್ಮಿಗಳು. ಕೋಟರ ಹಳ್ಳಿಗಳಲ್ಲಿ ಕೇರಿಗಳಿರುತ್ತವೆ. ಉದಾಹರಣೆಗೆ ಕೊಟಗಿರಿಯಲ್ಲಿ ಕಿಳ್‌ಕೇರಿ, ನಡುಕೇರಿ, ಮೇಲ್‌ಕೇರಿ ಎಂಬ ಮೂರು ಕೇರಿಗಳಿವೆ. ಇವುಗಳಲ್ಲಿ ಎರಡು ಕೇರಿಗಳ ಜನ ಒಂದೇ ಕುಲದವರು. ಹಾಗಾಗಿ ಇವರ ನಡುವೆ ವಿವಾಹ ಸಂಬಂಧವಿಲ್ಲ. ಆದರೆ ಈ ಎರಡೂ ಕೇರಿಗಳವರು ಮೂರನೇ ಕೇರಿಯ ಜನಗಳ ಜೊತೆ ವಿವಾಹ ಸಂಬಂಧವಿಟ್ಟು ಕೊಂಡಿದ್ದಾರೆ. ಇದೇ ಪ್ರದೇಶದ ಬಡಗರಲ್ಲಿ ಇಡಿ ಹಳ್ಳಿ ಒಮ್ಮೊಮ್ಮೆ ಒಂದೇ ಗೋತ್ರಕ್ಕೆ ಸೇರಿರುತ್ತದೆ.

ಭಾಷಿಕ ಆಧಾರದಿಂದ, ಭಾರತದಲ್ಲಿ ಇಂಡೋ ಆರ್ಯನ್, ದ್ರಾವಿಡಗಳಂತೆ ಆಸ್ಟ್ರೋ ಏಶಿಯಾಟಿಕ್ ಭಾಷೆ ಮಾತನಾಡುವ ಮುಂಡಾರಿ, ಓರಾನ್, ಸಂತಾಲೀ ಮೊದಲಾದ ಜನಕುಲಗಳಿವೆ. ಇವರನ್ನು ದ್ರಾವಿಡರು ಬೆಟ್ಟ ಗುಡ್ಡಗಳಿಗೆ ಅಟ್ಟಿದರು ಎಂಬ ವಾದವಿದೆ. ಇದೇ ರೀತಿ ಭಿಲ್ಲರು ಕೂಡ ದ್ರಾವಿಡ ಪೂರ್ವ ಜನಗಳೇ. ನಮ್ಮ ನಾಡಿನ ಗ್ರಾಮನಾಮಗಳಲ್ಲಿ 'ಮುಂಡ'ರ ಹೆಸರಿರುವುದು ಮುಂಡರೂ ಇಲ್ಲಿ ವಾಸಿಸುತ್ತಿದ್ದುದರ ಸೂಚನೆಯೇ. ಈ ಗ್ರಾಮಗಳು ಯಾವ ಯಾವ ತಾಲೂಕುಗಳಲ್ಲಿ ಹರಡಿಕೊಂಡಿವೆ ಎಂಬುದನ್ನು ಗಮನಿಸಿದರೆ ಮುಂಡರ ವಾಸಸ್ಥಳಗಳ ಒಂದು ನಕ್ಷೆಯನ್ನು ಕಲ್ಪಿಸಿಕೊಳ್ಳಬಹುದು. ಇವರಿಗೂ ದಲಿತರಿಗೂ ಯಾವ ಬಗೆಯ ಸಂಬಂಧವೊ ತಿಳಿಯದು. ಭಟಕಳ ತಾಲೂಕು–ಮುಂಡಳ್ಳಿ, ಮುಂಡಗೋಡು (ಮುಂಡಗೋಡು ತಾ.), ಮುಂಡಗಾನಮನೆ, ಮುಂಡಗೆ ಹಳ್ಳಿ, ಮುಂಡಗೇಸರ (ಶಿರ್ಶಿ ತಾ.), ಮುಂಡವಾಡ ಮುಂಡಕಿ (ಹಳಿಯಾಳ ತಾ.), ಮುಂಡರವಾಡ (ಜೇವರಗಿ ತಾ.), ಮುಂಡರಗಾ (ಯಾದಗೀರ ತಾ.), ಮುಂಡೂರ್ತೆ (ಮಡಿಕೇರಿ ತಾ.), ಮುಂಡಗೋಡು, ಮುಂಡನ ಹಳ್ಳಿ, ಮುಂಡ್ರೆ (ತರೀಕೆರೆ ತಾ.), ಮೂಡರ ಹಳ್ಳಿ (ಮೂಡಿಗೆರೆ ತಾ.), ಮುಂಡ್ಕೂರು (ಕಾರ್ಕಳ ತಾ.), ಮುಂಡೂರು (ಪುತ್ತೂರು, ಬೆಳ್ತಂಗಡಿ ತಾ.), ಮುಂಡರಗಿ, ಮುಂಡವಾಡ (ಮುಂಡರಗಿ ತಾ.), ಮುಂಡರಗಿ (ಬಳ್ಳಾರಿ ತಾ.), ಮುಂಡವಾಡ, ಮುಂಡೇಗಾಳಿ (ಖಾನಾಪುರ ತಾ.), ಮುಂಡರಗಿ (ದೇವದುರ್ಗ ತಾ.)

ಮುಂಡವಳ್ಳಿ (ತೀರ್ಥಹಳ್ಳಿ ತಾ.) ಮುಂಡಗಟ್ಟಿ (ಬೇಲೂರು ತಾ.), ಮುಂಡನ ಹಳ್ಳಿ (ಹೊಳೆನರಸೀಪುರ ತಾ.).

ಕೊಡಗಿನಲ್ಲಿ ಕೆಂಬಟ್ಟಿ ಹೊಲೆಯರು ಮೊಟ್ಟಮೊದಲು ನೆಲೆಗೊಂಡಿರುವ ಕೃಷಿಕರು. ಅವರ ಕುಲನಾಮ, ಸ್ಥಳನಾಮಗಳು ಒಂದೇ ಆಗಿರುವ ಅತ್ಯಂತ ಮಹತ್ವದ ವಿಷಯ ನಮ್ಮ ನಾಡಿನ ಸ್ಥಳನಾಮಗಳ, ಗ್ರಾಮರಚನೆಗಳ ಮತ್ತು ದಲಿತ ಸಂಸ್ಕೃತಿಯ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗಿದೆ. (ನೋಡಿ : ಎಂ ಜಿ. ನಾಗರಾಜ : "ಕೆಂಬಟ್ಟಿ ಹೊಲೆಯರ ಸಂಸ್ಕೃತಿ") ಕುಟ್ಟ, ಕುಟ್ಟಂದಿ, ಮಾಕುಟ್ಟ ಮೊದಲಾದ ಪ್ರಾಚೀನ ಗ್ರಾಮಗಳು ಕೊಡಗಿನಲ್ಲಿವೆ. ಕೆಂಬಟ್ಟೆ ಹೊಲೆಯರ ಮನರ ಹೆಸರುಗಳಲ್ಲಿ 'ಕುಟ್ಟ' ಪದ ಸೇರಿದೆ. ಉದಾ: ಉತ್ತು ಕುಟ್ಟಡ, ಅಜ್ಜಿನಿ ಕುಟ್ಟಡ, ಉಮ್ಮಣ ಕುಟ್ಟಡ, ಓಣಿ ಕುಟ್ಟಡ, ಕಂಬರೆ ಕುಟ್ಟಡ, ಮಚ್ಚ ಕುಟ್ಟ ಮುಂತಾಗಿ ೮೪ ಹೆಸರುಗಳನ್ನು ಸಂಗ್ರಹಿಸಲಾಗಿದೆ. (ಅದೇ ಪು. ೬೧).

ಈ ಹೆಸರುಗಳು 'ವಂಶ'ದ ಗುರುತು ಕೂಡ ಆಗಿವೆ ಎಂಬುದು ಗಮನಾರ್ಹ. ಕುಲದ ಹೆಸರು, ನೆಲೆನಿಂತ ಸ್ಥಳದ ಹೆಸರು, ಮನೆ ಹೆಸರು ಇವೆಲ್ಲ ಒಂದೇ ಆಗಿರುವ ಕೆಂಬಟ್ಟೆ ಹೊಲೆಯರ ನಿದರ್ಶನವೂ, ಹೊಲೆಯರು ಈ ನಾಡಿನ ಮೊದಲ ನೆಲಸುಗಾರರು ಹೇಗೆಂಬುದನ್ನು ವಿವರಿಸುತ್ತದೆ. ಇದು ವೈಜ್ಞಾನಿಕವಾಗಿ ಖಚಿತಗೊಳ್ಳುತ್ತಿರುವ ಸಂಗತಿ. ಕುಟ್ಟಕ್ಕೆ ಸಂವಾದಿಯಾದ 'ಕುಡಿ' (ಮಲೆಕುಡಿಯರು) ಮನೆಯ ಹೆಸರುಗಳಲ್ಲಿದೆ. ಅಡಿಯ ಮತ್ತು ಮಾರಂಗಿ ಎಂಬ ಹೊಲೆಯರ ಮನೆ ಹೆಸರುಗಳಲ್ಲೂ 'ಕುಟ್ಟ' ಪದವೇ ಇದೆ.

ಕೇರಳದ ದಲಿತರ ಮನೆಗಳಿಗೆ 'ಕುಟಿ' (ಕುಡಿ) ಎನ್ನುವುದಂಟು. ಕೊಡಗಿನಲ್ಲಿ 'ಮನೆ ಮಕ್ಕಳು' ಎಂಬರ್ಥ 'ಕುಡಿ'ಗೆ ಬಂದಿತು. (ಅದೇ ಪು. ೬೫) ಈ 'ಕುಡಿ'ಯಿಂದಲೇ ಕನ್ನಡದ ಪ್ರಖ್ಯಾತ 'ಗುಡಿ' ಹುಟ್ಟಿದ್ದು. ಹೀಗೆ ದೇವಸ್ಥಾನವಾದ 'ಗುಡಿ' ದಲಿತ ಸಂಸ್ಕೃತಿಯ ಕೊಡುಗೆಯೇ. ಇಲ್ಲಿ ಇನ್ನೊಂದು ಮುಖ್ಯ ಅಂಶವನ್ನು ಗಮನಿಸಬೇಕು–ಕೆಂಬಟ್ಟಿ ಹೊಲೆಯರ ಮುಖ್ಯ ದೈವ, ಪಾರ್ವತಿಯ ಪ್ರತಿರೂಪವಾದ "ಅಮ್ಮೆ".

ಇಂಥದೇ ವಿಶಿಷ್ಟ ಅನುಭವ ದಕ್ಷಿಣ ಕನ್ನಡ ಜಿಲ್ಲೆಯ ಕೊರಗ ಸಂಸ್ಕೃತಿಯಿಂದಲೂ ಆಗುತ್ತದೆ. ಅಸ್ಪೃಶ್ಯ ಕೊರಗರು ದಕ್ಷಿಣ ಕನ್ನಡದ ದಲಿತರಲ್ಲಿ ಪ್ರಮುಖರು. ಅವರ ೧೭ ಬಳಿಗಳು ತಾಯಿಯಿಂದ ಬಂದಿವೆ. ಪ್ರತಿ ಬಳಿಯ ಜನರಿಗೆ ಪ್ರತ್ಯೇಕ ಭೂತ (ದೈವ) ಗಳಿರುತ್ತವೆ. ಉದಾಹರಣೆಗೆ 'ಉಪ್ಪಾರು ಬಳಿ'ಯವರ ದೈವ ಜುಮಾದಿ ಭೂತ, ಅಲೆರು ಬಳಿಯವರಿಗೆ 'ಅಮ್ಮನವರು ಭೂತ'. ಇದು ಮರದ ವಿಗ್ರಹದ ರೂಪದಲ್ಲಿದೆ. **ಈ ಬಳಿಗಳ ಹೆಸರು ಕೊರಗರು ವಾಸಿಸುವ ಸ್ಥಳಗಳಿಂದ ನಿಷ್ಪನ್ನವಾಗಿವೆ** ಎಂದು ಹೇಳುತ್ತಾರೆ ಡಾ. ಪುರುಷೋತ್ತಮ ಬಿಳಿಮಲೆ. ("ಕೊರಗರ ಸಂಸ್ಕೃತಿ") ಕೊರಗರ ಇತರ ಬಳಿಗಳ ಹೆಸರು ೧. ಉಪ್ಪಾರು ೨. ಬುಟ್ಟಾರು ೩. ಕುಟ್ಟಾರು ೪. ಪಡಿಯಾರು ೫. ಬಜಾರು ೬, ಒಡಿಯಾರು ೭. ಬಂಗಾರು ೮. ಚೆರ್ಕಾಡಿ ಇತ್ಯಾದಿ.

ಕನ್ನಡನಾಡು, ಕನ್ನಡ ಜನ, ಕನ್ನಡ ಭಾಷೆ ಇವುಗಳ ಅಂತರ್‌ಸಂಬಂಧದಲ್ಲೂ ನಮ್ಮ ಚರ್ಚೆಯ ಆಶಯವೇ ವ್ಯಕ್ತವಾಗುವುದಿಲ್ಲವೇ? ಈ ಬಗೆಯ ಅಧ್ಯಯನ ನಮ್ಮಲ್ಲಿನ್ನೂ ಪ್ರಾರಂಭವಾಗಬೇಕಿದೆ.

ದಲಿತ ಸಂಸ್ಕೃತಿಯನ್ನು 'ಡೈಕ್ರೊನಿಕ್ಕಾಗಿ' ಗಮನಿಸುವಾಗ ಊಳಿಗಮಾನ್ಯ ಕಾಲದ ಕರ್ನಾಟಕದ ಗ್ರಾಮಗಳ ವಸ್ತು ಸ್ಥಿತಿಯ ಕುರಿತು ಸ್ವಲ್ಪ ಆಲೋಚಿಸಬೇಕಾಗುತ್ತದೆ. ಆಗ ವ್ಯವಹಾರಿಕವಾಗಿ ಗ್ರಾಮಗಳನ್ನು ನಾನಾ ಬಗೆಯಾಗಿ ವಿಂಗಡಿಸಲಾಗುತ್ತಿತ್ತು. ರಾಜಧಾನಿ, ನೆಲೆವೀಡು, ಮುಖ್ಯ ಪುರಗಳು, ಗ್ರಾಮ, ಹಳ್ಳಿ, ಕಾಲುವಳ್ಳಿ, ಕೀಳುವಳ್ಳಿ, ಹೀಗೆ ಅವುಗಳ ಸ್ವರೂಪ ಸ್ಥಿತಿಗಳಿಗೆ ಅನುಗುಣವಾಗಿ ವಿಂಗಡಣೆ ಇತ್ತು. ಮುಖ್ಯ

ಗ್ರಾಮವೊಂದರ ಹೆಸರನ್ನೇ ಕಿತ್ತು ಹಾಕಿ ಶಿಷ್ಟ ಹೆಸರಿಟ್ಟು ಅಗ್ರಹಾರ, ಬ್ರಹ್ಮದೇಯ, ಶಿವಪುರಿಗಳನ್ನಾಗಿ ಮಾಡಿದಾಗಲೂ ಕೆಲವು ಸಲ ಮೂಲದ ಹೆಸರುಗಳೇ ಉಳಿಯುತ್ತಿದ್ದವು. ಈ 'ಪುರ'ಕ್ಕೆ ಅನೇಕ ಕಾಲುವಳ್ಳಿ ಅಥವಾ ಕೀಳುವಳ್ಳಿಗಳನ್ನು ಸೇರಿಸಿ ಒಂದು ಘಟಕವನ್ನಾಗಿ ಮಾಡುತ್ತಿದ್ದರು.

ಗ್ರಾಮಗೊಡಗಿ, ಉಂಬಳಿಗ್ರಾಮ (Ec 8-434, 417, 427, 454, 419 ಇತ್ಯಾದಿ) ಕಾಲುವಳ್ಳಿ, ಅಗ್ರಹಾರ ಗ್ರಾಮ, ಅಮೃತಪಡಿಗೆ ಹಳ್ಳಿ, ಹುಟ್ಟುವಳಿ ಗ್ರಾಮ (೪೦೬), ಊಳಿಗ ಗ್ರಾಮ (೪೦೫), ಸರ್ವಮಾನ್ಯ ಗ್ರಾಮಗಳು (೪೬೦), ತಾಯಿಗ್ರಾಮ (Ec ೭ :೨೮೮), ಮಾನ್ಯ ಗ್ರಾಮ, ಕರಗ್ರಾಮ (Ec ೬: ೩೩೫), ದೇವದಾಯ, ಬ್ರಹ್ಮದಾಯ ಗ್ರಾಮಗಳು (Ec ೩ : ೮೬) ತಾರದಾಡಕ್ಕೆ ಸಲುವ ಗ್ರಾಮಗಳು (೮೯), ಬೀಡುಗ್ರಾಮ (SII IX – II : ೬೧೩) ಕೀಳುವಳ್ಳಿ (೬೧೩), ತಿರುವಳಿಯಾಟ ಗ್ರಾಮ (೫೪೨), ಸ್ಥಾನ ನಿರ್ವಾಹ ಗ್ರಾಮ (ಅದೇ), ತಾಯಿಸ್ಥಳ (೪೨೦), ಬತ್ತಗ್ರಾಮ (SII IX – I -146, 161) ಕುರಿಪಟ್ಟಿ (SII XI, 159) ತುರುನೆಲೆ (೧೪೬), ಕುರಿಹಟ್ಟಿ (SII XV 66, 264) ಮೊದಲಾದ ಹಲವಾರು ಹೆಸರುಗಳಿಂದ ಶಾಸನಗಳು ಫ್ಯೂಡಲ್ ಆರ್ಥಿಕ, ಸಾಮಾಜಿಕ, ಸ್ಥಿತಿಯನ್ನು ಸೂಚಿಸುವವು. ಇದೇ ರೀತಿ ತಳವೃತ್ತಿ, ದೇವದಾನ, ದೇವಗೊಡಗಿ, ಅಗ್ರಹಾರ ವೃತ್ತಿ, ನಾಡಗೊಡಗೆ, ಗೌಡಗೊಡಗಿ, ಕೆರೆಗೊಡಗಿ, ಮಠಗೊಡಗಿ, ಗೌಡಕಿ ಉಂಬಳಿ, ಕಾರುಕಾರ ಕೊಡಿಗಿ, ಗ್ರಾಮಗೊಡಗಿ, ಹಾರುಗುತ್ತಿಗೆ, ಸರ್ವಮಾನ್ಯ, ಸ್ಥಳಮಾನ್ಯ, ಸುತ್ತು ಗುತ್ತಗೆ, ಯಾಳಗೊಡಗಿ, ಉತ್ತಮ, ಮಧ್ಯಮ, ಕನಿಷ್ಠ ವೃತ್ತಿಗಳು, ಪರಮೇಶ್ವರದತ್ತಿ, ನಾಯಕವೃತ್ತಿ, ಕುಮಾರವೃತ್ತಿ, ಬುರ್ದಿನವೃತ್ತಿ, ಬೀಳವೃತ್ತಿ, ತಳವೃತ್ತಿ ಮುಂತಾದ ಪರಿಭಾಷೆ ಊಳಿಗಮಾನ್ಯ ವ್ಯವಸ್ಥೆಯ ಒಳವಿವರಗಳನ್ನು ನಿರೂಪಿಸುತ್ತವೆ. ಈ ಪರಿಭಾಷೆ, ಮತ್ತಿತರ ವಿವರಗಳು ಕಟ್ಟಿಕೊಡುವ ಫ್ಯೂಡಲ್ ಚಿತ್ರದ ಮಧ್ಯೆ, ಈ ವ್ಯವಸ್ಥೆಯ ಭಾಗವಾಗಿದ್ದ ದಲಿತರನ್ನು ಇಟ್ಟು ಅಧ್ಯಯನ ಮಾಡುವ ಅಗತ್ಯವಿದೆ, ಎಂಬ ಕಾರಣಕ್ಕೆ ಈ ವಿವರಗಳನ್ನು ಇಲ್ಲಿ ಸೂಚಿಸಲಾಯಿತು.

ಕುಟುಂಬ ನಾಮಗಳ ಬಗ್ಗೆ ಬರೆಯುವಾಗ ಡಾ. ಕಲಬುರ್ಗಿ ಅವರು ಕೆಲವು ಮುಖ್ಯ ಸಂಗತಿಗಳನ್ನು ಹೀಗೆ ತಿಳಿಸಿದ್ದಾರೆ. "ಸಮಗಾರ, ಹೊಲೇರ, ಮಾದರ ಮೊದಲಾದ ವೃತ್ತಿವಾಚಿ–ಜಾತಿವಾಚಿ ಅಡ್ಡ ಹೆಸರುಗಳು ಕೆಳವರ್ಗದವರಲ್ಲಿ ದಟ್ಟವಾಗಿ ಬಳಕೆಯಲ್ಲಿವೆ. ಮೇಲು ವರ್ಗಕ್ಕೆ ಬಂದಂತೆ ಬ್ರಾಹ್ಮಣ, ಲಿಂಗಾಯತ ಎಂಬಂತಹ ಜಾತಿವಾಚಿ ಅಡ್ಡ ಹೆಸರುಗಳು ಕಾಣಿಸಿಕೊಳ್ಳುವುದಿಲ್ಲ.... ಇವನ್ನು ನೋಡಿದರೆ ಕೆಳವರ್ಗದಿಂದ ಮೇಲುವರ್ಗಕ್ಕೆ ಹೋದಂತೆ ನಮ್ಮ ಜನಾಂಗಗಳು ಜನಾಂಗಗಳಾಗಿ ಉಳಿಯದೆ, ಕುಟುಂಬಗಳಾಗಿ ಒಡೆದುಕೊಳ್ಳುತ್ತ ಬಂದಿವೆಯೆಂದು ವಿದಿತವಾಗುತ್ತದೆ" ('ಕನ್ನಡ ನಾಮವಿಜ್ಞಾನ' ಪು. ೪೮)

"ಉತ್ತರ ಕರ್ನಾಟಕದಲ್ಲಿ ದ್ಯಾವನಮ್ಮನವರ, ಕೆಂಚವ್ವಗೋಳ ಎಂದು ಮುಂತಾಗಿ ಸ್ತ್ರೀ ನಾಮವಾಚಿ ಅಡ್ಡ ಹೆಸರು ಸಿಗುತ್ತವೆ. ಈ ಮನೆತನಗಳಲ್ಲಿ ಈ ಹೆಸರಿನ ಪ್ರಸಿದ್ಧ ಸ್ತ್ರೀಯರು ಆಗಿ ಹೋಗಿರಬಹುದೆಂದು ಹೇಳಬಹುದಾದರೂ ಇವು ದ್ರಾವಿಡರ ಮಾತೃಪ್ರಧಾನ ಕುಟುಂಬ ಪದ್ಧತಿಯ ಕುರುಹುಗಳೆಂದು ಶ್ರೀ ಬೆಂಗೇರಿ ಹೇಳುತ್ತಾರೆ". "ಮುಂಬಯಿ ಕರ್ನಾಟಕದ ಬ್ರಾಹ್ಮಣ ಮನೆತನಗಳಲ್ಲಿ ಈ ಬಗೆಯ ಹೆಸರು ಒಂದಾದರೂ ಔಷಧಕ್ಕಾದರೂ ನನಗೆ ಸಿಕ್ಕಿಲ್ಲ. ಲಿಂಗಾಯತರಲ್ಲಿ ನೂರಕ್ಕೆ ೪–೫, ಬಾರಿಕರ ಮುಂತಾದವರಲ್ಲಿ ನೂರಕ್ಕೆ ೨೦–೩೦ ಸಿಗುತ್ತವೆ. ಹರಿಜನರಲ್ಲಿಯಂತೂ ಈ ಮಿತಿ ೬೦ಕ್ಕೆ ಏರುತ್ತದೆ" ಎಂಬ ವಿವರಣೆ ಮೂಲತಃ ಬ್ರಾಹ್ಮಣರಲ್ಲಿ ಪಿತೃಪ್ರಧಾನ, ಬ್ರಾಹ್ಮಣೇತರರಲ್ಲಿ ಮಾತೃಪ್ರಧಾನ ಕುಟುಂಬ ಪದ್ಧತಿ ಅಸ್ತಿತ್ವದಲ್ಲಿದ್ದುದ್ದನ್ನು ಸೂಚಿಸುತ್ತದೆ. (ಅದೇ)

ದ್ರಾವಿಡರ ಮಾತೃಪ್ರಧಾನ ಕುಟುಂಬ ಪದ್ಧತಿಗೆ ಇದು ಒಂದು ಉತ್ತಮ ಸಾಕ್ಷಿ, ನಿಜ. ಆದರೆ ದ್ರಾವಿಡರಲ್ಲಿ ಹೊಲೆಯರು ಮಾದಿಗರೇ ಮಾತೃ ಪ್ರಧಾನ ಕುಟುಂಬದವರೆಂಬುದನ್ನು ಇಲ್ಲಿ ಮುಖ್ಯವಾಗಿ ಗುರುತಿಸಬೇಕಿದೆ.

**ವಂಚಿತ ದಲಿತರು :**

ನೆಲವನ್ನು ಹೊಲವನ್ನಾಗಿ ಪರಿವರ್ತಿಸಿದ್ದ ದಲಿತರು, ಅದರ ನಿಜವಾದ ಮಾಲಿಕರು. ಆದರೆ ಯಾವ 'ಅಧಿಕಾರವೊ' ಅವರಿಗೆ ಹಕ್ಕು ಪತ್ರ ಕೊಡಲಿಕ್ಕೆ ಅಸ್ತಿತ್ವದಲ್ಲಿರಲಿಲ್ಲವಷ್ಟೇ! ಆದರೆ ರಾಜಪ್ರಭುತ್ವ ಪ್ರಾರಂಭವಾದಾಗ ಅಂದರೆ ಬುಡಕಟ್ಟುಗಳು ವರ್ಗ–ಜಾತಿ ಶ್ರೇಣೀಕರಣಕ್ಕೆ ತುತ್ತಾದಾಗ, ಅಯಾ ಪ್ರದೇಶದ ದೊರೆ ಅಥವಾ ಅವನ ಅಧಿಕಾರಿ 'ಹಕ್ಕು ನೀಡುವ' ದೌರ್ಜನ್ಯ ಪ್ರಾರಂಭಿಸಿದ. ಈ ಹಂತದಲ್ಲಿ ಭೂಮಿಯ ನಿಜವಾದ ಒಡೆಯರೆಲ್ಲ ತಮ್ಮ ಒಡೆತನವನ್ನು ಕಳೆದುಕೊಂಡರು. ಅವರು ಯಾರ ಎದುರು ಮೊರೆಯಿಡುವಂತಿರಲಿಲ್ಲ. ವೈದಿಕ ಬ್ರಾಹ್ಮಣರಿಗೆ ಅಗ್ರಹಾರಗಳನ್ನಾಗಿ ಮಾಡಿ ಕೊಡುವ ಮೂಲಕ ಇಡಿ ನಾಡನ್ನು ಒಂದು ರೀತಿಯಿಂದ ಬ್ರಾಹ್ಮಣಶಾಹಿಗೆ ದಾನ ಮಾಡಲಾಯಿತು. ಕರ್ನಾಟಕದಲ್ಲಿ ಸಿಗುವ ಸುಮಾರು ೩೦,೦೦೦ ಶಾಸನಗಳಲ್ಲಿ ಶೇಕಡಾ ೯೦ ಅಥವಾ ಅದಕ್ಕೂ ಹೆಚ್ಚಿನವು ಹೀಗೆ ಬ್ರಾಹ್ಮಣರಿಗೆ, ಪುರೋಹಿತರಿಗೆ, ದೇಗುಲಗಳಿಗೆ ದಾನ ಮಾಡಿದ ವಿಷಯವನ್ನು ಒಳಗೊಂಡಿವೆ. ಬರಿ ರಾಜಧಾನಿ, ಪುರ, ನಗರಗಳಲ್ಲಿ ಅಷ್ಟೇ ಅಲ್ಲ ದೂರ ದೂರದ ಹಳ್ಳಿಗಳನ್ನೂ ಬಿಡದಂತೆ, ಅಗ್ರಹಾರ ವ್ಯವಸ್ಥೆಗೆ ಸೇರಿಸಿದ್ದನ್ನು ಕಾಣುತ್ತೇವೆ. ಈ ಹಂತದಲ್ಲಿ ನಿಜವಾದ ಭೂ ಒಡೆಯರಾದ ದಲಿತರಿಗೂ, ಹಕ್ಕುದಾರರಾದ ಬ್ರಾಹಣರಿಗೂ ತೀವ್ರ ಸ್ವರೂಪದ ಸಂಘರ್ಷ ನಡೆದಿರಲೇಬೇಕು. ಅದರ ಪರಿಣಾಮವೆಂದರೆ ರಾಜ್ಯ ಬಲದ ಬೆಂಬಲದಿಂದ ಬ್ರಾಹ್ಮಣರು ದಲಿತರನ್ನು ಪಾತಾಳಕ್ಕೆ ತುಳಿದುದು. ಇದು ಬಲಾತ್ಕಾರಕ (ಕೊಯಿರ್‌ಸಿವ್) ಕ್ರಮ. ಅವರ ಸಂಸ್ಕೃತಿಗೆ ಕಪ್ಪು ಮಸಿ ಬಳಿದುದು. ಬಲತ್ಕಾರಕವಲ್ಲದ (ನಾನ್ ಕೊಯಿರ್‌ಸಿವ್) ಹೊಡೆತ. ಈ ಸಂದರ್ಭದಲ್ಲಿ ಕರ್ನಾಟಕದ ತುಂಬ ಪ್ರಚಲಿತವಿರುವ ಒಂದು ಕಟ್ಟು ಕತೆಯನ್ನು ವಿಶ್ಲೇಷಿಸಲೇಬೇಕು.

**ಗೊಡ್ಡು ಕತೆ :**

ದಲಿತ ಸಂಸ್ಕೃತಿಯ ಕೇಂದ್ರಬಿಂದುವಾದ 'ಊರಮ್ಮ'ನನ್ನು ಬ್ರಾಹ್ಮಣರು ತಮ್ಮ ಮಗಳೆಂದು ಕತೆ ಕಟ್ಟಿದ್ದೇಕೆ? ಆಕೆಯನ್ನು ಹೊಲೆಯ (ಅಥವಾ ಮಾದಿಗ) ಯುವಕನೊಬ್ಬ ಮದುವೆಯಾದ. ಆಕೆಗೆ ವಿಷಯ ಗೊತ್ತಾದಾಗ, ಅವನನ್ನು ಕೊಲ್ಲಲು ಆಕೆ ಬೆನ್ನು ಹತ್ತುವಳು. ಆತ ಕೋಣನ ತಿಗ ಸೇರುತ್ತಾನೆ. ಆಕೆ ಕೋಣನ ರುಂಡವನ್ನೇ ಕಡಿಯುತ್ತಾಳೆ ಮತ್ತು ಪೂಜೆಗೊಳ್ಳುತ್ತಾಳೆ.

ಬ್ರಾಹ್ಮಣರ ಈ ದುರುದ್ದೇಶಿತ ಕೀಳುಸೃಷ್ಟಿಯ ಅಂತರಾರ್ಥವೇನು?

'ಊರಮ್ಮ' ಇಡೀ ಊರಿನ, ಈ ಊರಿಗೆ ಸಂಬಂಧಿಸಿದ ಭೂಮಿ ಕಾಣಿಯ ಅಧಿ ದೈವಯಷ್ಟೇ. ಬ್ರಾಹ್ಮಣರ ದೃಷ್ಟಿಯಲ್ಲಿ ಆಕೆಯ ನಿಜವಾದ 'ಪತಿ' ದಲಿತನೇ. ಅಂದರೆ ಗ್ರಾಮ, ಹೊಲ ಇತ್ಯಾದಿ ಎಲ್ಲಕ್ಕೂ (ಬ್ರಾಹ್ಮಣ ಪರಂಪರೆ ಇದನ್ನು 'ಅಷ್ಟ ಭೋಗ ತೇಜ ಸ್ವಾಮ್ಯ' ಎನ್ನುತ್ತದೆ) ಒಡೆಯ ದಲಿತ. (ಆದರೆ ಸ್ವತಃ ದಲಿತ ಭೂಮಿಯನ್ನು 'ತಾಯಿ' ಎಂದು ಭಾವಿಸಿದ್ದ) ಅಗ್ರಹಾರಗಳ ವ್ಯವಸ್ಥೆಯ ಮೂಲಕ ಅನ್ಯಾಯದಿಂದ ಬ್ರಾಹ್ಮಣರು ಒಡೆಯರಾಗಬೇಕಿತ್ತು. ಅವರು ದಾನ–ದತ್ತಿಗಳ ಶಾಪ ವಾಕ್ಯಗಳಲ್ಲಿ, ಭೂಮಿ ಬ್ರಾಹ್ಮಣರ ಮಗಳು, ಅದನ್ನು ಸೆಳೆದವನು ಆಕೆಯನ್ನು ಅಪಹರಿಸಿದ ಪಾಪಕ್ಕೆ ಗುರಿಯಾಗುವ'ನೆಂದು ಪದೆ ಪದೆ ಬರೆದುಕೊಳ್ಳುತ್ತಾರೆ. ಶ್ರಮಹಾಕಿ, ರಕ್ತ, ಬೆವರು ಸುರಿಸಿ ಭೂಮಿ, ಊರು ಕಟ್ಟಿದ ದಲಿತರಿಂದ "ಆಕೆಯನ್ನು" ಕಸಿಯಬೇಕಾದಾಗ 'ಅಮ್ಮ' ಬ್ರಾಹ್ಮಣರ ಹುಡುಗಿ ಆಗಬೇಕಾಯಿತು. ದಲಿತ ಆಕೆಯನ್ನು ವಂಚಿಸಬೇಕಾಯಿತು. ಆಕೆ ಗಂಡನನ್ನೇ ಕೊಲೆಮಾಡಿ (ಮಕ್ಕಳನ್ನು ಕೂಡ!) ಪೂಜೆಗೊಳ್ಳುವಂತಾಯಿತು. ಇದು ಯಾವ ಭಾರತೀಯ ಸಂಸ್ಕೃತಿಗೆ ಹೊಂದುವ ತರ್ಕ ಅಥವಾ ತತ್ವ ಹೇಳಿ? ಬ್ರಾಹ್ಮಣರು ಹುಟ್ಟಿಸಿದ ಇಂಥ ಹಲವಾರು ಕತೆಗಳು ಸಂಸ್ಕೃತಿಯ ಗೊಡ್ಡು ವ್ಯಾಖ್ಯಾನಕ್ಕೆ ದಾರಿ ಮಾಡಿಕೊಟ್ಟವು ಎಂಬುದೇ ಖೇದದ ಸಂಗತಿ.

ದಲಿತರನ್ನು ಅಸ್ಪೃಶ್ಯರನ್ನಾಗಿ ಮಾಡಿದುದು ದೇಶವ್ಯಾಪಿ ನಡೆದ ಭಾಯಾನಕ ಚಿತ್ರ. 'ಮನಸ್ಮೃತಿ' ಮೊದಲಾದ ವೈದಿಕರ ಲಿಖಿತ ದಾಖಲೆಗಳಲ್ಲಿ ಇದು ಬೇರೆ ಬೇರೆ ವಿಧದಲ್ಲಿ ಚಿತ್ರಿತವಾಯಿತು. ಇದನ್ನು ಅಂಬೇಡಕರ ಅವರು ಎಳೆ ಎಳೆಯಾಗಿ ವಿಶ್ಲೇಷಿಸಿದ್ದಾರೆ.

ಈಗಾಗಲೆ ದ್ರಾವಿಡ ಪಶುಪಾಲಕರ ಜತೆ ಸಹಬಾಳ್ವೆ ಮಾಡುತ್ತಿದ್ದ ದಲಿತರು ಬ್ರಾಹ್ಮಣರ ಕ್ರೌರ್ಯಕ್ಕೆ ತುತ್ತಾದಾಗ ಅವರಿಂದ ಬೇರ್ಪಡಿಸಲ್ಪಟ್ಟರು. ದಲತೇತರ ದ್ರಾವಿಡ ಜನಕುಲಗಳು ಬ್ರಾಹ್ಮಣರ ಹಿಡಿತಕ್ಕೆ ಸಿಕ್ಕವು. ಅಂದರೆ ಜಾತಿ ಶ್ರೇಣೀಕರಣಕ್ಕೆ ಸಿಕ್ಕವು. ಏಕೆಂದರೆ ಅವು ಈಗ ಭೂಮಿಯ ಉಳುಮೆಗಾರರಾಗಲು ಸಾಧ್ಯವಿತ್ತು. ಜಮೀನುದಾರರೋ, ರೈತರೋ, ಕೂಲಿಕಾರರೋ ಆಗಿ ಈ ಮಧ್ಯಮ ಜಾತಿ ಜನ ಪರಂಪರಾಗತವಾಗಿದ್ದ ದಲಿತರ ಸಂಬಂಧಕ್ಕೆ ದ್ರೋಹ ಮಾಡಿದರು. ಒಟ್ಟಾರೆ ಬ್ರಾಹ್ಮಣೀಕರಣ ಕ್ರಿಯೆ ಸರಳರೂಪದಲ್ಲಿ ನಡೆದಿಲ್ಲ ಎಂಬುದು ನಮ್ಮ ನಾಡಿನ ಜನಕುಲಗಳ ಅಧ್ಯಯನದಿಂದ ಗೊತ್ತಾಗುತ್ತದೆ.

ಇದರ ಸಂಕೀರ್ಣ ಸ್ವರೂಪ ಹೇಗಿದೆ ಎಂಬುದಕ್ಕೆ ಒಂದು ಚಿಕ್ಕ ನಿದರ್ಶನ. ಕರ್ನಾಟಕದ ಬ್ರಾಹ್ಮಣರು (ಅಥವಾ ದ್ರಾವಿಡ ನಾಡುಗಳ ಬ್ರಾಹ್ಮಣರು) ಆರ್ಯವೈದಿಕರಲ್ಲ. ಅವರು ಸ್ಥಳೀಯ ಜನಸಮುದಾಯಗಳಿಂದಲೇ ಬ್ರಾಹ್ಮಣರಾಗಿ 'ಎತ್ತರಿಸಲ್ಪಟ್ಟರು' ಎನ್ನುವುದಾದರೆ ಇವರು ಮೂಲದಲ್ಲಿ ಯಾವ ಕುಲದವರು? ಅಂದರೆ ದಲಿತೇತರ ದ್ರಾವಿಡ ಜನಕುಲಗಳನ್ನು ಒಡೆದುಹಾಕಿ ಅದರಲ್ಲೊಂದು ಭಾಗವನ್ನು ಬ್ರಾಹ್ಮಣರನ್ನಾಗಿ ಮಾಡಲಾಯಿತೇ? ಈ ಬಗೆಯ ಊಹೆಗೆ ಅವಕಾಶವಾಗುವ ಒಂದು ನಿದರ್ಶನವಿದೆ– ಮಾಧ್ವ, ಶಂಕರ, ರಾಮಾನುಜ ಈ ಯಾವುದೇ ಪಂಥಗಳಿಗೆ ಸೇರಿದ ಕರ್ನಾಟಕದ ಬಹಳಷ್ಟು ಬ್ರಾಹ್ಮಣರ 'ಮನೆದೇವರು', 'ಕುಲದೇವರು'ಗಳು ಮತ್ತು ಅವುಗಳಿಗೆ ಸಂಬಂಧಪಟ್ಟ

ವಿಧಿಯಾಚರಣೆಗಳು. ಮೈಲಾರ, ಉರುಕುಂದಿ ವೀರಣ್ಣ, ಎಲ್ಲಮ್ಮ ಮೊದಲಾದ ಜನಪದ ದೈವಗಳು ಮನೆ ದೇವರಾಗಿರುವವರು ಮುಂಜಿ, ಮದುವೆ ಮೊದಲಾದ ಕುಟುಂಬ ಸಂಬಂಧಿ 'ರಿಚ್ಯುಯಲ್'ಗಳ ಮೊದಲು ಜೋಗತಿಯರಾಗಿ ಅಥವಾ ಜೋಗತಿಯರನ್ನು ಕರೆಸಿ ಹಡ್ಡಲಗಿ ತುಂಬಿಸುವುದು, ಬೇವುಡೆ ಉಡುವುದು, ಗ್ವಾರಪ್ಪ, ಗ್ವಾರಮ್ಮರನ್ನು ಕರೆಸಿ ಡೋಣಿ ತುಂಬಿಸುವುದು, ಗುಗ್ಗಳ ಹೊರುವುದು ಕಡ್ಡಾಯ.

**ಇದರರ್ಥವೇನು ?**

ಈ ಬ್ರಾಹ್ಮಣರು ದ್ರಾವಿಡ ಜನಕುಲಗಳಿಗೆ ಸೇರಿದವರೆಂದೇ? ಬ್ರಾಹ್ಮಣರಾಗಿ ಪರಿವರ್ತನೆಗೊಂಡ ನಂತರವೂ ತಮ್ಮ ಮೊದಲ ಕುಲಗಳ ಆಚರಣೆಗಳನ್ನು ಬಿಟ್ಟು ಕೊಡಲಿಲ್ಲ. ಕಪ್ಪು ಜನರು ಋಗ್ವೇದ ಕಾಲದಿಂದಲೇ ಬ್ರಾಹ್ಮಣರಾಗುತ್ತಿದ್ದರೆಂಬುದಕ್ಕೆ ಅಶ್ವಿನಿಗಳು, ಕಣ್ವರು, ಆಂಗಿರಸ, ದಿವೋದಾಸರ ನಿದರ್ಶನಗಳಿವೆ. ಮಹಾಭಾರತದಲ್ಲಿ ವೈದ್ಯರಾದ ಆಶ್ವಿನಿ ದೇವತೆಗಳನ್ನು ಶೂದ್ರರೆಂದು ಹೇಳಿದೆ. ಅಂದರೆ ಅವರು ಕೃಷಿಕ ದೈವಗಳಂತೆ. (ಮುಂದೆ ನೋಡಿ)

'ಎಲ್ಲಮ್ಮ', 'ಮೈಲಾರ' ಮೊದಲಾದ ಜನಪದ ದೈವಗಳು ದ್ರಾವಿಡ ದಲಿತರು ಮತ್ತು ದ್ರಾವಿಡ ಪಶುಪಾಲಕರು ಸಮೀಕರಣಗೊಂಡುದರ ಫಲವಾಗಿ ಹೆಚ್ಚು ಪ್ರಸರಣಗೊಂಡವು. ಅವಕ್ಕೆ ಸಂಬಂಧ ವಿಧಿಯಾಚರಣೆಗಳೇ ಇದಕ್ಕೆ ಸಾಕ್ಷಿ. "ಕನ್ನಡ ಜನಪದ ಗುರು ಪರಂಪರೆ" ಎಂಬ ಪುಸ್ತಿಕೆಯಲ್ಲಿ ಇದರ ವಿವರಗಳನ್ನು ವಿವೇಚಿಸಿದ್ದೇನೆ. ಮಹತ್ವದ ಒಂದೆರಡು ಸಂಗತಿಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಬೇಕಿದೆ. ಅವು ದಲಿತ ಸಂಸ್ಕೃತಿ ವಿವೇಚನೆಗೂ ಸಂಬಂಧಪಡುತ್ತವಾದ್ದರಿಂದ.

ದಾಸಪ್ಪ, ದಾಸಮ್ಮ, ಗ್ವಾರಪ್ಪ, ಗ್ವಾರಮ್ಮ, ಜೋಗಪ್ಪ, ಜೋಗಮ್ಮ, ಅಸಾದಿ, ರಾಣಿಗ್ಯಾ, ಭೂತೇರು, ಮಾತಂಗಿ, ದುರುಗೇರು, ಬಿಂಗೇರು ಮೊದಲಾದ ಜನಪದ ಗುರುಗಳು ೧. ಲಿಂಗಭೇದ ೨. ಜಾತಿಭೇದ ೩. ವರ್ಗಭೇದಗಳನ್ನು ಮಾಡುವುದಿಲ್ಲ. ಏಕೆಂದರೆ ಈ ಎಲ್ಲ ತಾರತಮ್ಯಗಳು ಹುಟ್ಟುವ ಮೊದಲ ಸಾಮಾಜಿಕ ಸಂದರ್ಭದಲ್ಲಿ ಇವು ಹುಟ್ಟಿವೆ. ಬುಡಕಟ್ಟು ಸಮಾಜದಲ್ಲಿ ಈ ಯಾವ ವ್ಯತ್ಯಾಸಗಳಿರುವುದಿಲ್ಲ. ಇಂಥ ದ್ರಾವಿಡ ಬುಡಕಟ್ಟು ಸಮಾಜ ಕರ್ನಾಟಕದಲ್ಲಿ ಎಷ್ಟು ಕಾಲ ಅಸ್ತಿತ್ವದಲ್ಲಿತ್ತೋ? ಅದರ ರಾಜಕೀಯ, ಆರ್ಥಿಕ, ಸಾಮಾಜಿಕ, ಸ್ವರೂಪಗಳೇನಿದ್ದುವೋ ಎಲ್ಲವೂ ಶೋಧನೆಯಿಲ್ಲದೇ ಕೂತಿವೆ.

ಜನಪದ ಗುರುವಾಗಲು ಯಾವ ಜಾತಿ, ಕುಲದ ಸ್ತ್ರೀ ಅಥವಾ ಪುರುಷರಿಗೂ ಸಾಧ್ಯವಿದೆ. ಅವರು ವಿವಾಹಿತರೊ, ಅವಿವಾಹಿತರೊ ಆಗಿರಬಹುದು. 'ದೀಕ್ಷೆ' ಪಡೆದು ಸಾಂಕೇತಿಕವಾಗಿಯಾದರೂ ಭಿಕ್ಷೆ ಎತ್ತಬೇಕು. ಆಯಾ ದೈವ ಪಂಥಗಳ ದೇವದೂತರಂತೆ ಅವರು ಒಕ್ಕಲು ಮನೆಗಳ ಮತೀಯ ವಿಧಿಯಾಚರಣೆಗೆ 'ಗುರುಗಳಾಗಿ' ಕಾರ್ಯ ನಿಭಾಯಿಸುತ್ತಾರೆ. ಇವರು ಎಷ್ಟೋ ಸಲ ಅದ್ಭುತ ಗಾಯಕರು, ನಟರು, ಮಹಾಕಾವ್ಯ, ಖಂಡಕಾವ್ಯ, ಬಿಡಿ ಹಾಡುಗಳ ರೂಪದಲ್ಲಿ ಆಯಾ ದೈವಗಳ 'ಚರಿತ್ರೆ'ಯನ್ನು ಮೌಖಿಕವಾಗಿ ಉಳಿಸಿಕೊಂಡು ಬಂದಿರುವವರು. ರಂಗಭೂಮಿಯ ಬೆಳವಣಿಗೆಯಲ್ಲೂ ಇವರ ಕೊಡುಗೆ ಅಪಾರ.

ನಾವು ಈ ಸಂದರ್ಭದಲ್ಲಿ ಗಮನಿಸಲೇಬೇಕಾದ ದೈವರಾಧನೆ (ಭೂತಾರಾಧನೆ) ಇದೆ. ಇದು ದಕ್ಷಿಣ ಕನ್ನಡದ ದಲಿತ ಸಂಸ್ಕೃತಿಯ ವೈಶಿಷ್ಟ್ಯ. ಭೂತದೈವಗಳಾಗಿ ಆರಾಧನೆಗೊಳ್ಳುವವರು ಪಂಬದ, ಪರವ, ನಲಿಕೆ ಮೊದಲಾದ ಅಸ್ಪೃಶ್ಯ ಜಾತಿಜನ. ಬ್ರಾಹ್ಮಣರೂ ಕೂಡ ಈ ಭೂತಗಳಿಗೆ ಹೆದರಿ ಆರಾಧನೆಯಲ್ಲಿ ಪಾಲ್ಗೊಳ್ಳುತ್ತಾರೆ. ಪುರೋಹಿತರಾಗಿ ಅಲ್ಲ, 'ಭಕ್ತ'ರಾಗಿ. ದಲಿತ ಸಂಸ್ಕೃತಿ ಚರಿತ್ರೆಯಲ್ಲಿ ಭೂತಾರಾಧನೆ ಅದ್ಭುತವಾದ ಅಧ್ಯಾಯ.

ವಿಚಿತ್ರವೆಂದರೆ ಕರ್ನಾಟಕದ ಬ್ರಾಹ್ಮಣರು ತಾವು ದ್ರಾವಿಡರೆಂದು ಹೇಳಿಕೊಳ್ಳದೆ ಆರ್ಯ ವೈದಿಕರನ್ನೇ ಮಕ್ಕಿಕಾಮಕ್ಕಿ ಅನುಸರಿಸಲು ಯತ್ನಿಸುತ್ತ ಅವರಿಗಿಂತ ಹೆಚ್ಚಿನ ಶೋಷಣೆಗೆ ನಿಂತರು. ದಕ್ಷಿಣ ಭಾರತದ ದ್ರಾವಿಡ ಮೂಲದ ಬ್ರಾಹ್ಮಣರೇ ಬ್ರಾಹ್ಮಣ್ಯವನ್ನು ಹೆಚ್ಚು ಅಧಿಕೃತವಾಗಿ ಉಳಿಸಿಕೊಂಡು ಬಂದರೆಂದು ಕೇಳುತ್ತೇವೆ. ನಂಬುದಿರಿ ಬ್ರಾಹ್ಮಣರನ್ನು (ಕಪ್ಪು) ಯಾರು ತಾನೆ ಆರ್ಯವೈದಿಕ (ಬಿಳಿ)ರೆನ್ನಲು ಸಾಧ್ಯ? ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳ ಕೆಲ ಬ್ರಾಹ್ಮಣರನ್ನು 'ಮದ್ಯಾಹ್ನ ಮಾದಿಗರು' ಎಂದೂ, ಮೈಸೂರು

ಜಿಲ್ಲೆಯ ಕೆಲ ಬ್ರಾಹ್ಮಣರನ್ನು 'ಮಧ್ಯಾಹ್ನದ ಹೊಲೆಯ'ರೆಂದೂ ಕರೆಯುತ್ತಾರೆ. ಮದ್ಯಾಹ್ನದ ನಂತರ ಮರುದಿನ ಬೆಳಗಿನವರೆಗೆ ಈ ಬ್ರಾಹ್ಮಣರು ಹೊಲೆಯರು ಅಥವಾ ಮಾದಿಗರು ಆಗುತ್ತಾರೆ. ಬಳ್ಳಾರಿ ಚಿತ್ರದುರ್ಗಗಳಂಥ ಮಧ್ಯ ಕರ್ನಾಟಕದ ಜಿಲ್ಲೆಗಳಲ್ಲಿ ಮಾದಿಗರ ಸಂಖ್ಯೆ ಹೆಚ್ಚಿದೆ. ಇವರು ಆಂಧ್ರದಿಂದ ತುಂಬ ಹಿಂದೆ ವಲಸೆ ಬಂದು ಕನ್ನಡಿಗರಾದವರು. ಈ ಭಾಗದ ಹಲವಾರು ಬುಡಕಟ್ಟು ಮತ್ತು ಜಾತಿಗಳ ತೌಲನಿಕ ಅಧ್ಯಯನ ಮಾಡುವ ಜರೂರಿದೆ. ಏಕೆಂದರೆ ಹರಪನಹಳ್ಳಿ, ದಾವಣಗೆರೆ ಭಾಗದಲ್ಲಿ 'ಮ್ಯಾಸ ಮಾದಿಗರು' ಎಂಬ ಮಾದಿಗರ ಒಳಪಂಗಡವಿದೆ. ಇವರು ಮೊದಲು ತಾವು ಮ್ಯಾಸ ನಾಯಕರಾಗಿದ್ದೇವೆಂದು ಹೇಳಿಕೊಳ್ಳುವರು. ಯಾವ ಕಾರಣದಿಂದ ಮ್ಯಾಸ ಮಾದಿಗರಾದರೊ ತಿಳಿಯದು. ಇತರ ಮಾದಿಗರಿಗೂ, ಮ್ಯಾಸ ಮಾದಿಗರಿಗೂ ಕೊಳುಕಡೆಗಳಿಲ್ಲ. ಮ್ಯಾಸ ನಾಯಕರು ಬಳ್ಳಾರಿ, ಚಿತ್ರದುರ್ಗ ಮೊದಲಾದ ಜಿಲ್ಲೆಗಳಲ್ಲಿರುವ ಮುಖ್ಯ ಬುಡಕಟ್ಟು ಜನ. ಇವರ ಪ್ರಭಾವ ಮಾದಿಗರ ಮೇಲಾಗಿರುವುದು ಖಂಡಿತ. ಮೈಸೂರು ಕಡೆ ಹೊಲೆಯರು ಹೆಚ್ಚಿರುವುದರಿಂದ ಇಲ್ಲಿ ಮಧ್ಯಾಹ್ನ ಹೊಲೆಯರಿದ್ದಾರೆ. ಈ ಬ್ರಾಹ್ಮಣರು ಮೊದಲು ದಲಿತರಾಗಿದ್ದಿರಬೇಕು. ಇಂಥ ವಿಷಯಗಳು ಚರ್ಚೆಗೆ ಒಳಪಡದಿರುವುದು ಆಶ್ಚರ್ಯಕರ. ತಮಿಳುನಾಡಿನಲ್ಲಿ ಮಧ್ಯಾಹ್ನ ಹೊಲೆಯರಿಗೆ 'ಪ್ರಥಮ ಶಾಖೆ'ಯವರೆಂದು ಹೇಳುತ್ತಾರೆ. (ಥರ್‌ಸ್ಟನ್–VI–ಪು.೨೨೩)

ಒಟ್ಟಾರೆ ಇದರಿಂದಾದ ಪರಿಣಾಮವೆಂದರೆ ದ್ರಾವಿಡರಲ್ಲಿದ್ದ ನಾನಾ ಬಗೆಯ ಜ್ಞಾನ ಸಂಸ್ಕೃತಕ್ಕೆ ಸೇರಿದ್ದು. ಮತಂಗಮುನಿಯ 'ಬೃಹದ್ದೇಶಿ'ಯನ್ನು ಇಲ್ಲಿ ಉದಾಹರಿಸಬಹುದು. ಅವೈದಿಕವೆನ್ನುವಂಥ ದ್ರಾವಿಡರ ಯಾವ ಬಗೆಯ ಸಂಸ್ಕೃತಿ, ಅವರ ದೇಶಿ ಭಾಷೆಗಳಲ್ಲಿ ಉಳಿದು ಬರದೇ ಇರುವ ಅಚ್ಚರಿಯಿದೆ. 'ತಂತ್ರ', 'ಯೋಗ', 'ಆಯುರ್ವೇದ', 'ಸಾಂಖ್ಯ', 'ನ್ಯಾಯ', 'ವೈಶೇಷಿಕ', 'ಲೋಕಾಯತ' ಇವೆಲ್ಲವೂ ಸಂಸ್ಕೃತದಲ್ಲೇ ಅಷ್ಟಿಷ್ಟು ಉಳಿದಿವೆ.

ಯಾವುದನ್ನು ಭಾರತೀಯ ಸಂಸ್ಕೃತಿ ಎಂದು ಹೇಳಲಾಗುತ್ತದೆಯೋ ಅದು ಈ ಎಲ್ಲ ಜ್ಞಾನಗಳಿಲ್ಲದಿದ್ದರೆ ಶ್ರೇಷ್ಠ ಎಂಬ ಹೆಗ್ಗಳಿಕೆಗೆ ಒಳಗಾಗುತ್ತಲೇ ಇರಲಿಲ್ಲ. ಇವೆಲ್ಲವನ್ನೂ 'ಎಷ್ಟು ಬೇಕೊ ಅಷ್ಟು', 'ಎಲ್ಲಿ ಬೇಕೋ ಅಲ್ಲಿ', ತಿರುಚಿ ಬ್ರಾಹ್ಮಣರು ಬಳಸಿಕೊಂಡಿದ್ದರಿಂದಲೇ ಎದೆಯುಬ್ಬಿಸಿ ಉತ್ತಮರೆಂದು ಹೇಳಿಕೊಳ್ಳುವಂತಾದರು. (ವಿವರಗಳಿಗೆ ನೋಡಿ–'ಲೋಕಾಯುತ'; ದೇ.ಪ್ರ.ಚ.)

**ಒಂದು ಸ್ಥೂಲ ಚಿತ್ರ :**

'ಹೊಲೆಯ' ಮತ್ತು 'ಮಾದಿಗ' ಎಂಬ ಪದಗಳ ಕುರಿತ ಚರ್ಚೆಯನ್ನು ಕೈಗೆತ್ತಿಕೊಳ್ಳುವ ಮೊದಲು ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಚಾರಿತ್ರಿಕವಾಗಿ ಅಸ್ಪೃಶ್ಯರ ಸ್ಥಿತಿ ಏನಿತ್ತು ಎಂಬುದರ ಬಗ್ಗೆ ಸ್ಥೂಲವಾದ ಒಂದು ಚಿತ್ರವನ್ನು ಕಟ್ಟಿಕೊಳ್ಳಬೇಕಿದೆ.

'ಹೊಲೆಯ', 'ಮಾದಿಗ' ಎಂಬ ಜಾತಿ ಹೆಸರುಗಳು ಕರ್ನಾಟಕದ ಅಸ್ಪೃಶ್ಯರವು. ಬೇರೆ ಬೇರೆ ರಾಜ್ಯಗಳಲ್ಲಿ ಇವರ ಹೆಸರು ಬೇರೆ ಬೇರೆಯಾಗಿದ್ದರೂ ಸಂಸ್ಕೃತಿ ಪರಂಪರೆಯಲ್ಲಿ ಸಾಕಷ್ಟು ಸಾಮ್ಯಗಳಿರುವಂತೆ ಕಾಣುತ್ತದೆ. ಇದು ಭಾರತದ ದಲಿತರೆಲ್ಲ ಒಂದೇ ಮೂಲದವರೆಂಬುದನ್ನು ಸೂಚಿಸುತ್ತದೆ. ಹಲವು ಕಡೆ ಹೆಸರುಗಳಲ್ಲೂ ಹೋಲಿಕೆಗಳಿವೆ. ಉದಾ: ಗುಜರಾತದಲ್ಲಿ ಹರಳಯ್ಯ, ಮಾದಿಗ, ರಾಣಿಯರ, ಅಸದರ, ಚಲವಾದಿ (ಚನ್ನಯ್ಯ) ಚನ್ನದಾಸರ ಕಕ್ಕಯ್ಯ, ಹಲ್ಸರ, ಹೊಲೆಯ, ಮನಿಮಾದಿಗ, ಎಂಬ ಹೆಸರಿವೆ. ಮಹಾರಾಷ್ಟ್ರದಲ್ಲಿ ಹರಳಯ್ಯ, ಮಾದರ, ಮಾದಿಗ, ಚಲವಾದಿ, ಮನಿಮಾದಿಗ, ಮಾತಂಗ, ಹೊಲೆಯ ಎಂದೂ ಓಡಿಸಾದಲ್ಲಿ ಮಾದಿಗ, ರಾಜಸ್ಥಾನದಲ್ಲಿ ಬಲಗೈ ಬಿಡಗೈ (ಎಡಗೈ ?) ಅಸದರು, ಹರಳಯ್ಯ, ಮಾದರ, ಮಾದಿಗ, ಮನಿಮಾದಿಗ ಎಂಬ ಹೆಸರಿವೆ.

ದಲಿತರು ದೇಶವ್ಯಾಪಿಯಾಗಿ ನೆಲೆಗೊಂಡ ಸಮಾಜವಾಗಿದ್ದುದೇ ನಿಜವಿದ್ದರೆ, ಋಗ್ವೇದ ಮೊದಲಾದ ವೈದಿಕರ ಲಿಖಿತ ಪರಂಪರೆಯಲ್ಲಿ ದಲಿತರ ಕುರುಹುಗಳನ್ನು ಗುರುತಿಸಲು ಸಾಧ್ಯವೇ? ವರ್ಣಗಳೇ ಇರದಿದ್ದ ಋಗ್ವೇದದ ಮೊದಲ ಹಂತದಲ್ಲಿ ಕಂಡುಬರುವ ದಲಿತರ ಸಂಸ್ಕೃತಿ ಎಂಥದು? ಮೊಟ್ಟಮೊದಲು ವರ್ಣವ್ಯವಸ್ಥೆ ರೂಢಿಯಾದಾಗ ದಲಿತರ ಸ್ಥಿತಿ ಏನಿತ್ತು? ಶೂದ್ರ ವರ್ಣದಿಂದ ದಲಿತರು ಯಾವಾಗ ಪ್ರತ್ಯೇಕಗೊಂಡರು? ಈ ಬಗೆಯ ಪ್ರಶ್ನೆಗಳು 'ದಲಿತರ ಚರಿತ್ರೆ'ಯ ದೃಷ್ಟಿಯಿಂದ ಮುಖ್ಯವಾಗುತ್ತವೆ.

ಬರಿ ಹೊಲೆಯ, ಮಾದಿಗರಂಥ ಜಾತಿಗಳಷ್ಟೇ ಅಲ್ಲ ದಲಿತೇತರ ಎನಿಸುವ ಕೆಲವು ಜಾತಿಗಳು ಹಲವು ಪ್ರದೇಶಗಳಲ್ಲಿ ಅಸ್ಪೃಶ್ಯ ಜಾತಿಗಳಾಗಿರುವುದು ವಿಶೇಷ. ಉದಾಹರಣೆಗೆ ಬಿಹಾರದಲ್ಲಿ ಕ್ಷೌರಿಕ ಅಪವಿತ್ರ, ಆದರೆ ಉತ್ತರ ಪ್ರದೇಶ ಮತ್ತು ಬಂಗಾಲಗಳಲ್ಲಿ ಅಲ್ಲ. ಪಂಜಾಬಿನಲ್ಲಿ ಅಸ್ಪೃಶ್ಯತೆ ಸಾಪೇಕ್ಷವಾಗಿ ದುರ್ಬಲ. ದೆಹಲಿ ಪಂಜಾಬಗಳಲ್ಲಿ ಚರ್ಮದ ಚೀಲದಲ್ಲಿ ಜನ ನೀರು ಕುಡಿಯುತ್ತಾರೆ. (ಡ್ಯೂಮಾಂಟ್: 'ಹೊಮೊಹೈರಾರ್ಕಿಕಸ್'. ಪು ೯೭)

ಆರ್.ಎಸ್.ಶರ್ಮಾ ಅವರು ಭಾರತದ ಶೂದ್ರರ ಬಗ್ಗೆ ಒಳ್ಳೆಯ ಅಧ್ಯಯನ ಮಾಡಿದ್ದಾರೆ. ('ಶೂದ್ರಾಸ್ ಇನ್ ಎನ್ಸಿಯಂಟ್ ಇಂಡಿಯಾ') ಅವರ ಕೆಲವು ಅಭಿಪ್ರಾಯಗಳನ್ನು ಇಲ್ಲಿ ನೋಡಬೇಕಿದೆ–

ಅಥರ್ವಣವೇದದ ಕಾಲಕ್ಕೆ ವರ್ಗಗಳು ಸೃಷ್ಟಿಯಾದವು. ಆರ್ಯ ಕೆಲಸಗಾರರೂ, ಸಾಲಗಾರರೂ 'ಶೂದ್ರ'ರಾದರು. ಕ್ರಿ.ಪೂ. ೪೦೦ರಲ್ಲಿ ಶೂದ್ರ ಎಂಬ ಬುಡಕಟ್ಟಿತ್ತು. ಮಹಾಭಾರತದಲ್ಲಿಯೂ ಶೂದ್ರ ಬುಡಕಟ್ಟಿನ ಪ್ರಸ್ತಾಪವಿದೆ. ಅಥರ್ವಣವೇದದಲ್ಲಿ ಉಪನಯನದ ಪ್ರಥಮ ಉಲ್ಲೇಖವಿದೆ. ವೇದ ಕಾಲದಲ್ಲಿ ಶೂದ್ರರಿಗೂ ಉಪನಯನವಿತ್ತು. ವೇದೋತ್ತರ ಕಾಲದಲ್ಲಿ ಅದು ಇಲ್ಲವಾಯಿತು.

ಇರಾನಿನಲ್ಲಿ 'ಅಹುರ' ದೇವರು, ಆದರೆ ಭಾರತದಲ್ಲಿ 'ಅಸುರ' ರಾಕ್ಷಸನಾದ. ದಾಸ, ಶೂದ್ರರು, ಅಸ್ಪೃಶ್ಯರಾಗಿರಲಿಲ್ಲ. ಮೊದಲ ಉಪನಿಷತ್ತುಗಳಲ್ಲಿ ಶೂದ್ರನಿಗೆ 'ಪೂಷನ್' ಎಂದು ಹೇಳಲಾಗಿದೆ. 'ಪೂಷನ್' ಎಂದರೆ ಸಮಾಜಕ್ಕೆ ಅನ್ನ ಹಾಕುವವ, ಭೂಮಿ ಉಳುವವ ಎಂದರ್ಥ. ಅದನ್ನು

ಮೇಲ್ವರ್ಗದವರು 'ಬಲಿಪೂಜೆ'ಗೆ ಕಸಿದುಕೊಂಡರು. ಜೈಮಿನಿ ಬ್ರಾಹ್ಮಣದ ಕಾಲಕ್ಕೆ ವೈಶ್ಯರಿಗೆ 'ಪೂಷನ್' ಎನ್ನಲಾಯಿತು.

ಗೌತಮನ ಪ್ರಕಾರ (ಕ್ರಿ.ಪೂ ೫೦೦) ರೈತರು, ನೇಕಾರರು, ಬಡಿಗರು, ಕಂಬಾರರು, ಚರ್ಮಕಾರರು, ಕುಂಬಾರರು, ಶೂದ್ರರು. ವಿನಯ ಪಿಟಕದ ಪ್ರಕಾರ ಬಡಿಗ, ಕಸಗುಡಿಸುವವ, ಬಿದಿರುಕೆಲಸಗಾರರು ಕೀಳು; ಕುಂಬಾರಿಕೆ, ನೇಕಾರಿಕೆ, ಚಮ್ಮಾರಿಕೆ, ಕ್ಷೌರಿಕ ವೃತ್ತಿಗಳು ಹೀನ. ಆದಿಮ ಪಾಲಿ ಗ್ರಂಥಗಳ ಪ್ರಕಾರ ನೀಚ ಕುಲಗಳು–ಚಾಂಡಾಲ, ನಿಷಾಧ, ವೇನ, ರಥಕಾರ, ಪುಕ್ಕಸ. ಜೈನ ಕೃತಿಗಳ ಪ್ರಕಾರ ಚಾಂಡಾಲರು–ಶಬರ, ದ್ರಾವಿಡ, ಕಲಿಂಗ, ಗೌಡ, ಗಾಂಧಾರರು. ಜಾತಕ ಕಥೆಯೊಂದರ ಪ್ರಕಾರ ರಥಕಾರನು ಚರ್ಮಕಾರನಿಗಿಂತಲೂ ಕೀಳು.

ದಕ್ಷಿಣ ಭಾರತದಲ್ಲಿ ಬ್ರಾಹ್ಮಣೀಕರಣದ ನಂತರವೇ ಅಸ್ಪೃಶ್ಯತೆ ಕಂಡುಬಂದಿತು. ಯಾಜ್ಞವಲ್ಕ್ಯ ಶೂದ್ರರೂ ಐದು ಮಹಾಯಜ್ಞಗಳನ್ನು ಮಾಡಬಹುದು ಎನ್ನುವನು. ಆದರೆ ಇವನ್ನು ಮನು ಹೇಳಿಲ್ಲ. ಅವು ೧. ಬ್ರಹ್ಮ ಯಜ್ಞ ೨. ಪಿತೃ ಯಜ್ಞ ೩. ದೈವಯಜ್ಞ ೪. ಬಲಿಯಜ್ಞ ೫. ನೃಯಜ್ಞ, ಪ್ರಜಾಪತ್ಯ ಚಾಂದ್ರಾಯಣ ವ್ರತಗಳನ್ನು ಕೂಡ ಶೂದ್ರರು ಮಾಡಬಹುದು.

ವೈಜವಾಪ ಗೃಹ್ಯ ಸೂತ್ರವು ಹೊಸ ಶೂದ್ರವರ್ಗವನ್ನು ಬ್ರಾಹ್ಮಣವ್ಯವಸ್ಥೆಗೆ ಒಳಪಡಿಸುವುದಕ್ಕೆ ಹುಟ್ಟಿತು. ಈ ಪದದ ಅರ್ಥವೇ ಬೀಜಗಳನ್ನು ಬಿತ್ತುವುದು. ಗುಪ್ತರ ಕಾಲದ ಗ್ರಂಥ ಇದು.

ದಲಿತ ಸಂಸ್ಕೃತಿ–ಇತಿಹಾಸ ರಚನೆಯ ದೃಷ್ಟಿಯಿಂದ ಮುಖ್ಯವಾದ ಹಲವಾರು ಸಂಗತಿಗಳಿಲ್ಲಿವೆ. ಚರ್ಮಕಾರರನ್ನು ಇತರ ಶ್ರಮಿಕ ಕರಕುಶಲಿಗಳ ಜತೆಗೆ ಸೇರಿಸಿರುವುದನ್ನು ಗಮನಿಸಬೇಕು. ದಲಿತರೂ ಕೂಡ ಒಂದು ಕಾಲಘಟ್ಟದವರೆಗೆ ಶೂದ್ರರೇ ಆಗಿದ್ದರು ಎಂಬುದು ತುಂಬ ಮುಖ್ಯ ಅಂಶ. ಕಾಲಾಂತರದಲ್ಲಿ ಶೂದ್ರ ವರ್ಣದಿಂದ ಪ್ರತ್ಯೇಕಗೊಂಡು ಪಂಚಮವರ್ಣವಾದರು. ಈ ಸ್ಥಿತಿ ಎಷ್ಟು ಭೀಕರವಾಗಿತ್ತೆಂಬುದನ್ನು 'ಮನಸ್ಮೃತಿ' ಮೊದಲಾದ ವೈದಿಕ ಗ್ರಂಥಗಳಲ್ಲಿ ನೋಡುವೆವು.

**ಹೊಲೆಯ :**

ಹೊಲೆಯ, ಮಾದಿಗ ಎಂಬ ಪದಗಳೇ ಸರಿಯಾಗಿ ವಿವೇಚನೆಗೊಂಡಿಲ್ಲ. ಗಾಂಧೀಜಿ, 'ಹರಿಜನ' ಎಂದಂತೆ, ಬಸವಾದಿ ಮೇಲ್ಜಾತಿ ಶರಣರು 'ಹಿರಿಯಕುಲ' ಎಂದು ದಲಿತರನ್ನು ಗೌರವದಿಂದ ಕಂಡರೂ, 'ಹೊಲಸು ತಿನ್ನುವವ ಹೊಲೆಯ' ಎಂದು ಸಂಪ್ರದಾಯಿಕವಾಗಿ ಒಪ್ಪಿತವಾದ ಅರ್ಥದಲ್ಲೇ ಬಳಸುತ್ತಾರೆ. ಕುರಿ, ಕೋಳಿ ತಿನ್ನುವವರು ಶ್ರೇಷ್ಠರೆನ್ನುವುದಾದರೆ ಪಂಚಾಮೃತ ಕರೆವ ಆವು ತಿನ್ನುವ ಹೊಲೆಯ ಮಾದಿಗರೇಕೆ ಕೀಳಾಗುತ್ತಾರೆ ಎಂದು ಕಾಳವ್ವೆ ಎಂಬ ದಲಿತ ಶರಣೆ ಪ್ರಶ್ನಿಸುವುದು ಶರಣ ಚಳುವಳಿಯ ಕಾಲದ ಮುಕ್ತ ಚಿಂತನೆಗೆ ನಿದರ್ಶನ.

'ಹೊಲೆಯ' ಪದದ ಮೂಲ 'ಪೊಲೆಯ'. ಹಳಗನ್ನಡದ 'ಪ' ಕಾರವು ನಡುಗನ್ನಡ, ಹೊಸಗನ್ನಡಗಳಲ್ಲಿ 'ಹ' ಕಾರವಾಗುವುದರಿಂದ 'ಹೊಲೆಯ' ಆಗುತ್ತದಷ್ಟೇ.

'ಪೊಲೆಯ' ಎಂಬ ಪದ 'ಅ' ಎಂಬ ಪ್ರತ್ಯಯವನ್ನು ಪಡೆದ 'ಪೊಲೆ' ಅಥವಾ 'ಪೊಲಿ'ಯಿಂದಾದುದು. 'ಪೊಲಿ'ಯ ಬಗ್ಗೆ ಸಾಕಷ್ಟು ಚರ್ಚಿಸಿದ್ದಾಗಿದೆ. ('ಜಾತ್ರೆಗಳು')

ಲಿಂಗವು ೧. ಸ್ತ್ರೀ ೨. ಪುಂ ೩. ನಪುಂಸಕ ೪. ಉಭಯ (ಪುನ್ನಪುಂಸಕ) ೫. ಪುಂಸ್ತ್ರೀ ೬. ಸ್ತ್ರೀ ನಪುಂಸಕ ೭. ತ್ರಿವಿಧ (ಸಮಸ್ತ) ೮. ವಾಚ್ಯ ೯. ಅವ್ಯಯ ಎಂದು ಒಂಬತ್ತು ವಿಧ ಎಂದು ಹೇಳುತ್ತ ಕೇಶಿರಾಜ ('ಶಬ್ದ ಮಣಿದರ್ಪಣ'– ನಾಮ ಪ್ರಕರಣ ೯೮ ಸೂತ್ರ. ಡಿ.ಎಲ್.ಎನ್) ವಾಚ್ಯಲಿಂಗ ಅಥವಾ ವಿಶೇಷ್ಯಾಧೀನ ಲಿಂಗಕ್ಕೆ ನೇರಿದಂ, ನೇರಿದಳ್, ನೇರಿತು, ಅಭಿಮಾನಿ, ದಾನಿ, ಸಾಧು, ಹಡಣಂ, ಚಂಡಿ, ಕಳ್ತೆ, ರಾಗಿ, ಭೋಗಿ, ಸುಖಿ, ಹೇಡಿ, ಕಲಿ, ಗುರು, ಲಘು ಎಂಬ ಪ್ರಯೋಗಗಳನ್ನು ಕೊಡುತ್ತಾನೆ. ಮುಂದಿನ ಸೂತ್ರದಲ್ಲಿ (೯೯) ನೀನ್, ಆನ್, ತಾನ್ ಎಂಬಿವು ಗುಣವಚನ, ಸರ್ವನಾಮ, ಬಹುವ್ರೀಹಿ, ಸಮಾಸ ಕೃತ್, ತದ್ಧಿತ, ಸಂಖ್ಯಾವಾಚಿಗಳೆಲ್ಲವೂ ವಿಶೇಷ್ಯಾಧೀನ ಲಿಂಗವಾಗುತ್ತದೆಂದು ಹೇಳುತ್ತಾನೆ. ಗುಣವಾಚಕಕ್ಕೆ ಇನಿಯಂ, ಇನಿಯಾಳ್, ಇನಿಯದು ಎಂಬ ಪ್ರಯೋಗ ಹೇಳಿದ್ದಾನೆ. (ಇನಿಯವು (೧೦೫), ಇನಿಬರ್(೧೦೯), ಮೊದಲಾದ ಪ್ರಯೋಗಗಳನ್ನು ಗಮನಿಸಿ). ಇನಿದು ಎಂಬ ಗುಣವಾಚಕ ಪದ ವಿಶೇಷ್ಯಾಧೀನ ಲಿಂಗವಾಗಬೇಕಾದರೆ 'ಅ' ಕಾರವನ್ನು ಪಡೆಯಬೇಕು. ಇನಿದು+ಅ; ಇಲ್ಲಿ 'ದು' ಕಾರ ಲೋಪವಾಗಿ ಇನಿ+ಯ+ಅ=ಇನಿಯ (ಯಕಾರಾಗಮ ಸಂಧಿ) ಎಂದಾಯಿತು. ಇಲ್ಲಿರುವ ನಿಯಮ 'ಪೊಲೆಯ' ಎಂಬ ಪದಕ್ಕೂ ಅನ್ವಯಿಸುವುದರಿಂದ ಇಷ್ಟು ವಿವರವಾಗಿ ಇದನ್ನು ನೋಡಬೇಕಾಯಿತು. ಪೊಲೆ+ಯ+ಅ=ಪೊಲೆಯ, ಪೊಲೆ+ಯ+ಅಳ್=ಪೊಲೆಯಳ್ ಎಂದಾಗಬೇಕು. ಪೊಲತಿ ಬಳಕೆಯಲ್ಲಿದೆ 'ಪೊಲೆತಿ' ಅಲ್ಲ.

ತದ್ಧಿತ ಪ್ರಕರಣದಲ್ಲಿ ಸ್ತ್ರೀಲಿಂಗ ರೂಪಗಳ ಬಗ್ಗೆ ಹೇಳುವಾಗ (೨೧೯ ಸೂತ್ರ) ಅಕಾರಾಂತ ಪದಕ್ಕೆ 'ಇತಿ' ಪ್ರತ್ಯಯವು ಬರುತ್ತದೆಂದು ಕೇಶಿರಾಜ ಹೇಳಿದ್ದಾನೆ. ಚಾಮರಿಗೆ+ಇತಿ=ಚಾಮರಗಿತಿ, ಕುರುಂಬಿತಿ, ತೆಲ್ಲಿಗಿತಿ, ಒಕ್ಕಲಿಗಿತಿ, ಚಿಪ್ಪಿಗಿತಿ. ಕೆಲವು ಕಡೆ 'ಇತಿ' ಪ್ರತ್ಯಯದ ಆದಿಯ 'ಇ' ಕಾರಕ್ಕೆ ಲೋಪವಾಗುತ್ತದೆ ಎಂದು ಹೇಳಿ 'ಪೊಲತಿ' ಎಂಬ ಪ್ರಯೋಗವನ್ನು ನೀಡಿದ್ದಾನೆ. (ಕಂಚಗಾರ್ತಿ, ಘಟ್ಟಿವಳ್ತಿ, ಮಣಿಗಾರ್ತಿ, ಮಾಲೆಗಾರ್ತಿ) ಇಲ್ಲಿ 'ಪೊಲ' (ಹೊಲ) ಎಂಬ ಪದವಿರುವುದು ಗಮನಾರ್ಹ.

೯–೧೦ನೇ ಶತಮಾನದ "ವಡ್ಡಾರಾಧನೆ" ಯಲ್ಲಿ "ಪೊಲೆಯರ್" (ಡಿ.ಎಲ್.ಎನ್. ಪು ೯, ೧೦, ೧೨, ೧೩), "ಪೊಲತಿ" ಎಂಬ ಪ್ರಯೋಗಗಳಿವೆ. ವಿಚಿತ್ರವೆಂದರೆ 'ಹೊಲೆಯ–ಮಾದಿಗ' ಎಂಬ ಪದಗಳೆರಡೂ ಒಂದೇ ಎಂಬಂತೆ ಇಲ್ಲಿ ದಾಖಲಾಗಿರುವುದು. ಸುಕುಮಾರಸ್ವಾಮಿಯ ಕತೆಯಲ್ಲಿ "ಮಗಧೆಯೆಂಬುದು ನಾಡಲ್ಲಿ ಚಂಪಾನಗರವೆಂಬುದು ಪೊಳಲಲ್ಲಿ ಪೆಣ್ಣಾಯಾಗಿ ಮಾದೆಗರ

(ಪಾಠಾಂತರಗಳು : ಮಾದರ, ಮಾದಿಗರ, ಮಾದೆಂಗರ), ಮನೆಯೊಳ್ ಪುಟ್ಟಿ ಸತ್ತು, ಮತ್ತಮಾ ಪೊಳಲೊಳ್ ಮಾದೆಗರ್ಗ್ಗೆ ಪ್ರಧಾನನಪ್ಪ ನೀಳನೆಂಬ ಮಾದೆಗಂಗಂ, ಕೇಶಿಯೆಂಬ ಮಾದೆಗಿಗಂ (ಮಾತಂಗಿಗಂ) ಮಗಳ್ ದುರೂಪೆ, ದುರ್ವರ್ಣೇ, ದುರ್ಗಂಧೆ, ದುಸ್ಸ್ವರೆ, ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟಿ" ಎಂದಿದೆ. ಕತೆ ಮುಂದೆ ಈಕೆಯನ್ನು ಪೊಲೆಯರ ಕೂಸು ಎಂದೇ ಹೇಳುತ್ತದೆ. (ಪು. ೯) ಕುತೂಹಲದ ವಿಷಯವೆಂದರೆ ಹೊಲತಿಯ ಜನ್ಮದಿಂದ ಅಗ್ನಿಭೂತಿ ಸೋಮಶರ್ಮನೆಂಬ ಬ್ರಾಹ್ಮಣ, ನಾಗದೇವರನ್ನು ಆರಾಧಿಸಿದಾಗ ಅವನಿಗೆ 'ನಾಗಶ್ರೀ' ಎಂಬ ಮಗಳಾಗಿ ಹುಟ್ಟುವುದು. ಸೂರ್ಯಮಿತ್ರ ಭಟಾರ (ಜೈನಯತಿಯಾದ ಬ್ರಾಹ್ಮಣ) 'ನಾಗಶ್ರೀ' ತನ್ನ ಮಗಳೆಂದು ಪ್ರತಿಪಾದಿಸುವ ಸ್ವಾರಸ್ಯಕರ ಪ್ರಸಂಗ ವಡ್ಡಾರಾಧನೆಯ ಈ ಕತೆಯ ಪ್ರಮುಖ ಘಟನೆ. ಇದನ್ನು ಓದುತ್ತಿದ್ದರೆ ಬನವಾಸಿಯ ಶಿವಸ್ಕಂದ 'ನಾಗಶ್ರೀ' ನೆನಪಾಗುತ್ತದೆ. ಆಕೆ, ನಾಗಪ್ರತಿಮೆ, ಕೆರೆ ನಿರ್ಮಿಸಿದವಳು.

ವಡ್ಡಾರಾಧನೆಯ ೧೩ನೇ ಪುಟದಲ್ಲೂ ಮಾದೆಗ, ಮಾದೆಗಿಯರು ಪೊಲೆಯರು ಎಂದೇ ಹೇಳಲಾಗಿದೆ. ಮಧ್ಯ ಕರ್ನಾಟಕದ ಬಳ್ಳಾರಿ ಜಿಲ್ಲೆಯ 'ಕೋಗಳಿ'ಯಲ್ಲಿದ್ದ ಶಿವಕೋಟ್ಯಾ ಚಾರ್ಯ ಹೊಲೆಯ–ಮಾದಿಗರಲ್ಲಿ ಭೇದ ಕಾಣದಿರುವ ಸಂಗತಿಯ ಮಹತ್ವವನ್ನು ಮರೆಯುವಂತಿಲ್ಲ, ಪೊಲೆಯ, ಪೊಲತಿ, ಪೊಲೆಯರ್, ಮಾದಿಗ, ಮಾದೆಗಿ, ಮಾದರು ಈ ಎಲ್ಲ ಪ್ರಯೋಗಗಳು ವಡ್ಡಾರಾಧನೆಯಲ್ಲಿವೆ. (ಮಾದ+ಎಗ=ಮಾದಿಗ, ಅಪರೂಪದ ಪ್ರಯೋಗ; ಮುಂದೆ ನೋಡಿ)

ಯಾವ ಜಾತಿಯಲ್ಲಿ ಹುಟ್ಟಿದರೂ ವ್ರತ ಹಿಡಿದ ಮಾನವ ಮಾತ್ರ ಪೂಜ್ಯನಾಗುವನು; ಇಂಥ ಅರ್ಹತನೇ ಬ್ರಾಹ್ಮಣ ಎಂದು ವ್ಯವಸ್ಥೆಗೆ ಎದಿರೇಟು ಕೊಡುವಂತೆ ಹೇಳುವ "ಸಮಯ ಪರೀಕ್ಷೆ"ಯ ಬ್ರಹ್ಮ ಶಿವ, "ಪೊಲೆಯನು ಶ್ರಾವಕನಾದರೆ ಎಲ್ಲರಲ್ಲೂ ಮಾನ್ಯನಾಗುವನು, ಕುಲಜನಾಗುವನು, ಬಂಗಾರಕ್ಕೆ ಕಂಪು ಸಿಕ್ಕಂತೆ ಬೆಲೆಯುಳ್ಳವನಾಗುವನು" ಎನ್ನುತ್ತಾನೆ. (೨–೪೧)

ಮೂವತ್ತಕ್ಕಿಂತ ಹೆಚ್ಚಿನ ಸಂದರ್ಭಗಳಲ್ಲಿ 'ಪೊಲೆಯರ್' ಎಂಬ ಪದ ಪ್ರಯೋಗ ಮಾಡುವ ಬ್ರಹ್ಮ ಶಿವ ಎಲ್ಲಿಯೂ 'ಮಾದೆಗ'ರನ್ನು ಉಲ್ಲೇಖಿಸದಿರುವುದು ಆಶ್ಚರ್ಯ. ಇಷ್ಟು ಸಂಖ್ಯೆಯಲ್ಲಿ ಬಹುಶಃ ಬೇರಾವ ಜಾತಿಯ ಹೆಸರೂ ಉಲ್ಲೇಖಗೊಂಡಿಲ್ಲ. ಕ್ರಿ.ಶ.ಸು. ೧೧೦೦ ರಲ್ಲಿದ್ದ ಬ್ರಹ್ಮ ಶಿವ ವೀರಶೈವ ಚಳುವಳಿಯ ಪ್ರಾರಂಭದ ಘಟ್ಟದಲ್ಲಿ ಅದನ್ನು ಕಟುವಾಗಿ ವಿಮರ್ಶಿಸುತ್ತಿದ್ದ, ಟೀಕಿಸುತ್ತಿದ್ದ. ಆದರೆ ವೀರಶೈವರೂ, ಜೈನರೂ ಈಗ ಹೊಲೆಯರು ಮತ್ತು ಮಾದಿಗರ ಬಗ್ಗೆ ಹೆಚ್ಚಿನ ಕಾಳಜಿ ತೋರಿಸುತ್ತಿರುವುದು ವಿಶೇಷ. ಇದರ ಗುಟ್ಟೇನು? ವೀರಶೈವ ಇದೀಗ ಹುಟ್ಟುತ್ತಿದ್ದ ಚಳುವಳಿಯಾಗಿತ್ತು. ವೈದಿಕ ಶಾಹಿಯಿಂದ ಪ್ರಭಾವಿತವಾಗಿರುವಂತೆ ಕಂಡರೂ ಅದನ್ನು ವಿರೋಧಿಸುವುದಕ್ಕೆ ದ್ರಾವಿಡ ಪರಂಪರೆಯಲ್ಲಿದ್ದ ಹಲವು ಆಶಯೆಗಳನ್ನು (ಜಾತಿ ವಿರೋಧಿತ್ವ, ಕಾಯಕ ತತ್ತ್ವ, ಸ್ತ್ರೀ ಸಮಾನತೆ) ಬಳಸಿಕೊಳ್ಳುತ್ತಿತ್ತು. ಜೈನ ಮತಕ್ಕೆ ಹೊಲೆಯರನ್ನು ಆಕರ್ಷಿಸುವ ಅಗತ್ಯ ಕಂಡಿರುವ ೧೨ನೇ ಶತಮಾನದ ಬ್ರಹ್ಮ ಶಿವ ಶರಣರಂತೆ ಸಾಮಾಜಿಕ ಒತ್ತಡಕ್ಕೆ ಸಿಕ್ಕಿರುವುದು ಸ್ಪಷ್ಟ. ಒಂದೆಡೆ ವೀರಶೈವರು, ಇನ್ನೊಂದೆಡೆ ಜೈನರು, ದಲಿತರನ್ನು ತಮ್ಮ ತಮ್ಮ ಮತಗಳಿಗೆ ಸೇರಿಸಿಕೊಳ್ಳುವ ತೀವ್ರ ಪ್ರಯತ್ನದಲ್ಲಿದ್ದರು. ಇದಕ್ಕೆ ಕಾರಣ ದಲಿತರಲ್ಲಿ ಉಂಟಾಗಿದ್ದಿರಬಹುದಾದ ಸಾಮಾಜಿಕ ಎಚ್ಚರ ಮತ್ತು ಸಂಘಟಿತ ಹೋರಾಟದ ಸ್ಥಿತಿ ಸಾಮಾಜಿಕ ಎಚ್ಚರ ಮತ್ತು ಸಂಘಟಿತ ಹೋರಾಟದ ಸ್ಥಿತಿ. ಇನ್ನೊಂದೆಡೆ ರಾಜಕೀಯ ಅಭದ್ರತೆ, ಅಸ್ಥಿರತೆ, ಸೈನಿಕರ ನಿಷ್ಠೆಯಲ್ಲಿ ಬಿರುಕುಂಟು ಮಾಡಿದ್ದು, ಆಡಳಿತದಲ್ಲಿ ಶೈಥಿಲ್ಯ ತಲೆದೋರಿತ್ತು. ಶ್ರಮಿಕ ಕುಲಗಳ ದುಡಿಮೆ, ತೆರಿಗೆ ಹೆಚ್ಚಳವಾಗಿತ್ತು. ಪದೆ ಪದೆ ಆಗುತ್ತಿದ್ದ ಯುದ್ಧಗಳು ಈ ಎಲ್ಲ ಸ್ಥಿತಿಗೆ ಮೂಲ ಕಾರಣವಾಗಿತ್ತು

ತಾನು ಹುಟ್ಟಿದ ಕಾಲದಲ್ಲಿದ್ದ ಮೂಲ ಆಶಯಗಳಿಂದ ತುಂಬ ದೂರ ಸರಿದಿದ್ದ ಕರ್ನಾಟಕದ ಜೈನಧರ್ಮ ಮೊದಲ ಘಟ್ಟದಲ್ಲಿ ಆಳುವ ವರ್ಗಗಳ ಹಿತಕ್ಕೆ ಬೆಂಬಲವಾಗಿ ನಿಂತದ್ದೆ ಒಡೆದು ಕಾಣುತ್ತದೆ.

ಗಂಗ, ಚಾಲುಕ್ಯ, ರಾಷ್ಟ್ರಕೂಟ ಮೊದಲಾದ ವಂಶಗಳ ಕಾಲದಲ್ಲಿ ಜೈನ ಮತ ರಾಜರ, ಸಾಮಂತರ, ಆಡಳಿತಗಾರರ, ಜಮೀನುದಾರರ, ವ್ಯಾಪಾರಸ್ಥರ ಧರ್ಮವಾಗಿ ಕಾಣುತ್ತದೆ. ಪಂಪ, ರನ್ನ, ಪೊನ್ನ, ಜನ್ನ, ಶಿವಕೋಟ್ಯಾಚಾರ್ಯ ಮೊದಲಾದ ಜೈನ ಲೇಖಕರು ಈ ಬಗೆಯ ಊಹೆಗೆ ಪರೋಕ್ಷ ಬೆಂಬಲ ನೀಡುತ್ತಾರೆ. ಈ ಕಾಲದ ಜೈನರಿಗೆ ಹೊಲೆಯರ, ಇತರ ಶ್ರಮಿಕ ಜನ ಕುಲಗಳ ಮೇಲೆ ನೆದರೇ ಇದ್ದಿಲ್ಲ. ಭವಾವಳಿಗಳಲ್ಲಿ ಭವ್ಯಜೀವ ಅನುಭವಿಸುವ ಕೀಳು ಕರ್ಮಫಲದಲ್ಲಿ ಹೊಲೆಯ, ಹೊಲತಿ ಜನ್ಮ ಒಂದು ನಿಲ್ದಾಣದಂತೆ ಬರುವುದನ್ನು ವಡ್ಡಾರಾಧನೆಯಲ್ಲಿ ನೋಡುತ್ತೇವೆ.

ಆದರೆ ೧೨ನೇ ಶತಮಾನದಲ್ಲಿ ನಿರ್ಲಕ್ಷಿಸಲಾಗದಂತೆ ದಲಿತ ಪ್ರಶ್ನೆ ಪ್ರಾಶಸ್ತ್ಯ ಪಡೆದಿರುವುದು ಕುತೂಹಲದ ಸಂಗತಿ. 'ವೀರಶೈವ' ಹುಟ್ಟಿದ್ದೇ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದ ಪ್ರಜ್ಞಾವಂತ ದಲಿತ ಮತ್ತು ಕೆಳಜಾತಿಯವರಿಂದ ಎಂಬುದನ್ನು ಮರೆಯಲಾಗುತ್ತಿದೆ.

ಕರ್ನಾಟಕದ ದಲಿತರ ಸಂಸ್ಕೃತಿ ಚರಿತ್ರೆಯನ್ನು ಬರೆದಿರುವ ಡಾ. ಎಂ. ಚಿದಾನಂದಮೂರ್ತಿಗಳಾದಿಯಾಗಿ ಯಾರೂ ಈ ಬಗೆಯ ಸಂಕೀರ್ಣ ಸಂದರ್ಭದ ಕುರಿತು ವಿವರಿಸಿಲ್ಲ. ಕೆ.ಜಿ. ನಾಗರಾಜಪ್ಪ ಜೈನ, ವೀರಶೈವ ಮತಗಳ, ಮೇಲ್ಜಾತಿ ಹಿತದ, ಪೈಪೋಟಿಯ ಕುತಂತ್ರವನ್ನು ಬಯಲಿಗೆಳೆದಿರುವುದು ಮಾತ್ರ ಅಪವಾದದಂತೆ ಕಾಣುವ ಅಧ್ಯಯನ. ಸಿ. ವೀರಣ್ಣ ಮಾರ್ಕ್ಸವಾದಿ ದೃಷ್ಟಿಕೋನದಿಂದ ಮಾತ್ರ ಕಾಯಕ ಜೀವಿಗಳ ಚಳುವಳಿಯನ್ನು ಗಮನಿಸಿರುವುದರಿಂದ ದಲಿತ ಶೋಧನೆಗೆ ಅವಕಾಶವಾಗಿಲ್ಲ.

ಚಿದಾನಂದಮೂರ್ತಿಯವರು ತಮ್ಮ "ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ" (ಪ್ರಸಾರಾಂಗ ಕ.ವಿ.ವಿ. ಧಾರವಾಡ ೧೯೮೫) "ವಿದ್ವಾಂಸರಿಗೆ ಆಕರಗ್ರಂಥವಾಗಬಹುದು" ಎಂದೂ (೨) "ಒಂದು ರೀತಿಯಿಂದ ಈ ಕೃತಿ ಆಧುನಿಕ ಪೂರ್ವಯುಗದ ಕರ್ನಾಟಕದ ಅಸ್ಪೃಶ್ಯರ ಇತಿಹಾಸವನ್ನು ಸಮಗ್ರವಾಗಿ ದಾಖಲು ಮಾಡಿದೆ" (ಪು. ೫)ಎಂದೂ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಆದರೆ ಈ ಸಂಪ್ರದಾಯಿಕ ಅಧ್ಯಯನದಲ್ಲಿ 'ದಲಿತವಾದಿ' ನಿಲುವು ಕಾಣುವುದಿಲ್ಲ. ಮುಖ್ಯವಾಗಿ ವೀರಶೈವ ವಚನಕಾರರಲ್ಲಿ ಬರುವ ದಲಿತರ ಬಗೆಗಿನ ತುಂಡು ಮಾಹಿತಿಗಳನ್ನು ಅವರು ಜೋಡಿಸುತ್ತಾರೆ. ಈ ಗ್ರಂಥದ ವಿವರವಾದ ವಿವೇಚನೆ ಈ ಬರಹದ ವ್ಯಾಪ್ತಿಗೆ ಸೇರಿದ್ದಲ್ಲ. ಸಂಪ್ರದಾಯಿಕ ವೈದಿಕರ ಗ್ರಂಥಗಳು ಮತ್ತು ಅವುಗಳನ್ನು ಆಧರಿಸಿ ಬರೆದ ಆಧುನಿಕ ಲೇಖಕರ ಪೂರ್ವಗ್ರಹಿತ ವಿಚಾರಗಳನ್ನೇ ತಿರುಗಿ ಹೇಳುವ ಚಿದಾನಂದಮೂರ್ತಿ 'ಹೊಲೆಯ' ಎಂಬುದಕ್ಕೆ ಹೇಳುವ ವಿವರಣೆ ನೋಡಿ "ಹೊಲೆಯ : ಹಳಗನ್ನಡ ಪೊಲೆಯ. ತಮಿಳು ಪುಲೈಯನ್, ಮಲಯಾಳಂ ಪುಲಯನ್. ಇವುಗಳ ಮೂಲ 'ಪೊಲೆ' (ಹೊಲೆ). ಪೊಲೆ ಎಂದರೆ ಅಶುದ್ಧ, ಕೊಳಕು ಎಂದರ್ಥ. ಪೊಲಸು, ಹೊಲಸು ಎಂಬಲ್ಲಿಯೂ ಅದೇ ಪ್ರಕೃತಿ ಇದೆ. 'ಪೊಲೆಯ' ಎಂದರೆ ಕೊಳಕಾಗಿರುವವನು ಎಂದಾಗಬಹುದು ಅಥವಾ ಮುಟ್ಟಿದರೆ ಮೈಲಿಗೆಯನ್ನು ಉಂಟುಮಾಡುವವನು ಎಂದಾಗಬಹುದು. 'ಪೊಲತಿ'(ಸ್ತ್ರೀ ಲಿಂಗ)". ಈ ಬಗೆಯ ಕ್ಷುಲ್ಲಕ 'ವಾದ' ಮಂಡಿಸುವ ವಿದ್ವತ್‌ವಲಯ ದಲಿತರ ಬಗ್ಗೆ ಎಷ್ಟು 'ಹಗುರ' ಭಾವನೆಯಿಟ್ಟು ಕೊಂಡಿದೆ ನೋಡಿ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಬರುವ ಅಸ್ಪೃಶ್ಯರ ಉಲ್ಲೇಖಗಳನ್ನೆಲ್ಲ ಒಂದೆಡೆ ಸಂಕಲಿಸಿರುವ ಮಹತ್ವದ ಕೆಲಸ ಮಾಡಿರುವ ಚಿದಾನಂದಮೂರ್ತಿಯವರು ಅದನ್ನು ವಿವರಿಸುವಲ್ಲಿ, ವಿಶ್ಲೇಷಿಸುವಲ್ಲಿ ಹಲವಾರು ತಪ್ಪು ನಿಲುವುಗಳಿಗೆ ಅಂಟುತ್ತಾರೆ. (ಅವರ ಥೀಸಸ್ ಕೂಡ ಹಾಗೆಯೇ) ಶಾಸನಗಳನ್ನಂತೂ ಅವರು ಸರಿಯಾಗಿ ನೋಡಿಯೇ ಇಲ್ಲ.

ಕರ್ನಾಟಕ ಸಂಸ್ಕೃತಿ ಪರಂಪರೆಯಲ್ಲಿ ಬೆರೆತುಹೋಗಿರುವ ಹೊಲೆಯ–ಮಾದಿಗ ಸಂಸ್ಕೃತಿ ವಿಶೇಷಗಳು ನಾನಾ ಬಗೆಯವು. ಲಿಖಿತ ಪರಂಪರೆಯನ್ನು ಮಾತ್ರ ಅಧಿಕೃತ ಆಕರವೆಂದು ಜ್ಞಾನ ಸಂಪಾದನೆಗಿಳಿಯುವವರು ಇದರ ವಿರಾಟ್ ರೂಪವನ್ನು ದರ್ಶಿಸಲಾರರು.

ಉತ್ತರ ಕರ್ನಾಟಕದಲ್ಲಿ ಸೆಪ್ಟೆಂಬರ್, ಅಕ್ಟೋಬರ್‌ದಲ್ಲಿ ಬರುವ ಭಾದ್ರಪದ ಮಾಸದ ಹುಣ್ಣಿವೆಗೆ ಜೋಕುಮಾರನ ಹುಣ್ಣಿವೆ ಅಥವಾ 'ಹೊಲೆಯನ ಹುಣ್ಣಿವೆ' ಎಂದು ಹೇಳುತ್ತಾರೆ. ಕೃಷಿ ಪ್ರಧಾನವಾದ ನಮ್ಮ ದೇಶದ ಕೃಷಿಕರಾದ ದಲಿತರ ಸಂಸ್ಕೃತಿಯನ್ನು ಗ್ರಾಮೀಣ ಕೃಷಿ ಪದ್ಧತಿಯಲ್ಲಿಯೇ ಕಂಡುಕೊಳ್ಳಬೇಕಲ್ಲವೇ? ಗಣಪತಿ ಗೌರಿಗಳ ಪೂಜೆಯೂ ಇದೇ ಕಾಲದಲ್ಲಿರುತ್ತದೆ. ಇವೆಲ್ಲವೂ ದಲಿತರ ಕೃಷಿ ಸಂಸ್ಕೃತಿಯ ಮಧ್ಯೆ ಹುಟ್ಟಿದುವೇ. ತೆಲುಗಿನಲ್ಲೂ 'ಮಾಲಪುಣ್ಣಮ' (ಮಾಲ ಹುಣ್ಣಿವೆ) (ಮಾಲ = ಹೊಲೆಯ) ಇದೆ. (ಥರ್‌ಸ್ಟನ್ IV – ೩೦೮ ಪು.) "ಮಾದಿಗ ಕೂಡ ಮಾಲಪುಣ್ಣಮದ ಮೊದಲು ಬಿತ್ತಲಾರ" ಎಂಬ ಗಾದೆ ಆಂಧ್ರದಲ್ಲಿದೆ. (ಅದೇ)

ಕೃಷಿ ಸಂಸ್ಕೃತಿಯ ಕೇಂದ್ರ ಆಶಯವಾದ 'ಪೊಲಿ'ವೈದಿಕರ ವೇದಕಾಲದ 'ಋತ'ಕ್ಕೆ ಸಮಾನವಾದ ಪರಿಕಲ್ಪನೆ. ಆದರೆ ಋತ ಪಶುಪಾಲಕ ಸಂಸ್ಕೃತಿಯದು, 'ಪೊಲಿ' ಕೃಷಿಕರದ್ದು. ಹಾಗಾಗಿ ಸ್ಪಷ್ಟ ವ್ಯತ್ಯಾಸಗಳಿವೆ. ಈ 'ಪೊಲಿ' ಪದದಿಂದಲೆ 'ಪೊಲಿಯ' (ಪೊಲಯ, ಪೊಲೆಯ) ಪದ ಹುಟ್ಟಿದ್ದು. ಇದರ ಚರ್ಚೆ ಬೇರೆಡೆ ಬರಲಿರುವುದರಿಂದ ಇಲ್ಲಿ ಅದನ್ನು ಹಿಗ್ಗಿಸಲಾರೆ.

ಈಗ, ನಮಗೆ ತಿಳಿದು ಬಂದಿರುವ ಕರ್ನಾಟಕದ ಇತರ ಭಾಗಗಳ ಹೊಲೆಯರ ಕುರಿತ ಕೆಲವು ವಿವರಗಳು–

ಸಂಸ್ಕೃತಿಯ ಮೂಲ ಆಶಯಗಳನ್ನು ಹೆಚ್ಚು ಮಟ್ಟಿಗೆ ಉಳಿಸಿಕೊಂಡು ಬರಲು ನಮ್ಮ ಜನಕುಲಗಳಿಗೆ ಸಾಧ್ಯವಾಗಿರುವುದು ಕರಾವಳಿ ಮತ್ತು ಬೆಟ್ಟ ಮಲೆನಾಡು ಪ್ರದೇಶದಲ್ಲಿ ಇದಕ್ಕೆ ಕಾರಣವಿದೆ. ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲೂಕಿನಲ್ಲಿ ಹೊಲೆಯರಲ್ಲಿ ೧೨ ಉಪಜಾತಿಗಳಿವೆ. ('ಕಪ್ಪೆ ಹೊಲೆಯರ ಸಂಸ್ಕೃತಿ'– ಕೇಶವ ಪ್ರಸಾದ ಕ.ಸಾ.ಅ.) ೧. ಕನ್ನಡ ಹೊಲೆಯ ೨. ಕಪ್ಪೆ ಹೊಲೆಯ ೩. ಕಂಬಟ್ಟೆ ಹೊಲೆಯ ೪. ಕೊಂಗೊಲೆಯ ೫. ಕೂಡಸಾಲ ಹೊಲೆಯ ೬. ಗಟ್ಟಿ ಹೊಲೆಯ ೭. ತೆಲುಗು ಹೊಲೆಯ ೮. ಚಂಗ ಹೊಲೆಯ ೯. ಗಂಗಡಿಕಾರ ಹೊಲೆಯ. ೧೦. ಮನ್ನಾ ಹೊಲೆಯ ೧೧. ಸಾಮಹೊಲೆಯ ೧೨. ಉರಮೆ ಹೊಲೆಯ.

ಕೊಡಗಿನಲ್ಲೂ ಹೊಲೆಯರಲ್ಲಿ ಕೆಂಬಟ್ಟೆ, ಮಾರಿಂಗಿ, ಮುಂಡ, ಕುಕ್ಕ, ಬಲಗೈ, ಎಡಗೈ ಮೊದಲಾದ ೧೨ (೧೩) ಪಂಗಡಗಳಿವೆ. (ಎಂ.ಜಿ. ನಾಗರಾಜ : ಕೆಂಬಟ್ಟೆ ಹೊಲೆಯರ ಸಂಸ್ಕೃತಿ" ಕ.ಸಾ.ಅ.) ಪಾಲೆ, ಮಾಯಲ್, ಆಡಿಯರ್, ಮರತ, ಕಾಲಡಿ, ಮಾದಾಲ್, ಹುಲಸವಾರ್ ಮೊದಲಾದವು ಇತರ ಹೊಲೆಯ ಪಂಗಡಗಳು.

ಕರ್ನಾಟಕದ ಬೇರೆ ಬೇರೆ ಭಾಗದ ಹೊಲೆಯರ ಸಂಸ್ಕೃತಿಯ ಅಧ್ಯಯನಗಳು ವೈಜ್ಞಾನಿಕವಾಗಿ ನಡೆಯದೆ ಇರುವುದರಿಂದ ಈ ವಿಷಯದ ಕುರಿತ ಅಜ್ಞಾನವೇ ಹೆಚ್ಚಿದೆ.

**ಮಾದಿಗ :**

ಮಾದ+ಇಗ=ಮಾದಿಗ. ವಡ್ಡಾರಾಧನೆಯಲ್ಲಿ ಮಾದೆಗ, ಮಾದೆಗಿ ಪದಗಳಿವೆ. ಮೇದ, ಮಾದರ, ಮೇದರ, ಮೇದಾರ ಈ ಪದಗಳೆಲ್ಲ ಒಂದೇ ಎಂದು ಕಿಟೆಲ್ ಭಾವಿಸಿರುವುದು ಆಶ್ಚರ್ಯಕರ. ಮೇದ, ಮೇದರರು, ಚಾಪಿ, ಬುಟ್ಟಿ ಮಾಡುವ ವೃತ್ತಿಯ ಪ್ರತ್ಯೇಕ ಜನಕುಲ. ಅವರುಗೂ ಮಾದಿಗರಿಗೂ ಯಾವ ಸಂಬಂಧವಿಲ್ಲ. ಅವರನ್ನು ಗವರಿಗ, ಚಪಕಾರಕ, ವಂಶಚ್ಛೇದಿ ಎಂದೂ ಕರೆದಿದ್ದಾರೆ.

'ಮಾದ'ಕ್ಕೆ ಕಿಟೆಲ್ ಮದ, ಕುಡುಕುತನ, ಅಮಲು, ಸಂತೋಷ ಹೆಮ್ಮೆ ಎಂಬ ಅರ್ಥ ಹೇಳಿದ್ದಾರೆ. 'ಮಾದಿಗ' ಪದದಲ್ಲಿ ಯಾವ ಅರ್ಥ, ಏಕೆ ಒಳಗೊಂಡಿದೆ ಎಂಬ ವಿವರಣೆ ಸಿಕ್ಕಬೇಕಿದೆ.

'ಮಾದ'ವು ಮಹಾದೇವ ಪದದ ತದ್ಭವವೆಂದೂ ಕಿಟೆಲ್ ಹೇಳುವುದು ಸರಿಯಲ್ಲ. ಈ ಸಂದರ್ಭದಲ್ಲಿ ಅವರು ಮಾದಣ್ಣ, ಮಾದಯ, ಮಾದರಸ, ಮೊದಲಾದ ಪ್ರಯೋಗ ಕೊಟ್ಟಿದ್ದಾರೆ. 'ಮಹಾನವಮಿ'ಯು 'ಮಾನವಮಿ' ಆಗುವಂತೆ 'ಮಹಾದೇವ'ವು 'ಮಾದೇವ' ಆಗಬೇಕೆ ಹೊರತು ಮಾದಯ ಹೇಗಾಗುತ್ತದೆ? ಅಲ್ಲದೆ ಮಹಾದೇವಯ್ಯ-ಮಾದಯ್ಯ, ಮಹಾದೇವಣ್ಣ-ಮಾದಣ್ಣ ಆಗುವ ನಿದರ್ಶನಗಳು ಶಾಸನಗಳಲ್ಲಿಲ್ಲ. ದ್ರಾವಿಡ ಪದವಾದ 'ಮಾದಿಗ'ಕ್ಕೆ ಸಂಸ್ಕೃತ ಮೂಲವನ್ನು ಹೇಳುವುದೂ ಅಭಾಸ. ಮೇದಾರ ಜತೆ ಮಾದರ ಸಮೀಕರಣವೂ ಸರಿಯಲ್ಲ. ಕನ್ನಡ ಶಾಸನಗಳಲ್ಲಿ ಲೆಕ್ಕಕ್ಕಿರದಷ್ಟು ಅಂಕಿತನಾಮ, ನಿದರ್ಶನಗಳು 'ಮಾದ'ದಿಂದಲೇ ಹುಟ್ಟಿರುವಂಥವು ಸಿಗುತ್ತವೆ. ಅವೆಲ್ಲ 'ಮಾದಿಗ' ಮಾದ ಮೂಲದವೇ ಹೊರತು 'ಮಹಾದೇವ' ಮೂಲದವಲ್ಲ.

ಮಾತಂಗದ ತದ್ಭವ ಮಾದಿಗ, ಮಾದೆಗ ಎಂದೂ ಕಿಟೆಲ್ ಭಾವಿಸಿ ಚರ್ಮಕಾರ, ಶ್ವಪಚ ಎಂದು ಅರ್ಥ ಹೇಳಿದ್ದಾರೆ. ಮಾದೆಗಿಯನ್ನೂ ಸೂಚಿಸಿದ್ದಾರೆ.

'ಮಾದಿಗರು' ಎಂಬುದಕ್ಕೆ ಗ್ರಾಮೀಣರು 'ಮಾದರು' ಎನ್ನುತ್ತಾರೆ. ಮೇದರು ಅಂತಲ್ಲ. 'ಮೇದರು' ಗ್ರಾಮೀಣರಲ್ಲಿ 'ಮ್ಯಾದರು' ಆಗುತ್ತದೆ. 'ಮಾದಿಗ' ಪದವೇ ಸಂಸ್ಕೃತೀಕರಣಗೊಂಡು 'ಮಾತಂಗ' ಆಗಿದೆ ಎಂದು 'ದ್ರಾವಿಡಿಯನ್ ಎಟಿಮೊಲೊಜಿಕಲ್' ಕೋಶ ಹೇಳುತ್ತದೆ. ಮಾತಂಗಿ ಮಾದಿಗ ಸಂಸ್ಕೃತಿಯ ಪ್ರಮುಖ ಸ್ತ್ರೀದೈವ. ಮಾದಿಗರು ಮಾತಂಗಿಯ ಮಕ್ಕಳು ಎಂಬ ಜನಪ್ರಿಯ ಹೇಳಿಕೆಯೂ 'ಮಾದಿಗ' ಪದ ಮೂಲದ ಸರಿಯಾದ ವಿವರಣೆಯಾಗಲಾರದು. ಮಾದಿಗ, ಮಾತಂಗಿಯರ ಸಂಬಂಧವನ್ನು ಮಾತ್ರ ಹೇಳಬಹುದಷ್ಟೇ. 'ಮಾತಂಗಿ' ಎಂದರೆ 'ದುರುಗವ್ವ', 'ಕರಿಬಾನಿ', ಎಂದು ಮಾದಿಗರಲ್ಲಿರುವ ನಂಬಿಕೆ. ಚರ್ಮ ಹದಮಾಡುವುದಕ್ಕೆ ನೆನೆಹಾಕುವ ಮಣ್ಣಿನ ಅಗಲ ಪಾತ್ರೆ 'ಕರಿಬಾನಿ'. ಸಾರ್ವಜನಿಕ ಸ್ಥಳದ ಕಟ್ಟೆಯ ಮೇಲೆ ಇವನ್ನು ಹುಗಿದಿರುತ್ತಾರೆ. ಈ ಕಟ್ಟೆ ಮತ್ತು ಕರಿಬಾನಿಗಳೇ 'ಮಾತಂಗಿ'. 'ಕರಿಬಾನಿ', ಉತ್ಪಾದನಾ ಸಾಧನ. ಸಾಮೂಹಿಕ ಒಡೆತನಕ್ಕೆ ಸೇರಿದೆ. ಈ ಉಪಕರಣವೇ ದೈವವಾಗುತ್ತದೆ. 'ಹೊನ್ನವರೆ' (ತಂಗಡಿ) ಪೊದೆಯ ಚಕ್ಕೆಯನ್ನು ಬಾನಿಯಲ್ಲಿ ಹಾಕಬೇಕಾಗುತ್ತದೆ. ಅದರಲ್ಲಿ ಅದ್ಭುತ ಔಷಧಿ ಗುಣವಿದೆ. ಹಾಗಾಗಿ ತಂಗಡಿ ಗಿಡವೂ ಮಾದಿಗ ಸಂಸ್ಕೃತಿಯಲ್ಲಿ ಆರಾಧನೆಯ ವಸ್ತುವೂ ಆಯಿತು. 'ಸಿಂದ್‌ಮಾದಿಗರ ಸಂಸ್ಕೃತಿ' (ಕೆ. ರಾಮಯ್ಯ)ಯಲ್ಲಿ ಇದರ ವಿವರಗಳಿವೆ.

ಮಧ್ಯ ಕರ್ನಾಟಕದ ಮಾದಿಗರು ಈವರೆಗೂ ತೆಲಗು ಮಾತನಾಡುತ್ತಿದ್ದರು. ಆಂಧ್ರದಲ್ಲಂತೂ 'ಮಾದಿಗ'ರ ಸಂಖ್ಯೆ ಮತ್ತು ಸಂಸ್ಕೃತಿ ಪರಂಪರೆ ವಿಶೇಷವಾಗಿದೆ. ಕರ್ನಾಟಕದ ಮಾದಿಗರ ಬಗ್ಗೆ ತಿಳಿಯಬೇಕಾದರೆ ತೆಲಗು ಮಾದಿಗರನ್ನು ಮೊದಲು ಅರ್ಥಮಾಡಿಕೊಳ್ಳಲೇಬೇಕು. ಈ ಸಾಧ್ಯತೆ ಇಲ್ಲಿ ಇಲ್ಲ.



**ಶಾಸನಗಳಲ್ಲಿ ದಲಿತರು ಮತ್ತು ದಲಿತ ಸಂಸ್ಕೃತಿ :**

ಗ್ರಾಮಗಳ ಸಂಪ್ರದಾಯಿಕ ಕರಕುಶಲಕರ್ಮಿಗಳಲ್ಲಿ ಹೊಲೆಯರು, ಮಾದಿಗರು, ಸಮಗಾರರು ಸೇರಿದ್ದರು. ಬಡಿಗ, ಕಮ್ಮಾರ, ಕುಂಬಾರ, ಅಕ್ಕಸಾಲಿಗ ಮೊದಲಾದ ಕರಕುಶಲಕರ್ಮಿ ಪಂಚಾಳರು ಸವರ್ಣೀಯರಾದರೆ, ತೊಗಲಿನ ಕೆಲಸ ಮಾಡುತ್ತಿದ್ದ ದಲಿತರು ಅಸ್ಪೃಶ್ಯರಾಗಿದ್ದರು. ಹಾಗಾಗಿ 'ಪಂಚಾಳ'ರಲ್ಲಿ ಚರ್ಮಕಾರರು ಸೇರುವಂತಿರಲಿಲ್ಲ. ಆದರೆ ಸುಂಕ, ತೆರಿಗೆ, ಬಿಟ್ಟಿ ಮೊದಲಾದ ಊಳಿಗಮಾನ್ಯ ಸುಲಿಗೆ ಮಾತ್ರ ದಲಿತರನ್ನೂ ಬಿಟ್ಟಿರಲಿಲ್ಲ. ದನಗಳ ಬಾಲ, ತಿಪ್ಪೆ, ಸೂಳೆಯರ ಕನ್ನಡಿ, ಕೊರಳಲಿಂಗ, ಹಣೆಯ ನಾಮ, ವಿಭೂತಿಗಳಿಗೂ ಕರ ವಸೂಲಿ ಮಾಡುತ್ತಿದ್ದ ಊಳಿಗಮಾನ್ಯ ಅಧಿಕಾರಶಾಹಿ ಚರ್ಮಕಾರರ ಮೇಲೆ ಕರ ವಿಧಿಸದೆ ಇದ್ದೀತೆ? ದಲಿತರಿಂದ ಬಿಟ್ಟಿ ಬೆಸನ ಮಾಡಿಕೊಳ್ಳದಿದ್ದೀತೆ?

ಕಾರುಕರು (ಕರಕುಶಲಕರ್ಮಿಗಳು) ರೈತರನ್ನು ಅವಲಂಬಿಸಿದ್ದರು; ರೈತರು ಕಾರುಕರನ್ನು. ರೈತರು ಮತ್ತು ಉಳಿದೆಲ್ಲ ವರ್ಗ, ಜಾತಿಗಳ ಜನ ಸಮೂಹಕ್ಕೆ ಅಗತ್ಯವಾದ ವಸ್ತುಗಳನ್ನು ನಿರ್ಮಿಸುವ ಕಾರುಕರು ಊಳಿಗಮಾನ್ಯ ವ್ಯವಸ್ಥೆಯ ಕಷ್ಟ ಸುಖಗಳನ್ನೆಲ್ಲ ಕಂಡವರು. ಅವರಲ್ಲಿ ದಲಿತರು ವಿಶೇಷವಾದ ಹಿಂಸೆ ಅನ್ಯಾಯಕ್ಕೊಳಗಾಗಿರುವುದು ಸಹಜವೇ.

ಆದರೂ ಆ ಕಾಲದ ಪದ್ಧತಿಯಂತೆ, ಸವರ್ಣೀಯ ಕಾರುಕರಂತೆ ದಲಿತರೂ ಕೂಡ ಅಪರೂಪಕ್ಕೆಂಬಂತೆ ತಮ್ಮ ಹೆಸರಿನ, ತಮ್ಮ ಕುಲದ ಹೆಸರಿನ ಈಶ್ವರ ದೇಗುಲ ನಿರ್ಮಾಣ ಮಾಡಿಸಿರುವುದು, ಬ್ರಾಹ್ಮಣರಿಗೆ ದಾನ ದತ್ತಿ ನೀಡಿರುವುದಿದೆ.

ಸಾಮಾನ್ಯವಾಗಿ ಶಾಸನಗಳಲ್ಲಿ ದಾನದತ್ತಿ ನೀಡಿದ ಭೂಮಿಯ ಅಥವಾ ಮನೆಗಳ ಮೇರೆಯನ್ನು ನಿರ್ದೇಶಿಸುವಾಗ ಅನೇಕ ಕಡೆ 'ಹೊಲಗೇರಿ'ಯ ಪ್ರಸ್ತಾಪ ಬರುತ್ತದೆ. ಆದರೆ ಇದರಿಂದ ಹೆಚ್ಚಿನ ವಿಷಯವೇನೂ ತಿಳಿಯಲಾರದು.

ದೇಗುಲಗಳಲ್ಲಿ ನಾನಾ ವಿಧದ ಸೇವೆ ಮಾಡುತ್ತಿದ್ದ ಶ್ರಮಿಕ ಕುಲಗಳಲ್ಲಿ 'ಪರೆಕಾರ'ರಾಗಿ ದಲಿತರಿದ್ದರು. ದೇಗುಲ ವ್ಯವಸ್ಥೆಗೆ ಭೂಮಿ ದಾನ ಮಾಡುತ್ತಿದ್ದಾಗ, ಇತರರಂತೆ ಪರೆಕಾರರಿಗೂ ಭೂಮಿ ಸಿಕ್ಕುತ್ತಿತ್ತು. ಹೀಗಾಗಿ ಪರೆಕಾರ ದಲಿತರಾದರೂ ಅಲ್ಪಸ್ವಲ್ಪ ಭೂಮಿ ಕಾಣಿಯುಳ್ಳವರಾಗಲು ಸಾಧ್ಯವಾಗಿತ್ತು.

ಜಾತಿ ಶ್ರೇಣೀಕರಣವನ್ನು ಎಲ್ಲ ಜಾತಿಕುಲಗಳು ಒಪ್ಪಿಕೊಂಡು, ವ್ಯವಸ್ಥೆಗೆ ಹೊಂದಿಕೊಂಡು ಹೋದ ಕಾಲವದು. ಹಾಗಾಗಿ ವರ್ಗ ದೃಷ್ಟಿಯಿಂದ ಶೋಷಣೆಗೀಡಾದ ಕುಲಗಳಲ್ಲಿ ದಲಿತರು ಸೇರಿದ್ದರು.

ಆಧುನಿಕ ಕಾಲದಲ್ಲಿ ದಲಿತರ ಮೇಲಾಗುತ್ತಿರುವ ದೌರ್ಜನ್ಯ, ಕ್ರೌರ್ಯಗಳನ್ನು ಕಂಡ ನಮಗೆ ಹಿಂದಿನ ಕಾಲದಲ್ಲಿ ಇದಕ್ಕೂ ಭಯಾನಕ ಸ್ಥಿತಿ ಇದ್ದಿರಬೇಕೆಂದು ಊಹಿಸುವಂತಾಗುತ್ತದೆ. ಶೃಂಗೇರಿ ಧರ್ಮ ಸಂಸ್ಥಾನ ಕೆಟ್ಟು ಹೋದ ಬ್ರಾಹ್ಮಣ ಹೆಂಗಸರಂತೆ ದಲಿತರನ್ನು ಮಾರಾಟಮಾಡುತ್ತಿತ್ತೆಂದು ಅಲ್ಲಿರುವ ಕಡತಗಳಿಂದ ತಿಳಿದುಬಂದಿದೆ. (ಶಾಸ್ತ್ರಿ: 'ಶೃಂಗೇರಿ ಧರ್ಮ ಸಂಸ್ಥಾನ') ಶರಣರ ವಚನಗಳಲ್ಲೂ ದಲಿತರ ಚಿತ್ರಣ ಅಷ್ಟಿಷ್ಟು ಮೂಡಿ ಬಂದಿದೆ. ಆದರೆ ಇದೊಂದೆ ಮುಖವನ್ನಲ್ಲ ನಾವು ನೋಡುವುದು. ದಲಿತ ಸಂಸ್ಕೃತಿಯ ಮಹೋನ್ನತ ದಿನಗಳ ನೆನಪು ಸೂಕ್ಷ್ಮ ರೀತಿಯಲ್ಲಾದರೂ ಶಾಸನಲೋಕದಲ್ಲಿ

ಮಿನುಗುತ್ತಿರುವುದನ್ನು ಗುರುತಿಸಬಹುದಾಗಿದೆ. ಒಂದು ಸಣ್ಣ ನಿದರ್ಶನವೆಂದರೆ–ದಲಿತರಂತೆ, ಬಹುಶಃ ದಲಿತೇತರರೂ 'ಪೊಲೆಯ' ಮತ್ತು 'ಮಾದಿಗ' ಎಂಬ ಅಂಕಿತನಾಮವುಳ್ಳವರಾಗಿದ್ದರು. ಅಲ್ಲಲ್ಲಿ ಇವು ಕುಲಗಳ ಹೆಸರುಗಳಾಗಿಯೂ ಬರುತ್ತವೆ. ಅಂದರೆ ಶಾಸನಗಳಲ್ಲಿ ಕಾಣುವ ಈ ಪೊಲೆಯ, ಮಾದಿಗ ಮೂಲದ ಹೆಸರೆಲ್ಲವೂ ದಲಿತರವೇ ಎಂದು ಹೇಳಲಾಗದು. ಇತರ ಜಾತಿ ಜನ ಈ ಹೆಸರುಗಳನ್ನು ಇಟ್ಟುಕೊಳ್ಳಬೇಕಾದರೆ ಕಾರಣವಿಲ್ಲದೆ ಇರಲಾರದು. ಈ ಪದಗಳು ದೈವ ಮೂಲದವೋ, ಪವಿತ್ರ ಪರಂಪರೆಯೋ, ಕುಲಗೋತ್ರ ಸಂಬಂಧಿಯೋ ಆಗಿದ್ದಾಗ ಮಾತ್ರ ಅಂಕಿತನಾಮಗಳಾಗಿ ಬಳಸಲ್ಪಡುತ್ತವೆ. ಹಾಗಾಗಿ ಇದು ನನಗೆ ದಲಿತ ಸಂಸ್ಕೃತಿಯ ಶ್ರೇಷ್ಠತ್ವದ ಸಂಕೇತವಾಗಿ ತೋರುತ್ತದೆ.

ಸ್ತ್ರೀ ದೈವಗಳನ್ನು ಹುಟ್ಟು ಹಾಕಿದವರು ಆದಿಮ ಬೇಸಾಯಗಾರ ದಲಿತರೇ. ಈಗಲೂ ಪ್ರತಿಗ್ರಾಮದಲ್ಲಿ ಸ್ತ್ರೀದೈವಗಳ ಪ್ರಾಬಲ್ಯ ವಿಶೇಷ. ಆದರೆ ಊಳಿಗಮಾನ್ಯ ಕಾಲದಲ್ಲಿ ಆ ಕಾಲದ ಮೇಲ್ವರ್ಗ, ಮೇಲ್ಜಾತಿಗಳ ಸಾಂಸ್ಕೃತಿಕ ರಾಜಕೀಯ ಹಿತಾಸಕ್ತಿ ಮತ್ತು ಪೂರ್ವ ಗ್ರಹಗಳ ಹಿನ್ನೆಲೆಯಲ್ಲಿ ಪುರುಷದೈವಗಳ ಪ್ರಸಕ್ತಿಯೇ ಹೆಚ್ಚಾಗಿತ್ತು. ಈಗ ಪ್ರಚಲಿತದಲ್ಲಿರುವ ಸ್ತ್ರೀ ದೈವಗಳ ಹೆಸರೂ ಕೂಡ ಶಾಸನಗಳಲ್ಲಿಲ್ಲ. ಉದಾಹರಣೆಗೆ ದ್ಯಾಮವ್ವ, ದುರುಗವ್ವಗಳ ಹೆಸರೇ ಕಾಣದು. ಬಳರಿ, ಭಗವತಿ, ಬಾದುಬ್ಬೆ, ದುರ್ಗೆಯರ ಹೆಸರು ಮಾತ್ರ ಕಂಡು ಬರುತ್ತವೆ. ಇಲ್ಲಿ ಭಗವತಿ ಎಂಬುದು ದ್ಯಾಮವ್ವನಾಗಿರುವ ಸಂಭವವಿದೆ. ಏಕೆಂದರೆ ಭಗವತಿ ಇಂದು ಎಲ್ಲಯೂ ಉಳಿದಿಲ್ಲ. ಭಗವತಿಯ ಪ್ರಸ್ತಾಪ ಬರುವಲ್ಲೆಲ್ಲ ಇರುವ ಸ್ತ್ರೀ ದೈವಗಳು ದ್ಯಾಮವ್ವನೋ, ದುರುಗವ್ವನೋ ಅಥವಾ ಆ ಗ್ರಾಮಗಳ ಹೆಸರಿನ ಸ್ತ್ರೀ ದೈವಗಳೇ. ದುರಗವ್ವ, ದ್ಯಾಮವ್ವಗಳಂಥ 'ಸಾಮಾನ್ಯ' ಹೆಸರುಗಳನ್ನು ಬಳಸಲು ಹಿಂದೇಟು ಹಾಕಿದ ಶಾಸನಲೋಕ ಇವನ್ನು ಸಂಸ್ಕೃತಿಕರಿಸಿ 'ಭಗವತಿ', 'ಬಳಾರಿ' ಎಂದಿತು.

ಈ ಸ್ತ್ರೀ ದೈವಗಳ ಅಧ್ಯಯನವೂ ಕೂಡ ದಲಿತ ಸಂಸ್ಕೃತಿಯ ಅಧ್ಯಯನದ ಭಾಗವಾಗೇ ಬರಬೇಕೆಂಬುದು ನನ್ನ ವಾದ. ಆರ್ಯವೈದಿಕ ಸಂಸ್ಕೃತಿಯಲ್ಲ, ದ್ರಾವಿಡ ಸಂಸ್ಕೃತಿಯ ಅಂಗವಾಗಿಯಂತೂ ಪರಿಶೀಲನಾರ್ಹವಾಗುತ್ತದೆ. ನಿಜ, ದಲಿತ ಮೂಲದ ಸ್ತ್ರೀ ದೈವಗಳನ್ನು ಪುರೋಹಿತಶಾಹಿ ಬಿಡಲಿಲ್ಲ. ಅತ್ಯಂತ ಪ್ರಸಿದ್ಧವಾದ, ಹೆಚ್ಚು ಆದಾಯವನ್ನು ಹೊಂದಿದ್ದ ಸ್ತ್ರೀದೈವ ಕ್ಷೇತ್ರಗಳಿಗೆ ಬ್ರಾಹ್ಮಣರೇ ಒಡೆಯರಾದರು. ಕೊಪ್ಪಳ ಜಿಲ್ಲೆಯ ಕುಕನೂರಿನ 'ಮಹಾಮಾಯೆ'ಯನ್ನು ಇದಕ್ಕೆ ಉತ್ತಮ ನಿದರ್ಶನವೆನ್ನಬಹುದು.

ಇಷ್ಟು ಹಿನ್ನೆಲೆಯಲ್ಲಿ ಈಗ ನೇರವಾಗಿ ಶಾಸನ ಪ್ರಪಂಚಕ್ಕೆ ಪ್ರವೇಶಿಸುವಾ :

**ಎಪಿಗ್ರಾಫಿಯಾ ಕರ್ನಾಟಿಕಾ – ಎರಡನೇ ಸಂಪುಟ :**

೧೧ನೇ ಶತಮಾನದ ಒಂದು ಸಣ್ಣ ಶಾಸನದಲ್ಲಿ 'ಪೊಲ್ಲಬ್ಬೆ' ಕಂತಿಯ ಹೆಸರಿದೆ. (ಪುಟ ೧೪೧)

ಶ್ರವಣಬೆಳ್ಗೊಳದ ೪೭೫ನೇ ಶಾಸನ ೧೩೬೮ರ ಬುಕ್ಕರಾಯನ ಕಾಲದ್ದು. ಜೈನರಿಗೂ, ಭಕ್ತರಿಗೂ ಉಂಟಾದ ಘರ್ಷಣೆಯ ಮಹತ್ವದ ವಿಷಯವನ್ನು ಇದು ಪ್ರಸ್ತಾಪಿಸುತ್ತದೆ. ಇಲ್ಲಿ ನೆರೆದ ೧೮ ನಾಡ ವಿವಿಧ ಕುಲಗಳಲ್ಲಿ 'ಜಾಂಬವ ಕುಲ'ದವರೂ ಇದ್ದರು. (ಪುಟ ೨೮೬) ಎರಡು ಮೇಲ್ಜಾತಿಗಳ ನಡುವಿನ ಜಗಳದ ಸಂದರ್ಭದಲ್ಲಿ ನಡೆದ ಪಂಚಾಯಿತಿಯಂಥ ಪ್ರಮುಖ ಸಭೆಯಲ್ಲಿ 'ಮಾದಿಗ'ರಿಗೂ ಪ್ರಾತಿನಿಧ್ಯವಿತ್ತು. 'ಮಾದಿಗ'ದ ಬದಲಿ, ಇಲ್ಲಿ 'ಜಾಂಬವಕುಲ' ಎಂದು ಗೌರವ ಸೂಚಕವಾಗಿ ಹೇಳಲಾಗಿದೆ. ಜಾತಿ ಸಮುದಾಯಗಳನ್ನು ಒಟ್ಟಾಗಿ ಹೇಳುವಾಗ ಬಳಸುತ್ತಿದ್ದ ಸಾಮಾನ್ಯ ಪದ '೧೮ ಸಮಯ', '೧೮ ಕುಲ', '೧೮ ನಾಡು', '೧೮ ಜಾತಿ'. ಹದಿನೆಂಟೇ ಜಾತಿಗಳಿದ್ದುವೆಂದಲ್ಲ, ಆದರೆ ಈ ಸಂಖ್ಯೆಯೇ ಪ್ರಚಲಿತವಿತ್ತು.

**ಎಪಿಗ್ರಾಫಿಯಾ ಕರ್ನಾಟಿಕಾ – ಮೂರನೇ ಸಂಪುಟ :**

ಈ ಸಂಪುಟದಲ್ಲಿ ತೆರಿಗೆಗಳ ಪಟ್ಟಿಯಲ್ಲಿ 'ಮಾದರಿಕೆ' ಹಲವಾರು ಕಡೆ ಬಂದಿದೆ. ಸಂಪಾದಕರು ಇದಕ್ಕೆ tax on basket making ('ಮೇದಾರರ ಬಿದಿರ ಬುಟ್ಟಿ ತಯ್ಯಾರಿಕೆಗೆ ಹಾಕಿದ ಸುಂಕ') ಎಂದು ಬರೆಯುತ್ತಾರೆ. ಇದು ತಪ್ಪು ಅರ್ಥ. ಕೆಲವು ಶಾಸನಗಳಲ್ಲಿ 'ಮೇದಾರ' ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಇಂಥ ಕೆಲವು ಉಲ್ಲೇಖಗಳು ಹೀಗಿವೆ–

"ಮೇದರಲ್ಲಿ ದಬ್ಬಣಿಗೆದೆಱೆಯ ನೋಡಿಕೊಂಬರು" (ಎಸ್.ಐ.ಐ. IX-I ಪು. ೧೬೫ ಅಂಬಳಿಯ ಕ್ರಿ.ಶ. ೧೧೦೬ರ ಶಾಸನ) "ಬಳ್ಳಿಗಾಮೆಯ ಮೇದರ ಕೊತಳಿ ಕೊಟ್ಟ ಕಲ್ಲು" [Ec, VII-VIII- ಶಿವಮೊಗ್ಗ ಜಿಲ್ಲೆ ಪುರವಣಿ ಶಾಸನಗಳು. ಪು ೧೨] "ಮೇದರುಂ" (ಜಂಬುನಾಥೇಶ್ವರ ಶಾಸನ ಕ್ರಿ.ಶ. ೧೦೮೨–ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨. ಕೊಪ್ಪಳ ಜಿಲ್ಲೆ.ಪು. ೩೦೫) ಧರ್ಮಾಪುರದ ಕ್ರಿ.ಶ. ೧೧೬೨ರ ಶಾಸನದಲ್ಲಿ ಕುಂಬಾರದೆರೆ, ಅಸಗದೆರೆ, ತೊತ್ತುದೆರೆ, ವೊಡ್ಡದೆರೆ, ನಾವಿದದೆರೆಗಳ ಜತೆ ಮೇದದೆರೆಯ ಪ್ರಸ್ತಾಪವಿದೆ. (Ec 4 ಹುಣಸೂರು ತಾಲೂಕು)

'ಮಾದಾರಿಕೆ'–ಮಾದಿಗರ ಚರ್ಮದ ವೃತ್ತಿಗೆ ಹಾಕುತ್ತಿದ್ದ ತೆರಿಗೆ ಎಂಬುದು ಸ್ಪಷ್ಟ.

ಹೊಣಕನಹಳ್ಳಿಯ (ಪುಟ ೨೫) ಕ್ರಿ.ಶ. ೧೫೦೬ರ ಶಾಸನದಲ್ಲಿ ತೆರಿಗೆಗಳ ಪಟ್ಟಿ ವಿಶೇಷವಾಗಿದೆ. ಊಳಿಗಮಾನ್ಯ ಸುಲಿಗೆಯ ಮುಖ್ಯ ರಚನೆಯನ್ನು ಗೊತ್ತು ಮಾಡಿಕೊಳ್ಳಲು ಇದನ್ನು ನೋಡಬೇಕು. "ಹೊಂನಕನಹಳ್ಳಿಯೆಂಬ ಗ್ರಾಮದಿಂ ಭಂಡಾರಕ್ಕೆ ತೆತ್ತು ಬಹ ಸಮಸ್ತ ಕುಳವರಿ, ವಿರಾಡ, ಕಾಣಿಕೆ, ಬೇಡಿಗೆ, ಹೊಂನು, ಹೊಂಬಳಿ, ದವಸ ಧಾನ್ಯ ಗಣಾಚಾರದೆರೆ, ಕಂಮಾರದೆರಿಗೆ, ಕುಳದೆರಿಗೆ, ಎಲೆಯ ತರುಗು, ಮಾದಾರಿಕೆ, ಉಪ್ಪಿನ ಕಾವಲಿ, ಜೀಯರ ತೆರಿಗೆ, ಸುಂಕ ಮೊದಲಾದ ಸಮಸ್ತ ತೆರಿಗೆ ಹೊರಿಗೆ". ಈ ಪಟ್ಟಿಯ ಹಲವಾರು ಪದಗಳಿಗೆ ಅರ್ಥಮಾಡಲಾಗಿಲ್ಲ. ಬಹಳಷ್ಟು ಸಲ ಊಹೆಯ ಅರ್ಥಗಳನ್ನೇ ಕೊಡಲಾಗುತ್ತದೆ. ಅದರಲ್ಲಿ ಮೇಲೆ ಹೇಳಿದ ತಪ್ಪು ಅರ್ಥವೂ ಒಂದು.

ಕ್ರಿ.ಶ. ೧೫೦೭ಈ ರಾಘವಾಪುರ ಶಾಸನದಲ್ಲಿ (ಪು. ೩೨) "ಗದ್ದೆ ಬೆದ್ದಲು, ತೋಟ ತುಡಿಕೆ, ಸುಂಕ ವೊಳವಾಱು ಹೊರವಾಱು, ಕಂಮಾಱದೆಱೆ, ಕುಂಬಾರದೆಱೆ, ಗಣವಾರಿಕೆ, ಕವಲಿ ಬೋಗಾಱೆಕೆ, ಮಾದಱೆಕೆ" ಮುಂತಾದ ಸ್ವಾಮ್ಯಗಳ ಹೆಸರಿವೆ. ಇಲ್ಲಿಯೂ ಮಾದರಿಕೆಗೆ basket weaver's tax ಎಂದು ಸಂಪಾದಕರು ಅರ್ಥ ಹೇಳಿದ್ದಾರೆ. ಇದು ಮಾದಿಗರಿಗೆ ಸಂಬಂಧಪಟ್ಟ ಕರ.

ತ್ರಿಯಂಬಕಪುರದ ಕ್ರಿ.ಶ.೧೫೨೧ರ ಶಾಸನದಲ್ಲೂ (ಪುಟ ೬೨) 'ಮಾದಾಱೆಕೆಯ' ಪ್ರಸ್ತಾಪವಿದೆ. ಅದು ಹೀಗೆ: "ಬೆಟ್ಟದ ಕಾವಲು, ಬೋಗಾಱದೆಱೆ ಗಣಾಕಾರ ತೆಱೆಗೆ ವೋಜುಗಳ ತೆಱೆಗೆ ದಾಸುಗಳ ತೆಱೆಗೆ ಆಹಳದೆಱೆಗೆ ಅಗಸರ ತೆಱೆಗೆ ನಾಯಿಂದರ ತೆಱೆಗೆ ಕುಂಭಾರ ತೆಱೆಗೆ ಗಾಣದ ಸುಂಕ ಕುಂಬನ ಕಾವಲಿ ಸುಂಕ ಮಗ್ಗ ಸುಂಕ ಮದಾಱೆಕೆ ಸಲಿಯೂರ ವೆತ್ತನೆ ಮುಂತಾದ ಸರ್ವ್ವತೆಱೆಗೆ". ಅಗಸರು, ನಾಯಿಂದರು, ಬೋಗಾರರು, ಕುಂಬಾರರು ಕಮ್ಮಾರರು ಮೊದಲಾದ ವೃತ್ತಿ ಕುಲಗಳ ಮಧ್ಯೆ ಮಾದಿಗರೂ ಸೇರಿದ್ದಾರೆ.

ಸಂಕ್ಷಿಪ್ತವಾಗಿ ಹೇಳುವಾಗ ಇವೆಲ್ಲವನ್ನೂ ಒಟ್ಟಾಗಿ "ಜಾತಿ ತೆರಿಗೆ" ಎಂದಷ್ಟೇ ಕೆಲವು ಕಡೆ ಹೇಳಲಾಗುತ್ತದೆ. ಹಿಂದೆ ಹೇಳಿದ ಹೊಣಕನಹಳ್ಳಿ ಶಾಸನದಲ್ಲೇ (ಪು.೨೬) "ಈ ಗ್ರಾಮದ ನಾನಾ ಜಾತಿ ತೆಱುವ ಜಾತಿ ತೆಱೆಗೆ, ನಾನಾ ಸಮಯದೆಱೆಗೆ" ಎಂಬ ಮಾತಿದೆ. ಜಾತಿ, ಸಮಯಗಳನ್ನು ಇಲ್ಲಿ ಬೇರೆ ಬೇರೆಯಾಗಿ ಪರಿಗಣಿಸಲಾಗಿದೆ. ಕೆಲವು ಕಡೆ ಅವೆರಡನ್ನು ಒಂದೇ ಎಂದು ಭಾವಿಸಿದ್ದು ಕಾಣುತ್ತದೆ. ಇಲ್ಲಿ

ಮೇಲ್ಜಾತಿಯವರ 'ಧರ್ಮ'ವನ್ನು (ಲಿಂಗಾಯತ, ಬ್ರಾಹ್ಮಣ, ಜೈನ ಇತ್ಯಾದಿ) 'ಸಮಯ'ವೆಂದು, ಉಳಿದೆಲ್ಲ ಶ್ರಮಿಕ ಕುಲಗಳನ್ನು 'ಜಾತಿ' ಎಂದು ಹೇಳಲಾಗಿದೆ.

ಕ್ರಿ.ಶ. ೧೬೫೬ರ ಹಂಗಳದ ಶಾಸನದಲ್ಲೂ 'ಜಾತಿದೆರಿಗೆ'ಯ ಹೆಸರಿದೆ. ಕ್ರಿ.ಶ. ೧೬೬೯ರ ಹೊರಮರಳಿ ಶಾಸನದಲ್ಲಿ ಕಂದಾಯ, ಸುಂಕಗಳ ಪಟ್ಟಿಯಲ್ಲಿ 'ಜಾತಿಕೂಟ' ಎಂಬುದೂ ಒಂದು. ಇದು 'ಜಾತಿದೆರಿಗೆ'ಯೇ.

ಕ್ರಿ.ಶ. ೧೫೧೩, ೧೫೨೧ರ ತ್ರಿಯಂಬಕಪುರದ ಶಾಸನಗಳಲ್ಲಿ 'ಮಾದಾಚಿಕೆ' ಎಂಬುದು ಸುಂಕಗಳ ಪಟ್ಟಿಯಲ್ಲಿದೆ. ಯಾವ ಯಾವ ಜಾತಿಯ ತೆರಿಗೆಗೆ ಏನೇನು ಹೆಸರಿತ್ತೆಂಬ ಮುಖ್ಯ ಸಂಗತಿ ಕ್ರಿ.ಶ. ೧೫೨೧ರ ಶಾಸನದಲ್ಲಿದೆ. ಗ್ರಾಮಗಳ ಸ್ಥಳಸುಂಕ, ಮಗ್ಗ, ಮನೆ, ಬೆಲ್ಲ ಸುಂಕ ಅಡೆದೆರೆ, ಮಾದಾರಿಕೆ, ವೋಜನವರಿ ಅಸಗರ ಹಲ ಗಾಣಿಗರ ಸುಂಕ, ಪಲರ ಬೇಡಿಗೆ, ನಾಯಿಂದರವರಿ ಕುಂಭಾರರು ಕಾಣಿ, ಯಾಲರ ಬೇಡಿಗೆ, ಕುರಿದೆರೆ, ಗ್ರಾಮಗಳ ಬೇಡಿಗೆ, ಉಪಲಿಗರ ಕಾವಲಿ ಎಂದು. ಬೇರೆ ಬೇರೆ ಜಾತಿ ಜನ ಬೇರೆ ಬೇರೆ ವಿಧದ ತೆರಿಗೆ ಕೊಡುತ್ತಿದ್ದರು. ಹಲ, ಬೇಡಿಗೆ, ವರಿ, ಕಾಣಿ ಮೊದಲಾದ ಪದಗಳು ಈ ಹಿನ್ನೆಲೆಯಲ್ಲಿ ಸಮರ್ಪಕವಾದ ಅರ್ಥವನ್ನು ಕೊಡಬಲ್ಲವು. ಒಂದೇ ಪದ ಕೆಲವು ಜಾತಿಗಳಿಗೆ ಮತ್ತು ಜಾತ್ಯೇತರ ವಸ್ತುಗಳಿಗೆ ಬಳಕೆಯಾಗಿರುವುದೂ ('ಬೇಡಿಗೆ') ಈ ವಿಷಯದಲ್ಲಿರುವ ಸಂಕೀರ್ಣ ಸ್ವರೂಪಕ್ಕೆ ನಿದರ್ಶನ.

'ಮಾದರಿಕೆ'ಯಲ್ಲಿ 'ಇಕೆ' ಎಂಬ ಉತ್ತರ ಪದಕ್ಕೆ 'ಚೈತನ್ಯಭಾವ'ವಿರುತ್ತದೆಂದು ಕೇಶಿರಾಜ ಹೇಳುತ್ತಾನೆ. ('ಶಬ್ದ ಮಣಿದರ್ಪಣ'ದ ತದ್ಧಿತ ಪ್ರಕರಣದ ೨೨೨ನೇ ಸೂತ್ರ. "ಪ್ರಕಟಂ ಚೇತನಭಾವದೊಳಿಕೆ") ಉನ್ನತಿಕೆ, ಉದ್ಧತಿಕೆ, ಆಯತಿಕೆ, ಪನ್ನತಿಕೆ, ದೂಸರಿಕೆ, ಉನ್ನತಿಕ್ಕೆ ಮೊದಲಾದ ಪ್ರಯೋಗಗಳನ್ನು ಕೊಟ್ಟಿದ್ದಾನೆ. ಆದರೆ ಮಾದಾರಿಕೆಯಲ್ಲಿ 'ಇಕೆ' ಮಾದಿಗರು ಕೊಡಬೇಕಾದ ತೆರಿಗೆ ಅಥವಾ ಸುಂಕವನ್ನು ಸೂಚಿಸುತ್ತದೆ.

'ಗೌಡಿಕೆ', 'ತಳವಾರಿಕೆ' ಎಂಬಲ್ಲಿ ತಮ್ಮ ಸೇವೆ ಅಥವಾ ವೃತ್ತಿಯಲ್ಲಿ ನಿರತರಾದವರು ಎಂಬರ್ಥದಲ್ಲಿ 'ಇಕೆ' ಬಂದಿದೆ. ಗೌಡ ಮಾಡುವ ಆಳ್ವಿಕೆ 'ಗೌಡಿಕೆ'. ಊರಿನ ಶಾಂತಿ, ಸುವ್ಯವಸ್ಥೆ ನೋಡಿಕೊಳ್ಳುವ ಕೆಲಸ 'ತಳವಾರಿಕೆ'. 'ಮಾದಾರಿಕೆ'ಗೂ ಈ ಬಗೆಯ ಅರ್ಥ ಹೇಳಬಹುದೇ? 'ಮಾದಿಗ' ಕೆಲಸದಲ್ಲಿ ನಿರತನಾಗಿರುವುದು 'ಮಾದಾರಿಕೆ' ಎಂದು. ಆದರೆ ಗೌಡ, ತಳವಾರರಂತೆ ಮಾದಿಗರು ಯಾವ 'ಅಧಿಕಾರ" ವೃತ್ತಿ ಮಾಡುವಂತಿರಲಿಲ್ಲವಾಗಿಯೂ, ಈ ಪದ ತೆರಿಗೆ ಸುಂಕಗಳ ಪಟ್ಟಿಯಲ್ಲಿ ಮಾತ್ರ ಕಂಡು ಬರುವುದರಿಂದಲೂ 'ಇಕೆ', ಸುಂಕವನ್ನು ಸೂಚಿಸುತ್ತದೆಂದೇ ಹೇಳಬೇಕು. 'ಮಾದಿಗರು' ಮಾಡುತ್ತಿದ್ದ ಚರ್ಮದ ಕೆಲಸಕ್ಕೆ ಸಂಬಂಧಿಸಿ ಮಾತ್ರ ಈ 'ತೆರಿಗೆ' ಇರುವಂತಿದೆ. ಇದು ಬೇರಾರಿಗೂ ಅನ್ವಯಿಸದು. ಇದೇ ರೀತಿ 'ಅಗಸರ ತೆರಿಗೆ', 'ನಾಯಿಂದರ ತೆರಿಗೆ', 'ಕುಂಬಾರ ತೆರಿಗೆ', ಮೊದಲಾದವು. ಚರ್ಮದಿಂದ ಆಗಬೇಕಾದ ಕೆಲಸಗಳೂ ಸಾಕಷ್ಟಿದ್ದವು. ತುಪ್ಪ, ಎಣ್ಣೆ, ನೀರು ಹಾಕುವ ಸಿದ್ದಲಿಕೆ, ಬುದ್ದಲಿಕೆ, ಬಾವಿಯಿಂದ ನೀರೆತ್ತುವ ಮಟ್ಟಿ (ಕಪಲಿ), ಹರಿಗೋಲು, ಮೃದಂಗ, ಹಲಗೆ, ನಗಾರಿ ಮೊದಲಾದ ವಾದ್ಯಗಳು, ಪಾದರಕ್ಷೆಗಳು, ರೈತರಿಗೆ ಬೇಕಾಗುವ ಮಿಣಿ, ಬಾರು, ಹಗ್ಗ, ಜತಿಗಿ; ಯೋಧರು, ರಾಜರು, ಮಾನ್ಯರು ಏರುವ ಆನೆ ಕುದುರೆಗಳಿಗೆ ಬೇಕಾಗುವ ಚರ್ಮದ ಸಾಧನಗಳು ಇತ್ಯಾದಿ. ಈ ವೃತ್ತಿಯ ಸುತ್ತ ಬೆಳೆದ 'ದಲಿತ ಸಂಸ್ಕೃತಿ' ಅಸಾಮಾನ್ಯವಾದುದು. ಅದನ್ನು ಚರ್ಚಿಸುವ ಮೊದಲು 'ಮಾದಾರಿಕೆ' ಸುಂಕದ ಉಲ್ಲೇಖಗಳ ಚರ್ಚೆ ಮುಗಿಸಬೇಕಿದೆ.

ಶಿವಪುರದ (ಕ್ರಿ.ಶ. ೧೪೬೯) ಒಂದು ಶಾಸನದಲ್ಲಿ ( ಪು. ೧೩೮) 'ಮಾದರುಕೆ' ಎಂಬ ಪ್ರಯೋಗವಿದೆ. "ತಿವಳಮಾಆದೆಜೆ' ಕುಂಬಾಱದೆಜೆ, ವಾರುದಳವಾಜಿಕೆ, ಅನಾಪು ಅಂದ ಜಾವಿಕೆಗಳ ಜತೆ ಈ ಪದವಿದೆ. ಇಲ್ಲಿ 'ಕೆ' ಎಂಬ ಪ್ರತ್ಯಯವಿದೆ. ಇಲ್ಲವಾದರೆ 'ಇಕೆ'ಯ ಅಪಪ್ರಯೋಗವಾಗಿ 'ಉಕೆ' ಬಂದಿದೆ.

"...ಕುಂಬಾಱ ಚಉರಿಗೆ ಗಾಣ ಕಾವಲಿ ಅಗಸ ಮಾದೆಗ ತೋಟ ಕಬಿನ ಆಲೆಯ" ಸುಂಕ ಎಂದು ಕಗ್ಗಲೂರು ಶಾಸನದಲ್ಲಿದೆ. (16ನೇ ಶ.೪೨೧ ಪುಟ) ಇಲ್ಲಿ ಅಗಸ, ಮಾದಿಗರನ್ನು ಸುಂಕಗಳ ಪಟ್ಟಿಯಲ್ಲಿ ಸೇರಿಸಿರುವುದನ್ನು ಗಮನಿಸಿ. ಗಟ್ಟವಾಡಿಯ ಕ್ರಿ.ಶ. ೯೧೨ರ ಶಾಸನದಲ್ಲಿ (ಪು ೩೮೫) "ಹೊಲೆ ಅಷವಂ" ಎಂಬವ ಸಾಕ್ಷಿಗಳಲ್ಲಿ ಉಲ್ಲೇಖಿತನಾಗಿದ್ದಾನೆ. ಈ ಪ್ರಾಚೀನ ಶಾಸನದಲ್ಲಿ ಸೆಲಾಂಭೈಯರು, ಆನೆಯರು, ನಲ್ಲೈವರು, ಕಮ್ಮರ, ಬಡಗಿಗಳ ಹೆಸರುಗಳಿದ್ದು ಸೆಲಬ್ಬೈ, ಆನೆಯರು, ನಲ್ಲೆವರು ಎಂಬಿವು ವಂಶಗಳ (ಬೆಡಗು) ಹೆಸರಾಗಿರುವಂತಿವೆ.

"ಹೊಲೆಯರಸ" ಎಂಬ ಹೆಸರು ಕ್ರಿ.ಶ. ೧೨೭೮ರ ದಾಸನೂರು (ಪು. ೩೬೪) ಶಾಸನದಲ್ಲಿದೆ.

'ಮಾದಾರಿಕೆ' ಮಾದಿಗರಿಗೆ ಸಂಬಂಧಿಸಿದ ತೆರಿಗೆಯಾದರೆ, ಹೊಲೆಯರಿಗೆ ಈ ಬಗೆಯ ತೆರಿಗೆ ಇರಲಿಲ್ಲವೇ? ಆಕಸ್ಮಿಕವಾಗಿ ಬರುವ 'ಹೊಲೆದೆರೆ' ಇಂಥ ತೆರಿಗೆ ಇರಬಹುದು.

'ಮಾದಾರಿಕೆ'ಯೊಂದೇ ಮಾದಿಗರಿಗೆ ಅನ್ವಯಿಸುವ ತೆರಿಗೆಯಾಗಿರಲಿಲ್ಲ. ಇತರ ಶ್ರಮಿಕ ಕುಲಗಳಿಗೆಲ್ಲ ಅನ್ವಯಿಸುವ ಹಲವಾರು ಸಾಮಾನ್ಯ ತೆರಿಗೆಗಳಿದ್ದವು. ಅವು ದಲಿತರಿಗೂ ಅನ್ವಯಿಸುತ್ತಿದ್ದವು. ಉದಾಹರಣೆಗೆ 'ಹೊಗೆದರೆ', 'ಮಗ್ಗದೆರೆ', 'ಆಡುದೆರೆ', 'ಮದುವೆದೆರೆ', 'ಮೊಟ್ಟೆ ಸುಂಕ', 'ಮನೆವಣ', 'ಬಿಟ್ಟಿ', 'ಬಿರಾಡ', 'ಅಳಿವು', 'ಅನ್ಯಾಯ' 'ಗ್ರಾಮತೆರಿಗೆ', 'ಬಿನುಗುದೆರೆ' ಮುಂತಾದವು. ಒಂದೊಂದು ಪ್ರದೇಶಕ್ಕೆ ತೆರಿಗೆ, ಸುಂಕ, ಬಿಟ್ಟಿ ಕೆಲಸ ಮೊದಲಾದವುಗಳಲ್ಲಿ ವ್ಯತ್ಯಾಸವಾಗುತ್ತಿತ್ತು. ಆದರೆ ಎಲ್ಲೆಲ್ಲಿಯೂ ಕಷ್ಟ ಹೊರೆ ತಪ್ಪುವಂತಿರಲಿಲ್ಲ.

**ಎಪಿಗ್ರಾಫಿಯಾ ಕರ್ನಾಟಿಕಾ – ಸಂಪುಟ ನಾಲ್ಕು :**

ಸಾಕ್ಷಿಗಳಲ್ಲಿ 'ಸಮ್ಮಚಿ ಮಾದರ ಪಡೆವಂತಕ' ಎಂಬ ಹೆಸರು ಕೆಂಪನಪುರ ಶಾಸನದಲ್ಲಿದೆ. (ಕ್ರಿ.ಶ. ೧೧೯೬ ಪು.೧೪೩) ಸಮಗಾರ, ಮಾದರ ಒಂದೇ. ಹೊಂಗನೂರಿನ ಕ್ರಿ.ಶ. ೧೫೪೯ರ ಶಾಸನ ಶಾಪವಾಕ್ಯ 'ಹೊಲೆಯರ ಮಗನು' ಎನ್ನುತ್ತದೆ. ದಾಸನಪುರದ ಕ್ರಿ.ಶ. ೧೫೩೬ರ ಶಾಸನದಲ್ಲಿ ತೆರಿಗೆಗಳ ಪಟ್ಟಿಯಲ್ಲಿ ಮಾದಾರಿಕೆ ಸೇರಿದೆ. ಮಲೆಯೂರು ಶಾಸನದಲ್ಲಿ (೧೯ನೇ ಶ) 'ಮಾದಿಗನ ಮಕ್ಕಳು' ಎಂಬ ಕೊನೇ ಮಾತಿದೆ.

'ತಪ್ಪಿದವರ ಹೆಂಡಿರ ಹೊಲೇರು' (ಕ್ರಿ.ಶ. ೧೫೯೧ ಕೋಣನೂರು ಶಾಸನ ೫–೪೦) "ಈ ಧರ್ಮ ತಪ್ಪಿದರೆ ಹೆಂಡರ ಹೊಲೆ ಮಾದಿಗರು.... ಹಾಗೆ" (ಕ್ರಿ.ಶ. ೧೬೦೦ ಹಾರನಹಳ್ಳಿ ೫–೧೦) "ಅವನ ತಾಯನ ಹೊಲಮಾದಿಗ... ಹಾಗೆ" (ಹಳಗನಹಳ್ಳಿ ಕ್ರಿ.ಶ. ೧೬೧೧, ೫–೨೦) "ತನ್ನವಹಮಾನವನು ಅನಾಮಿಕರಿಗೆ ಕೊಟ್ಟ ಹಾಗೆ" (ಬೆಟ್ಟದ ಪುರ ಕ್ರಿ.ಶ. ೧೬೦೭, ೫–೫೯) "ಅವನ ಹೆಂಡತಿಯನು ಹೊಲಮಾದಿಗರಿಗೆ ಕೊಟ್ಟ ಎಂದು ಕೊಟ್ರಗ್ರಾಮ" (ಬೆಟ್ಟದ ಪುರ, ೧೭ನೇ ಶ. ೫–೬೬); "ತಮ್ಮ ದೇಹವನ್ನು ಹೊಲೇರು ಮಾದಿಗರಿಗೆ ಕೊಟ್ಟ ಹಾಗೆ" (ಕ್ರಿ.ಶ. ೧೬೧೩, ನೆಲವಾಡಿ ೫–೯೦); "ಅಳುಪಿದವನು ತನ್ನ ದೇಹ ಮಾನವನು ಹೊಲೆಯರಿಗೆ ಕೊಟ್ಟ ನೋಪಾದಿ" (೧೬ನೇ ಶ. ಆಯತನಹಳ್ಳಿ ೫–೧೦೪) ಎಂದು ಮೈಸೂರು ಜಿಲ್ಲೆಯ ಶಾಸನ ಶಾಪವಾಕ್ಯಗಳಲ್ಲಿ ಬರುವುದರ ವಿಶೇಷವನ್ನು ಗಮನಿಸಬಹುದು. ಶಾಸನಗಳ ಕೊನೆಗೆ ಶಾಸನಗಳನ್ನು ಕೆಡಿಸುವವರನ್ನು ಎಚ್ಚರಿಸುವ ಗಂಭೀರ ಮಾತುಗಳ ಬದಲಿ ಅಶ್ಲೀಲ ಬಯ್ಗುಳನ್ನು ಉಪಯೋಗಿಸುವುದು ೧೬ನೇ ಶತಮಾನದ ನಂತರದ ಶಾಸನಗಳಲ್ಲಿ ಸರ್ವೇಸಾಮಾನ್ಯ. ಅವುಗಳಲ್ಲಿ ಹೊಲೆಯ–ಮಾದಿಗ ಕುಲಗಳನ್ನು ಮಾತ್ರ ನಮೂದಿಸುತ್ತಿರುವುದು ಗಮನಾರ್ಹ.

**ಎಪಿಗ್ರಾಫಿಯಾ ಕರ್ನಾಟಿಕಾ – ಸಂಪುಟ ಐದು :**

೧೧ನೇ ಶತಮಾನದ ಹಳೆಬೋಗಾದಿಯ ಶಾಸನವೊದರಲ್ಲಿ ಸಾಕ್ಷಿಗಳನ್ನು ಹೇಳುವಾಗ 'ಪೊಲೆಯರ ಗೊಗ್ಗಿವಾಳರ ಮಳಿಗ ಬೀಜಗ'ನನ್ನು ಹೆಸರಿಸಲಾಗಿದೆ. ಇಲ್ಲಿರುವ ಇತರ ಸಾಕ್ಷಿ ಜಾತಿಗಳೆಂದರೆ ಪಂಚಾಳ, ನಾವಿದ, ಕಮ್ಮರ, ಅಗಸರ. ವಿಜಯಪುರದ ೧೫–೧೬ನೇ ಶತಮಾನದ ಒಂದು ಶಾಸನದಲ್ಲಿ ಕೊಪ್ಪಹಾಳ ಹೊಲೆ ಕೊಜಗನ ಕಿರ್ರಕುಳ ಮಗ್ಗವನ್ನು ದೇವರಿಗೆ ಮಾನ್ಯ ಕೊಟ್ಟರೆಂಬ ವಿಷಯವಿದೆ. ಹೊಲೆಯರ ಮಗ್ಗದ ಮೇಲೆ ಹಾಕಿದ 'ಕಿರುಕುಳ' ಎಂಬ ಸುಂಕವನ್ನು ದೇವರಿಗೆ ಬಿಟ್ಟ ಸಂಗತಿ ಇದು. ಇದೇ ಊರಿನ ೧೪೨೬ರ ಇನ್ನೊಂದು ಶಾಸನ ಕೂಡ ಹೊಲೆಯರ ಮಗ್ಗದ ಪ್ರಸ್ತಾಪ ಮಾಡುತ್ತದೆ, 'ಹಾಳ ಹೊಲೆ ಕೊಂಕನ ಕುಳ ಮಗ್ಗ ೧' ಎಂದು. ಕ್ರಿ.ಶ. ೧೫೩೫ರ ಒಂದು ಶಾಸನ 'ಹೊಲೆಯನ ನಾಯಮಣ್ಣ ಹೊಲ'ವನ್ನು ಹೆಸರಿಸುತ್ತದೆ. ಮೈಸೂರಿನ (೯೯) ೧೬೭೪ರ ಶಾಸನದಲ್ಲಿ 'ಹೊಲೇರ ಬಿಳಿಗಿರಿ ಹೊಲ'ದ ಪ್ರಸ್ತಾಪವಿದೆ. ಹೊಲೆಯರು ಮಗ್ಗಗಳಿಂದ ಬಟ್ಟೆ ನೆಯ್ಯುತ್ತಿದ್ದ ಕರಕುಶಲ ಕರ್ಮಿಗಳಾಗಿದ್ದರೆಂಬುದು ಇಲ್ಲಿರುವ ಮುಖ್ಯ ಅಂಶ. ಅವರಿಗೆ ಅಲ್ಪಸ್ವಲ್ಪ ಜಮೀನು ಇದ್ದುದರಿಂದ ರೈತರೂ ಆಗಿದ್ದರು.

೧೮ನೇ ಶತಮಾನದ ಕೆಂಚನಗೋಡು ಶಾಸನದಲ್ಲಿ ಶ್ರೀ ಮಾದಿಗ ಹೋಚನ ಶ್ರೀಕರನ ಕೊಡಗೆಯ ಗದ್ದೆ ಕೊಳಗ ಅರ್ಧಕ್ಕೆ 'ಅಳುಹಿದವನು ಹೆಣಬಾಯ ಅಕ್ಕಿಯನು, ನಾಯದುಡುನವನು ತಿಂದವನು' ಎನ್ನುತ್ತದೆ. 'ಶ್ರೀಮಾದಿಗ' ಎಂದು ಹೋಚನನ್ನು ಗೌರವಸೂಚಕವಾಗಿ ಸಂಭೋಧಿಸಿರುವುದು ಅಪರೂಪದ ದಾಖಲೆ. ನರಸೀಪುರದ ೧೭೪೯ರ ಶಾಸನದಲ್ಲಿರುವ 'ಬಲಗೈಯವರ ಹುಂಡಿಯ ಹುಲ್ಲ ಹಿತ್ತಲ ಒತ್ತು', 'ಬಲಗೈ ಗುಮ್ಮನ ಗದ್ದೆ', 'ಬಲಗೈ ಕಂಬಳ ಗದ್ದೆ' ಎಂಬ ಸಂಗತಿಗಳು ಹೊಲೆಯರ ಆಸ್ತಿಯನ್ನು ಸೂಚಿಸುತ್ತವೆ.

**ಎಪಿಗ್ರಾಫಿಯಾ ಕರ್ನಾಟಿಕಾ – ಸಂಪುಟ ಆರು :**

ಮಾದಿಗರಿಗೆ 'ಮಾದಾರಿಕೆ' ಎಂಬ ಸುಂಕವಿದ್ದಂತೆ ಹೊಲೆಯರಿಗೂ ನಾನಾ ಬಗೆಯ ತೆರಿಗೆ ಹೊರಿಗೆ ಸುಂಕಗಳಿದ್ದವು. ಕ್ರಿ.ಶ. ೧೧೬೫ರ ಬಸ್ತಿ ಶಾಸನದಲ್ಲಿ ಇತರ ತೆರಿಗೆಗಳ ಜೊತೆ "ಹೊಲೆಮಗ್ಗ"ವನ್ನು ಧಾರಾಪೂರ್ವಕವಾಗಿ ಬಸದಿಗೆ ದತ್ತಿಬಿಟ್ಟ ವಿಷಯವಿದೆ. ಹೊಲೆಯರೂ ಮಗ್ಗಗಳನ್ನು ಇಟ್ಟುಕೊಂಡು ಬಟ್ಟೆ ನೇಯುತ್ತಿದ್ದರೆಂಬ ಸೂಚನೆ ನೀಡುತ್ತದೆ "ಹೊಲೆಮಗ್ಗ" ಹೊಲೆಯರು ಮಾತ್ರ ಉಪಯೋಗಿಸುವುದಕ್ಕೆ ಇಂಥ ಬಟ್ಟೆ ತಯಾರಾಗುತ್ತಿದ್ದುವೇ? ಹೆಚ್ಚು ಅಭಿವೃದ್ಧಿಗೊಂಡಿದ್ದ 'ಪುರ'ಗಳ ವಾರದ ಸಂತೆ ಅಥವಾ ಜಾತ್ರೆ ಸಂತೆಗಳಲ್ಲಿ ಈ ಬಗೆಯ ಕಟ್ಟುಪಾಡು ಇರುವುದು ಸಾಧ್ಯವಿತ್ತೇ?

ದಲಿತರು ದಲಿತೇತರ ಜಾತಿ ವೃತ್ತಿಗಳನ್ನು ಮಾಡುತ್ತಿದ್ದರೆಂದು ಮೇಲ್ನೋಟಕ್ಕೆ ಕಾಣುತ್ತದೆ. ತಮಿಳುನಾಡಿನ ಪರೈಯನ್‌ರೂ (ಹೊಲೆಯರು) ದಲಿತೇತರ ವೃತ್ತಿಗಳನ್ನು ಮಾಡುತ್ತಿದ್ದ ಬಗ್ಗೆ ಥರ್ಸ್ಟನ್‌ರಲ್ಲಿ ದಾಖಲೆಯಿದೆ. ಕೃಷಿಯನ್ನು ಆಧರಿಸಿದ ನೂಲುವ, ನೆಯ್ಯುವ, ಎಣ್ಣೆ ತೆಗೆವ, ಕೃಷಿ ಉಪಕರಣಗಳನ್ನು ಮಾಡುವ (ಬಡಿಗತನ, ಕಂಬಾರಿಕೆ, ಕುಂಬಾರಿಕೆ) ಎಲ್ಲ ವೃತ್ತಿಗಳು ಹಳ್ಳಿ ಸಂಸ್ಕೃತಿ ನಿರ್ಮಾಪಕರಾದ ಮೂಲ ಕೃಷಿಕ ದಲಿತರಿಂದಲೇ ಕವಲೊಡೆದಿರಬೇಕೆಂದು ಊಹಿಸಲು ಹಲವಾರು ನಿದರ್ಶನಗಳಿವೆ. ಅಂತಿಮವಾಗಿ ಚರ್ಮೋದ್ಯೋಗ ಮಾತ್ರ ದಲಿತರಿಗೆ ಉಳಿಯಿತು. ಉಳಿದೆಲ್ಲ ವೃತ್ತಿಗಳು ಮಧ್ಯಮ ಜಾತಿಗಳಾದ ದಲಿತರ ಕೈ ಸೇರಿದವು. ಮೇಲ್ಜಾತಿಯವರಿಗೆ ಅನಿವಾರ್ಯವಾಗಿದ್ದ ಈ ವೃತ್ತಿಗಳನ್ನು ಮಾಡುತ್ತಿದ್ದ ದಲಿತರನ್ನು ಮಧ್ಯಮಜಾತಿಗಳನ್ನಾಗಿ ಪರಿವರ್ತಿಸುವ ಮೂಲಕ ಸಾಮಾಜಿಕ ಸ್ಥಾನಮಾನವನ್ನು ಕಲ್ಪಿಸಲಾಯಿತು. ವರ್ಣವ್ಯವಸ್ಥೆಯನ್ನೇ ಇದಕ್ಕೆ ನಿದರ್ಶನವೆನ್ನಬಹುದು. (ಮುಂದೆ ನೋಡಿ) ಇಲ್ಲಿ ಬೇರೆ ಕೆಲವು ನಿದರ್ಶನಗಳಿವೆ–

೧. ಉಪ್ಪು ತಯ್ಯಾರಿಸುವ ಉಪ್ಪಾರರನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಕೊಸಹೊಲೆಯ' ಎನ್ನುತ್ತಾರೆ.
೨. ಇದೇ ಜಿಲ್ಲೆಯ, ಮಾತೃ ಮೂಲೀಯ ಸಮಾಜದ ಬಂಟರಲ್ಲಿ 'ಹೊಲೆಯ ಬಳಿ' ಎಂಬುದೂ ಇದೆ.
೩. ದಲಿತರಿಗಿದ್ದ ಮಾತೃದೈವದ ಪೂಜಾರಿಕೆ ಮಧ್ಯಮ ಜಾತಿಗಳ ಕೈಸೇರಿತು. ದ್ಯಾಮವ್ವ, ದುರುಗವ್ವ, ಊರಮ್ಮ, ಕಾಳಮ್ಮ, ಮಾರೆಮ್ಮಗಳ ಪೂಜಾರಿಗಳು ಬಹುತೇಕ ಪಂಚಾಳರು. ಅಗಸರು, ಕ್ಷೌರಿಕರೂ ಅಲ್ಲಲ್ಲಿ ಈ ಕೆಲಸ ಮಾಡುತ್ತಾರೆ. ಇವರೆಲ್ಲರೂ ದಲಿತ ಮೂಲದವರೇ. (ನೋಡಿ: "ದಕ್ಷಿಣ ಭಾರತದ ಅಗಸರು ಮತ್ತು ಕ್ಷೌರಿಕರು: ಎಸ್.ಎಸ್.ಹಿರೇಮಠ 'ಛಂದಃ ಸ್ಮೃತಿ' ಗದಗ. ಮಾರ್ಚ್, ಏಪ್ರಿಲ್, ೨೦೦೦)

ಹದಿನೈದು ತಾಮ್ರದ ಹಲಗೆಗಳಷ್ಟು ದೀರ್ಘವಾದ ತೊಣ್ಣೂರಿನ ಕ್ರಿ.ಶ. ೧೭೨೨ರ ಎರಡನೇ ಕೃಷ್ಣರಾಜನ ಶಾಸನ ೨೩ ಗ್ರಾಮಗಳನ್ನು ೧೧೨ ಬ್ರಾಹ್ಮಣ ವೃತ್ತಿ ಮಾಡಿ ದಾನ ಮಾಡಿದ ವಿಷಯ ತಿಳಿಸುತ್ತದೆ. ಈ ಗ್ರಾಮಗಳ ಜನ ನೀಡಬೇಕಾಗಿದ್ದ ತೆರಿಗೆಗಳು: ಗದ್ದೆ, ಬೆದ್ದಲು, ತೋಟ, ತುಡಿಕೆ, ಅಣೆ, ಅಚ್ಚುಕಟ್ಟು, ಕಾಡಾರಂಭ, ನೀರಾರಂಭ, ಮಗ್ಗ, ಮನೆವಣ, ಸುಂಕ, ಪೊಮ್ಮು, ಸುವರ್ಣಾದಾಯ, ಕಾಣಿಕೆ, ಬೇಡಿಗೆ, ಹುಲ್ಲು, ಹಣ, ಕುರಿದೆರಿಗೆ, ಜಾತಿಗೂಟ, ದೇವರಾಯಪಟ್ಟಿ, ಹೆಚ್ಚು ಬೇಡಿಗೆ, ಗ್ರಾಮಾದಾಯ, ಚರಾದಾಯ, ಹೊರಾದಾಯ, ಊಳಿಗಮಾನ್ಯದ ಅರೆವಾಸಿ ಇತ್ಯಾದಿ.

ಇದೆಲ್ಲ ಆದಾಯ ಈವರೆಗೆ ರಾಜನಿಗೆ ಸಲ್ಲುತ್ತಿತ್ತು. ಈಗ ಅದು ೧೧೨ ವೃತ್ತಿಗಳ ಬ್ರಾಹ್ಮಣರಿಗೆ ಸೇರುವಂತಾಗುತ್ತದೆ. ಈ ಬೃಹತ್ ಪ್ರಮಾಣದ 'ದಾನ' ಸಣ್ಣ ರಾಜ್ಯವನ್ನು ಹೋಲುತ್ತಿದೆ. ಬ್ರಾಹ್ಮಣರಿಗೆ

ಪ್ರಭುತ್ವದಿಂದ ಲಭಿಸುತ್ತಿದ್ದ ಸವಲತ್ತಿನ ರೀತಿಗೆ ಇದು ಒಂದು ಸಣ್ಣ ನಿದರ್ಶನ. ಇಲ್ಲಿ ದಲಿತರಿಗೆ ಸಂಬಂಧಪಡುತ್ತಿದ್ದ ತೆರಿಗೆಸುಲಿಗೆ ಹಲವಾದರೂ ಇರಬೇಕು; ಜಾತಿಗೂಟ, ಮನೆವಣ, ಬಿಟ್ಟಿ ಇತ್ಯಾದಿ. ಇದೇ ಶಾಸನ ಕೊನೆಗೆ ಶಾಪವಾಕ್ಯದಲ್ಲಿ ಕಿರಾತ, ಮ್ಲೇಚ್ಛರ ಜತೆ ಚಾಂಡಾಲ, ಚರ್ಮಕಾರರನ್ನೂ ಸೇರಿಸಿದೆ. ಅದು ಹೀಗೆ–

"ಯಿಮಂ ಧರ್ಮಂ ಚಯೇ ಘ್ನನ್ತಿಯೇ ಚ ತತ್ಸಹಕಾರಿಣಃ

ಕಿರಾತಂ ಮ್ಲೇಚ್ಛ ಚಾಂಡಾಲ ಚಮ್ಮ ಕಾರಾತ್ಮ ಜಾಸ್ತುತೇ"

ಚಂಡಾಲ ಎಂಬ ಪದ ಬಳಕೆ ಇರುವ ಇತರ ಕೆಲವು ಶಾಸನ ನಿದರ್ಶನಗಳು–

ನರಿಹಳ್ಳಿ (ಕ್ರಿ.ಶ. ೧೫೮೫ : Ec, 6 ಪು. ೩೦೫) ಶಾಸನದಲ್ಲಿ "ಯಿ ಸೇವೆಯ ಧರ್ಮವನು ನಡಿಸದೆ ತಪ್ಪಿದವನು ತಂಮ ತಂದೆ ತಾಯ ಕಾಶಿಯಲಿ ಕೊಂದ ಪಾತಕಕೆ ಹೋಗುವನು. ಚಾಂಡಾಲದ ಯೋನಿಯಲಿ ಜನಿಸಿದವನು".

ಕ್ರಿ. ಶ. ೧೧೮೦ರ ಸರಗೂರು ಶಾಸನದಲ್ಲಿ (Ec, 7 ಪು ೪೧೫) ಧರ್ಮವ ಕೆಡಿಸಿದವ 'ಚಂಡಾಳೆಯ ಮಗ' ಎಂದಿದೆ. ಇದೇ ಊರ ಕ್ರಿ.ಶ. ೧೫೯೫ರ ಶಾಸನದ ಕೊನೆಗೆ "ತಪ್ಪಿದವನೇ ಹೊಲೆಯ ಮಾದಿಗ" ಎಂದಿದೆ. (ಪು. ೪೧೪) ಕ್ರಿ.ಶ. ೧೦೪೫ರ ಮೋರಗೇರಿ ಶಾಸನ (SII IX-I ಪು ೭೩) ಆಚಾರಗೆಟ್ಟು ನೈಷ್ಟಿಕ ಸ್ಥಾನ ಬಿಡದೆ ಇರುವ ಸನ್ಯಾಸಿ ನಾಯಿ ಕತ್ತೆ ಚಂಡಾಳ ಎನ್ನುತ್ತದೆ. ಇದೇ ರೀತಿ ಕುಡುತಿನಿಯ ಕ್ರಿ.ಶ. ೧೯೮ರ ಶಾಸನದಲ್ಲೂ ಇದೆ, (ಪು. ೧೫೫) ಕ್ರಿ.ಶ. ೧೧೯ರ ಶಾಸನದಲ್ಲೂ ಇದೆ. (ಪು. ೧೯೪) ಕ್ರಿ.ಶ. ೧೫೩೩ರ ಕವುತಾಳಂ ಶಾಸನದಲ್ಲೂ (SII IX-II ಪು. ೫೭೫) 'ಮಾದೆಗರ' ಉಲ್ಲೇಖವಿದೆ. ಕ್ರಿ.ಶ. ೧೫೨೯ರ ಹಾವಿನಹಾಳು ವೀರಾಪುರದ ಶಾಸನದ ಕೊನೆಗೆ (SII IX-II ಪು. ೫೪೪) "ತಪ್ಪಿದರೆ ಯೀ ಊರ ಮಾದಾಱ ಮಕಳು" ಎಂದಿದೆ. 'ತಮ್ಮ ಅಭಿಮಾನವನು ಹೊಲಮಾದಿಗರಿಗೆ ಕೊಟ್ಟವರು' ಎಂಬ ಮಾತು ಬುಡಿಲಿ ಶಾಸನದಲ್ಲಿದೆ. (ಅದೇ ಪು. ೬೦೫–೧೫೩೯ ಕ್ರಿ.ಶ.)

ತಪ್ಪಿದವರನ್ನು, 'ಧರ್ಮಕೆಡಿಸಿದವರನ್ನು' ಚಂಡಾಳ, ಹೊಲೆಯ ಮಾದಿಗರಿಗೆ ಹೋಲಿಸುವುದು ಎಂಥ ಕ್ಷುದ್ರತನ. ಕೆಡಿಸುವವರೇ ಬೇರೆ, ಬಯ್ಗಳವಾಗುತ್ತಿರುವವರೇ ಬೇರೆ. ದಲಿತರೆಲ್ಲ 'ಕೆಡಿಸುವವರು' ದಾನ ಧರ್ಮ ಹಾಳು ಮಾಡುವವರು ಎಂದು ಹೇಳಿದಂತಾಗುತ್ತದೆ. ಆದರೆ ಇದಕ್ಕೆ ಎಲ್ಲಿಯೂ ಆಧಾರವಿಲ್ಲ. ಪ್ರತಿಯಾಗಿ ಅರಸರು, ಅಧಿಕಾರಿಗಳು, ಸಂಬಂಧಪಡುತ್ತಿದ್ದ ಬ್ರಾಹ್ಮಣರು, ಸಾಮಂತರು, ಶಾಸನಗಳನ್ನು ಕೆಡಿಸುತ್ತಿದ್ದರೆಂದು ಹಲವಾರು ಶಾಸನಗಳು ಪರೋಕ್ಷವಾಗಿ ಸೂಚಿಸುತ್ತವೆ. ಜಾತಿ ಶ್ರೇಣೀಕರಣದಲ್ಲಿ ಅತ್ಯಂತ ಕೆಳಗಿದ್ದ ಹೊಲೆಯ–ಮಾದಿಗರಿಗೆ ಹೋಲಿಕೆ ನೀಡುತ್ತಿರುವುದು ಒಂದು ಮುಖ. ಆದರೆ ಶಾಸನ ಪ್ರಪಂಚದಲ್ಲಿ ದಲಿತ ಸಂಸ್ಕೃತಿಯ ಬೇರೆ ಮುಖಗಳನ್ನು ಕಾಣಲು ಅವಕಾಶವಿದೆ.

ಒಟ್ಟಾರೆ ದಲಿತರ ಬಗ್ಗೆ ಮೇಲ್ಜಾತಿ, ಮೇಲ್ವರ್ಗದವರ ಧೋರಣೆ ಒಮ್ಮುಖಿಯಾಗಿರಲಿಲ್ಲ. ಇಲ್ಲಿ ಕಂಡು ಬರುವ ವೈರುದ್ಯವೂ ಗಮನಾರ್ಹ. ಒಂದೆಡೆ ದಲಿತ ಸಂಸ್ಕೃತಿಯ ಘನತೆ, ಇನ್ನೊಂದೆಡೆ ಅತ್ಯಂತ ಕೀಳು ಎಂಬ ಮನೋಭಾವ. ಈ ವೈರುದ್ಯ ಅಂದಿನ ಸಾಮಾಜಿಕ ಸಂಕೀರ್ಣತೆಗೆ ಸಾಕ್ಷಿ. ತೊಣ್ಣೂರಿನ ೧೨೨೩ ಕ್ರಿ.ಶ ದ(೮೧) ಶಾಸನದಲ್ಲಿ 'ಹೊಲೆಸುಂಕ'ದ (ಪು. ೧೫೩) (Ec. ೬) ಪ್ರಸ್ತಾಪವಿದೆ.

ಮೇಲುಕೋಟೆ, ದೇಗುಲವನ್ನು ಕೇಂದ್ರಮಾಡಿಕೊಂಡು ದುಡಿಮೆಗಾರರನ್ನು ಸುಲಿಯುತ್ತಿದ್ದ ಇನ್ನೊಂದು ಸ್ಥಳ. ಇಲ್ಲಿಯ ಕ್ರಿ.ಶ. ೧೭೨೪ರ ಒಂದು ತಾಮ್ರ ಶಾಸನದಲ್ಲಿ ತೆರಿಗೆ ಸುಂಕಗಳ ದೀರ್ಘ ಪಟ್ಟಿಯಿದೆ. (Ec. 6 ಪು. ೨೮೪) ಕುತೂಹಲಕ್ಕಾದರೂ ಇದನ್ನು ನೋಡಬೇಕು. ೧೨ ಗ್ರಾಮಗಳ ಆದಾಯವೆಲ್ಲ ದೇವರ ಹೆಸರಿನಲ್ಲಿ ಬ್ರಾಹ್ಮಣರಿಗೆ ಸೇರುತ್ತಿತ್ತು.

"ಗದ್ದೆ, ಬೆದ್ದಲು, ತೋಟ, ತುಡಿಕೆ, ಅಣೆ, ಅಚ್ಚುಕಟ್ಟು, ಕಾಡಾರಂಭ ನೀರಾರಂಭ ಕಾಣಿ ಬೆಡಿಗೆ ವೀರಭದ್ರದುರ್ಗದ ಅಠ್ಠವಣೆಗೆ ತೆರುವ ಬೀಡು, ದೇವಸ್ಥಾನದ ಅರೆವಾಸಿ ಊಳಿಗಮಾನ್ಯ, ಕಮ್ಮಾರರ ತೊಟ್ಟಿದೆರಿಗೆ, ಬೆಟ್ಟದ ಪೊಡಿನ ತೆರಿಗೆ ಪಳ್ಳಿಗರ ಜಾತಿತೆರಿಗೆ, ಬಾಲದೆರಿಗೆ, ನಾಮಗಾಣಿಕೆ ಗೋಪಾಲಸ್ವಾಮಿ ವರ್ತನೆ ಸುಂಕಕ್ಕೆ ಸಲ್ಲುವ ಪಟ್ಟಡಿ ಯೇರುಸುಂಕ ತೆಗೆದ ಬಾಗಿಲ ಹಣ, ಜೀತಗಾರರ ಕಂಬಳಗಾರರ ಸುಂಕ ವೊಳವಾವು ಸುಂಕಕ್ಕೆ ಸಲುವ ಆ ಸಕಲ ಪೈರು ಪೊಮ್ಮಿಗೆ ಸಲುವ ಜವಳಿ, ಲಾಭಾದಾಯದ ಪೊಮ್ಮು ಕಬ್ಬಿನದ ಪೊಮ್ಮು ಹೊಗೆಸೊಪ್ಪಿನ ಪೊಮ್ಮು ಹೊಗೆಸೊಪ್ಪಿನ ಪೊಮ್ಮು ಸಂತೆ ಹುಟ್ಟುವಳಿ ಇತ್ಯಾದಿ.

ಇದರಲ್ಲಿ ಪಳ್ಳಿಕಾರರ ಜಾತಿತೆರಿಗೆ, ಜೀತಗಾರರ, ಕಂಬಳಗಾರರ ಸುಂಕಗಳು ಉಲ್ಲೇಖಾರ್ಹವಾಗಿವೆ. ಸುಂಕ ತೆರಿಗೆಗಗಳನ್ನು ಎಂಥ ಕ್ಷುಲ್ಲಕ ವಸ್ತು, ವಿಷಯಗಳಿಗೂ ಹಾಕಲಾಗುತ್ತಿತ್ತೆಂದರೆ ಆ ಸುಲಿಗೆಯ ಕ್ರೌರ್ಯಕ್ಕೆ ಇಂಥ ತೆರಿಗೆ ಪಟ್ಟಿಗಳನ್ನು ನೋಡಿದರೆ ಸಾಕಾಗುತ್ತದೆ.

ದಾನ ಸಂದರ್ಭದ 'ಮಾನ್ಯ' ('ಸರ್ವಮಾನ್ಯ' ಇತ್ಯಾದಿ)ಎಂಬ ಪದ ಶೋಷಿತ ಜನ ಕುಲಗಳಿಗೆ ಅನ್ವಯಿಸುತ್ತಿರಲಿಲ್ಲ. ಶೋಷಕರ ಮಧ್ಯದ ಕೊಳುಕೊಡೆಯನ್ನು ಮಾತ್ರ ಸೂಚಿಸುತ್ತಿತ್ತು. ದುಡಿಮೆಗಾರರು ಕೊಡುತ್ತಿದ್ದ ತೆರಿಗೆ, ಮಾಡುತ್ತಿದ್ದ ಬಿಟ್ಟಿಗೆ 'ಮಾನ್ಯ' (ಮಾಫಿ, ವಿನಾಯಿತಿ) ಇರಲಿಲ್ಲ. ಅಪರೂಪಕ್ಕೊಮ್ಮೆ ಮಾತ್ರ ಕೆಲವು ಸಲ ಇಂಥ ವಿನಾಯಿತಿ ಸಿಗುತ್ತಿತ್ತಷ್ಟೇ. ಅದೂ ಜನರ ತೀವ್ರ ಪ್ರತಿಭಟನೆಯ ನಂತರ. ಜನ ತೆರಿಗೆ ಹೊರಿಗೆಗಳ ಭಾರ ತಾಳಲಾರದೆ ಇಡಿಯಾಗಿ ಗ್ರಾಮಗಳನ್ನು ಬಿಟ್ಟು ಹೆಚ್ಚು ಕಷ್ಟಕ್ರೌರ ಇರಲಾರದ ಕಡೆ ವಲಸೆ ಹೋಗುವುದರ ಮೂಲಕ ಪ್ರತಿಭಟನೆ ಸಲ್ಲಿಸುತ್ತಿದ್ದರು. ಸುಸಂಘಟಿತ ಹೋರಾಟ ಮಾಡುವ ಸ್ಥಿತಿ ಶ್ರಮಿಕ ಕುಲಗಳಿಗಿರಲಿಲ್ಲ. ಇಂಥ ಸಂದರ್ಭದಲ್ಲಿ ಆಡಳಿತಾಧಿಕಾರಿ ವರ್ಗ ಶ್ರಮಿಕರಿಗೆ ಒಂಚೂರು ವಿನಾಯಿತಿ ತೋರುತ್ತಿತ್ತು. ಇಂಥ ಸಾಮೂಹಿಕ ಪ್ರತಿಭಟನೆಯ ವಿಚಿತ್ರ ಕ್ರಮದಲ್ಲಿ ದಲಿತರೂ ಸೇರಿರುತ್ತಿದ್ದರೆಂದು ಬೇರೆ ಹೇಳಬೇಕಿಲ್ಲ. ಒಂದೆಡೆ ಹೀಗೆ ಜನ ಭಿಕಾರಿಗಳಂತೆ ಗುಳೆಕಟ್ಟಿಕೊಂಡು ತಮ್ಮ ಊರು ಕೇರಿ ಬಿಟ್ಟು ಹೋಗುತ್ತಿದ್ದರೆ, ಇನ್ನೊಂದೆಡೆ ಆ ಪ್ರದೇಶದ ಚಕ್ರವರ್ತಿ ನಾಚಿಕೆಯಿಲ್ಲದಂತೆ ನೇರವಾಗಿ ಬ್ರಾಹ್ಮಣರಿಗೆ ಅಥವಾ ದೇಗುಲಗಳಿಗೆ ಸಮೃದ್ಧವಾಗಿ ದಾನ ದತ್ತಿಗಳನ್ನು ನೀಡಿ ಆಡಂಬರ, ವೈಭವ ಮೆರೆಸುತ್ತಿದ್ದ. ನಿದರ್ಶನಕ್ಕೆ 'ಸುವರ್ಣಯುಗ'ವಾದ ವಿಜಯನಗರ ಅಚ್ಚುತರಾಯನ ಕಾಲದ ಈ ಶಾಸನಗಳನ್ನು ನೋಡಬಹುದು.

ಕವುತಾಳಂ ಶಾಸನ (ಕ್ರಿ.ಶ. ೧೫೩೩. SII IX-II ಪು ೫೭೪) "...ಶ್ರೀ ವೀರಪ್ರತಾಪ ಶ್ರೀ ಅಚ್ಚುತರಾಯ ಮಹಾರಾಯರ ಭುಜಪ್ರತಾಪೋದ್ದಂಡ ಶ್ರೀಮಹಾಮಂಡಲೇಶ್ವರ ಸಲಕಯದೇವ ಚಿಕತಿರುಮಲರಾಜ ಮಹಾ ಅರಸುಗಳೂ ಕವತಾಳದ ಸೀಮೆಯ ಸಮಸ್ತ ಗವುಡ ಪ್ರಜೆಗಳಿಗೆ ಕೊಟ ಸಿಲಾಸಾಸನದ ಕ್ರಮವೆಂತೆಂದರೆ ನಿಮ್ಮ ಕವತಾಳದ ಸೀಮೆಯಲು ಅರಮನೆಯವರೂ ಅವನಾಯವ ಮಾಡಲಾಗಿ, ಅವನಾಯಕೆ ಅಂಜಿ ನೀಉ ಸಮಸ್ತ ಪ್ರಜೆಗಳೂ ಸೀಮೆಯನೂ ಬಿಟ್ಟು ಹಟಮಾಡಿ ಮಾಸವೆಯ ಸೀಮೆಗೆ ಬಿಟ್ಟು ಹೋಗಿ ಯಿರಲಾಗಿ ನಾವು ಆದವಾನಿಗೆ ಬಂದು ನಿಮ್ಮ ಕವತಾಳದ ಸೀಮೆಯ ಸಮಸ್ತ ಗವುಡ ಪ್ರಜೆಗಳಿಗೆ ಕೊಟ ಸಿಲಾಸಾಸನದ ಕ್ರಮವೆಂತೆಂದರೆ" ಎಂದು ಪ್ರಾರಂಭಿಸಿ

ವಿನಾಯಿತಿ ಇತ್ಯಾದಿ ವಿವರಿಸುತ್ತ "ಇಲ್ಲಿ ಸೀಮೆಯಲು ಯಿದಂಥಾ ಅಂಗಡಿ ಮಗ್ಗ ಕುಱುಂಬ ಕುಂಬಾಱ ಅಸಗ ನಾಯಿಂದ ಬಾರಿಕ ಮಡಿಯವರು ಮುಂತಾದ ಸಮಸ್ತ ಬಿನುಗಳಿಗೆ ಜೋಳದ ಕಡಾಯವನು ಹಾಕಲಿಲ್ಲ" ಮುಂತಾಗಿ ತಿಳಿಸುತ್ತದೆ.

ಕವತಾಳ ಸೀಮೆಯ ಸಮಸ್ತ ಗೌಡ ಪ್ರಜೆಗಳಿಗೆ ಅರಮನೆಯವರು ಅನ್ಯಾಯ ('ಅವನಾಯ') ಮಾಡಿದ್ದಾರೆಂಬುದನ್ನು ಶಾಸನ ಸ್ಪಷ್ಟವಾಗಿ ಒಪ್ಪಿಕೊಂಡಿರುವುದನ್ನು ನೋಡಿದರೆ ರೈತರು, ಕರಕುಶಲಿಗಳು ಮತ್ತು ಕೂಲಿಕಾರರ ಮೇಲೆ ಆಗುತ್ತಿದ್ದ ಶೋಷಣೆಯ ಭೀಕರತೆ ಗೊತ್ತಾಗುತ್ತದೆ. ಇಡಿ ಸೀಮೆಯ ಎಲ್ಲ ಗ್ರಾಮಗಳ ಜನ ಒಟ್ಟಾಗಿ "ಹಟಮಾಡಿ" ಮಾಸವೆಯ ಸೀಮೆ ಬಿಟ್ಟು ಹೋಗಿದ್ದಾರೆ.

ಒಂದೆಡೆ ಹೀಗೆ ಭೀಕರ ಸ್ಥಿತಿಯಿದ್ದರೆ ಹಂಪಿಯ ಅಚ್ಚುತಸ್ವಾಮಿ ಗುಡಿಯಲ್ಲಿ (ಕ್ರಿ.ಶ. ೧೫೩೪. ಪು. ೫೮೪) ನಡೆಯುತ್ತಿದ್ದ ಸೂರೆಯನ್ನು ನೋಡಿ.

ತುಂಗಾಭದ್ರಾ ತೀರದ ತಿರುವೆಂಗಳನಾಥ ದೇವರಿಗೆ ಅಚ್ಯುತರಾಯಪುರವೆಂಬ ಪ್ರತಿನಾಮದ ಚೋರಮನೂರು ಸೀಮೆಯ ೩ ಗ್ರಾಮಗಳ ಆದಾಯವನ್ನು ೧೪ ಬ್ರಾಹ್ಮಣರಿಗೆ ನೀಡುತ್ತಾನೆ, ಹಿರಿಯ ತಿರಮಲರಾಜ ಒಡೆಯ. "ಅಭಿಶೇಖದ ಜನ ೨, ಮಂತ್ರಪುಷ್ಪದ ಜನ ೨, ಪುರಾಣಿಕರ ಜನ ೨, ಇತಿಹಾಸದ ಜನ ೧, ಘಳಿಯಾರದ ಜನ ೧, ಭಾಗವತ ಜನ ೨, ಕಟಿಗೆಯ ಜನ ೨,' –ದಾನ ಪಡೆದ ಬ್ರಾಹ್ಮಣರು.

ಕ್ರಿ.ಶ. ೧೫೩೪ರ ಕಾಂಜೀವರಂ ಶಾಸನದಲ್ಲಿ ದೇವರ ಹೆಸರಿನಲ್ಲಿ ಸಣ್ಣಕ್ಕಿ ಹಾಲು ತುಪ್ಪ ಸಕ್ಕರೆ ಬಾಳೆಹಣ್ಣು, ತೆಂಗಿನಕಾಯಿ ಎಲೆ, ಅಡಕೆ, ಗಂಧ ಮೊದಲಾದವುಗಳ ತಿಂಗಳ ಲೆಕ್ಕ ಹಾಕಿ ದಾನಬಿಟ್ಟಿರುವ ವಿವರಗಳಿವೆ. (ಅದೇ ಪು. ೫೮೨) ಇಂಥ ನಿದರ್ಶನಗಳು ಹಲವಾರು.

**ಎಪಿಗ್ರಾಫಿಯಾ ಕರ್ನಾಟಿಕಾ – ಸಂಪುಟ ಏಳು :**

ಅಳೀಸಂದ್ರದ ಕ್ರಿ.ಶ. ೧೧೮೩ರ ಶಾಸನದಲ್ಲಿ (ಪು. ೫೯) ದತ್ತಿ ನೀಡಿದ ಭೂಮಿಯ ಗಡಿಯನ್ನು ಗುರುತಿಸಿ ಹೇಳುವಾಗ 'ಹೊಲೆಗಟೆ, 'ಹೊಲೆಗೇರಿ'ಗಳ ಹೆಸರಿವೆ ಕ್ರಿ.ಶ. ೧೧೯೦ರ ಕಸಲಗೆರೆಯ ಶಾಸನದಲ್ಲಿ (ಪು. ೧೬೭)ಬರುವ "ಹಗಮಗೆಜೆ ಹೊಲೆಯರ ಜೀವದ ಸಾಲಿನ....." ಎಂಬ ಉಲ್ಲೇಖದ ನಂತರ ಶಾಸನ ತ್ರುಟಿತವಾಗಿರುವುದರಿಂದ ವಿಷಯ ಅಸ್ಪಷ್ಟವಿದೆ. ಬಿಟ್ಟ ದತ್ತಿಯ ಸಂದರ್ಭದಲ್ಲಿ ಇದು ಬಂದಿದೆ. ಇಂಥದೇ ತ್ರುಟಿತ ಶಾಸನ ಬೀಚೇನಹಳ್ಳಿಯ 16–17ನೇ ಶತಮಾನದ್ದು. 'ಹೊಲೆಯ' ಪದ ಇದರಲ್ಲಿದೆ. (ಪು. ೨೦೪).

ದಾನದತ್ತಿಗಳ ಸಂದರ್ಭದಲ್ಲಿ ಗ್ರಾಮದ ೧೮ ಸಮಯ (೧೮ ಜಾತಿ)ದವರೆಲ್ಲರ ಸಾಕ್ಷಿ ಹಾಕಿಸುತ್ತಿದ್ದುದು ಕ್ರಮ. ಇದರಲ್ಲಿ ಹೊಲೆಯ, ಮಾದಿಗರೂ ಸೇರಿರುತ್ತಿದ್ದರೆಂಬುದಾಗಿ ಹಿಂದೆ ಗಮನಿಸಿದ್ದೇವೆ. ಗುತ್ತಲು ಗ್ರಾಮದ ಕ್ರಿ.ಶ. ೧೩೧೬ರ ಶಾಸನದಲ್ಲಿ ಇಂಥ ಸಾಕ್ಷಿಗಳ ಹೆಸರು ಅವರವರ ಜಾತಿಗಳ ಜತೆಗೂಡಿ ದಾಖಲಾಗಿದೆ. ಗೌಡನೊಬ್ಬನಿಗೆ ಕೊಟ್ಟ ಕೊಡುಗೆಗೆ "ಇಂತಪ್ಪುದಕ್ಕೆ ಸಾಕ್ಷಿ ದರಣೀದೇವ ನಾಗಣ್ಣ ಗುತ್ತಲ ನಾಲ್ವರು ಗವುಡಗಳು, ಸ್ಥಾನಿಕರು ನಾಲ್ವರು ಕುಂಬಾರರು ಹೆಗ್ಗಡಿಗಳು ಕನಬೋವನೊಳಗಾದ ನಾಲ್ವ ಬೋವಗಳು ಅಜೋಜ, ಜಕೋಜ ಅಗಸರ ಭೀಮ ನಾಇಂದ ಹೆಬ ಹೊಲೆ ಮಂಡನ ಯಾಕೆ". ಸಾಕ್ಷಿದಾರ ಹೊಲೆಯನ ಹೆಸರು 'ಮಂಡನಯಾಕ' ಎಂದು ಬಹುಶಃ ತಪ್ಪಾಗಿ ದಾಖಲಾಗಿದೆ.

ಅರುವನಹಳ್ಳಿಯ ಕ್ರಿ.ಶ. ೧೩೮೮ರ ಶಾಸನ (ಪು. ೩೦೭) ಪ್ರಮುಖವಾದುದು. ಸುಂಕ ಸೊದಿಗೆ ಕರ ಕಂದಾಯಗಳಲ್ಲಿ ಬಿನುಗು ಪ್ರಜೆ ಮತ್ತು ಹೊಲೆ ಮಾದಿಗರನ್ನು ಸೇರಿಸಿದ್ದು ಇಲ್ಲಿ ದಾಖಲಾಗಿದೆ. ಅಲ್ಲಲ್ಲಿ ಒಡೆದಿರುವ ಈ ಶಾಸನ ಭಾಗ ಹೀಗಿದೆ– "ಆ ಗ್ರಾಮದ ಚತುಸೀಮೆ...ಯ ತೋಟ ಕಳಮನೆಬಿಡು ಬಿನುಗು ಹೊಲೆಮಾದಿಗರು ತಿಪ್ಪಯ ಗುಳೆ ಇಉ ಮುಂ...ಗೆಯಾಗಿ...".

ಹೊಲೆಯ ಮಾದಿಗರು ಮತ್ತು ಬಿನುಗು ಪ್ರಜೆಗಳೆಲ್ಲ ಇಲ್ಲಿ ಕಂದಾಯ ಸುಂಕಗಳ ಪಟ್ಟಿಯಲ್ಲಿರುವುದರಿಂದ ಇವರನ್ನು 'ಆದಾಯ' ವಸ್ತುಗಳಲ್ಲಿ ಸೇರಿಸಲಾಗಿತ್ತೆಂದು ಹೇಳಬೇಕಾಗುತ್ತದೆ. ಹೊಲೆಯ ಮಾದಿಗರ ದುಡಿಮೆಯಷ್ಟೇ ಅಲ್ಲ ಸ್ವತಃ ಆ ಜೀವಂತ ವ್ಯಕ್ತಿಗಳೇ 'ತೆರಿಗೆ'ಯಾಗಿದ್ದರು. ಕತ್ತೆ ಕುದುರೆಗಳಂತೆ ಶೃಂಗೇರಿ ಧರ್ಮ ಸಂಸ್ಥಾನ ದಲಿತರನ್ನು ಮಾರುತ್ತಿತ್ತು ಎಂಬ ಅಂಶ ಮೇಲಿನ ಊಹೆಯನ್ನು ಪುಷ್ಟಿಗೊಳಿಸುವುದು. ಬಿನುಗು ಪ್ರಜೆಗಳಿಂದ ಹೊಲೆಯ ಮಾದಿಗರು ಪ್ರತ್ಯೇಕವಾಗಿಯೂ ಕೂಡ ದಾಖಲಾಗುತ್ತಾರೆ. ಹೊಲೆಯ ಮಾದಿಗರಂತೆ 'ಬಿನುಗು ಪ್ರಜೆ'ಗಳನ್ನು ದಾನ ಕೊಡುವವರು, ಪಡೆದವರು (ಶೋಷಕರು) ಆಳುತ್ತಿದ್ದರು. ಮುಟ್ಟಹಳ್ಳಿಯ ಕ್ರಿ.ಶ. ೧೫೦೬ ಶಾಸನ (ಪು. ೪೦೯) ಇದಕ್ಕೆ ಆಧಾರ. ಸುಂಕ, ಕಂದಾಯಗಳ ದೀರ್ಘ ಪಟ್ಟಿ ನೀಡಿ "ಒಕ್ಕಲು ಮಕ್ಕಳು ಸಹ ಶೂದ್ರಪ್ರಜೆ, ನಾನಾ ಜಾತಿಯಾದ ಬಿನುಗುಪ್ರಜೆಯನೂ ಆಳಿಕೊಂಡು ನಿಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ" ಆಚಂದ್ರಾರ್ಕಸ್ಥಾಯಿಯಾಗಿ ಅನುಭವಿಸಬೇಕು ಎಂದಿದೆ. ಒಕ್ಕಲು ಮಕ್ಕಳನ್ನು (ಗೌಡರು ಇತ್ಯಾದಿ) ಶೂದ್ರ ಪ್ರಜೆಗಳೆಂದೂ, ಇತರ ಶ್ರಮಿಕ ಕುಲಗಳನ್ನು 'ಬಿನುಗು ಪ್ರಜೆ'ಗಳೆಂದೂ ಶಾಸನ ಹೇಳುತ್ತಿದೆ. ಆಸ್ತಿಪಾಸ್ತಿಯಿಲ್ಲದೆ ಕೂಲಿ ಕೆಲಸ ಮಾಡುತ್ತಿದ್ದ ಮತ್ತು ಕರಕುಶಲಕರ್ಮಿ ಬಡವರನ್ನು 'ಬಿನುಗು' ಪದ ಸೂಚಿಸುತ್ತದೆ. ಇದು 'ಶೋಷಿತವರ್ಗ' ವನ್ನು ಸೂಚಿಸುವ 'ವರ್ಗೀಯ ಪದ', ಜಾತಿಯ ಪದವಲ್ಲ. ಇದೇ ಶಾಸನದಲ್ಲಿ ಇತರ ತೆರಿಗೆಗಳ ಜತೆ "ಕುಂಬಾರ ತೆರಿಗೆ, ಕನ್ನಡಿ ತೆರಿಗೆ, ಮಾದಾರಿಕೆ ಮೊದಲಾದ ಜಾತಿ ತೆರಿಗೆ, ಸಮಯ ತೆರಿಗೆ ಆಲಯ ಸುಂಕ ಹೆಡಗೆ ಮೊಟ್ಟೆ ಸುಂಕ ಮೊದಲಾದ ಸ್ಥಾವರ ಸುಂಖ"ಗಳನ್ನು

ಹೇಳಲಾಗಿದೆ. "ಮಾದಾರಿಕೆ ಮೊದಲಾದ ಜಾತಿತೆರಿಗೆ" ಎಂದು ಇಲ್ಲಿ ಸ್ಪಷ್ಟವಾಗಿ ಹೇಳೀರುವುದರಿಂದ ಹಿಂದೆ 'ಇಕೆ' ಚರ್ಚೆಯ ಸಂದರ್ಭದಲ್ಲಿ ಮಾಡಿದ ನಿರ್ಣಯ ಸರಿ ಎಂದಾಗುತ್ತದೆ. ಮಾದಾರಿಕೆ ಈ ಭಾಗದಲ್ಲಿ ಸಮಯ ತೆರಿಗೆಯಲ್ಲಿ ಸೇರಿರಲಿಲ್ಲ.

ಸುಜ್ಜಲೂರು ಶಾಸನದಲ್ಲಿ (ಕ್ರಿ.ಶ. ೧೪೭೩ ಪು. ೪೩೪) ತೆರಿಗೆಗಳನ್ನು ಹೇಳುವಾಗ "ಹಲಿಗೆಗಳ ಸ್ವಾಮ್ಯ" ಎಂಬ ಮಾತಿದೆ. ಇದು ದಲಿತರು ಬಾರಿಸುತ್ತಿದ್ದ ಹಲಿಗೆಗಳಿಗೆ ಸಂಬಂಧಿಸಿದ ತೆರಿಗೆ ಇರುವಂತಿದೆ. ಊಳಿಗಮಾನ್ಯ ಕಾಲದ ತೆರಿಗೆಗಳ ಸ್ವರೂಪ ತಿಳಿದವರಿಗೆ ಇದು ಅಚ್ಚರಿಯ ಸಂಗತಿ ಆಗಲಾರದು.

ಕ್ರಿ.ಶ. ೧೩೦೦ ತಿಪ್ಪೂರು ಶಾಸನದ ಕೊನೆಗೆ "ಹೊಲೆಯರ ಮನೆಗೆ ಪಣ ಒಂದು" (ಪು. ೨೮೧) ಎಂದಿರುವುದು ದಲಿತರ ಮೇಲಿನ ಸುಲಿಗೆಯ ವ್ಯಾಪಕತೆಯನ್ನೇ ಸೂಚಿಸುತ್ತದೆ.

**ಎಪಿಗ್ರಾಫಿಯಾ ಕರ್ನಾಟಿಕಾ – ಸಂಪುಟ ಎಂಟು :**

ಮುದುಗೆರೆಯ ಕ್ರಿ.ಶ. ೧೧೫೬ರ ಶಾಸನದಲ್ಲಿ (ಪು. ೩೬೬) ಹೆಗಡೆ ಬಿಟ್ಟ ದತ್ತಿಗೆ "ಮುದುಗೆರೆಯ ಒಳಗೆ ಒಕ್ಕಲು, ಹೊರಗೆ ಹೊಲೆಯುಂ" ಒಡಂಬಟ್ಟರೆಂದಿದೆ. ಊರ ಹೊರಗೆ ಹೊಲೆಯರು ಸ್ವಂತ ಕೇರಿಗಳಲ್ಲಿರುತ್ತಿದ್ದರು. ಊರಿಗೆ ಅಂಟಿಕೊಂಡೇ ಇರುತ್ತಿದ್ದ ಈ ಕೇರಿಗಳು ಹೊಲೆಯರ (ಮಾದಿಗರೂ ಕೂಡ) ಅನನ್ಯತೆಯನ್ನು ಉಳಿಸಿದವು. ಊರಿನ ಒಳಗಿನ ಪ್ರಪಂಚ ದಲಿತರೊಳಗೆ ಪ್ರವೇಶಿಸದಂತೆ ಇರಲು ಈ ಪ್ರತ್ಯೇಕತೆಯ ಕಾರಣವಾಗಿತ್ತು. ದಾನದತ್ತಿಗಳನ್ನು ಹೊರಗಿರುವ ಹೊಲೆಯರೂ ಒಪ್ಪಬೇಕಾದ ಅನಿವಾರ್ಯತೆಯಿದ್ದುದರಿಂದ ಶಾಸನ "ಒಡಂಬಟ್ಟು'ದನ್ನು ಹೇಳುತ್ತದೆ. ಗ್ರಾಮೀಣ ಉತ್ಪಾದನಾ ಸಂಬಂಧದಲ್ಲಿ ದಲಿತರ ನಿರ್ದಿಷ್ಟ ಪಾತ್ರ ಇದ್ದೇ ಇತ್ತು.

**ಎಪಿಗ್ರಾಫಿಯಾ ಕರ್ನಾಟಿಕಾ – ಸಂಪುಟ ಒಂಬತ್ತು :**

ಬೇಲೂರಿನಲ್ಲಿ ಸಿಕ್ಕ ಒಂದು ತಾಮ್ರಪಟದಲ್ಲಿ (ಕ್ರಿ.ಶ. ೧೩೮೨ ಪು. ೧೪೦) ವಿಜಯನಗರ, ಹಸ್ತಿನಾವತಿ, ದೋರಸಮುದ್ರ, ಗುತ್ತಿ, ಪೆನುಗೊಂಡೆ, ಆದವಾನಿ ಮೊದಲಾದ ನಾನಾದೇಶ, ಪಟ್ಟಣಗಳ "ಸಂಥೆ ಶಾಸನ ಪೇಟೆ ಒಳಗಾದ ಸಮಸ್ತ ಹಳವು ನಖರ ಪರಿವಾರ ಮುಮ್ಮುರಿದಂಡಗಳು ಸಕಲ ಸ್ವಾಮ್ಯವಂತರು, ಅವರ ಕಾಲ್ಗಾಹೀನ ಬಿಲ್ಲಮೂಲೂರ್ಪಿಬ್ಬರು ಹೊಲಿಯ ಜಂಗುಲಿ ಸಹಿತ" ಹಂಪಿಯಲ್ಲಿ ಸೇರಿ ಮುದ್ದೆಯ ದಣ್ಣಾಯಕರನ್ನು ತಮ್ಮ ಆಚಾರ ವಿಚಾರಕ್ಕೆ ಕರ್ತರನ್ನಾಗಿ ಮಾಡಿ 'ಪೃಥ್ವಿಶೆಟ್ಟಿತನ'ವನ್ನು ಕೊಟ್ಟು ತಮ್ಮ ವಿವಿಧ ಆದಾಯದಲ್ಲಿ ಅಷ್ಟಿಷ್ಟು ಪಾಲನ್ನು ದಾನವಾಗಿ ನೀಡುತ್ತಾರೆಂದಿದೆ.

ಇದರ ವಿವರಗಳು ಸ್ವಾರಸ್ಯಕರವಾಗಿದ್ದು, ಗಮನಾರ್ಹ ಅಂಶಗಳೆಂದರೆ, "ಹೊಲೆಯ ಕುದುರೆ, ಖಡಿಲೆಯ ಕುದುರೆ ನಾಡಕುದುರೆಗೆ ಪ್ರತಿಗದ್ಯಾಣ ಒಂದಕ್ಕೆ ಬೇಳೆ", "ತೊತ್ತಿರಿಗೆ ಪ್ರತಿ ಗದ್ಯಾಣ ಒಂದಕ್ಕೆ ಬೇಳೆ", "ಹತ್ತು ಹೊನ್ನು ಮೊದಲಾಗಿ ನೂರುಹೊನ್ನು ಪರಿಯಂತರದ ಜೀವಿತಗಾರರಿಗೆ ಪ್ರತಿ ಜನ ಒಂದಕ್ಕೆ ಪಣ ಒಂದು, ನೂರು ಹೊನ್ನಿಂದ ಮೇಲಣ ಹೆಚ್ಚು ಜೀವಿತಗಾರರಿಗೆ ಪ್ರತಿ ಗದ್ಯಾಣ ನೂರಕ್ಕಂ ವರ್ಷ ಒಂದಕ್ಕೆ ಪಣ ಎರಡು" ಮೊದಲಾದವು.

೧. ವ್ಯಾಪಾರಸ್ಥರ ರಕ್ಷಣೆಗೆ ಇರುತ್ತಿದ್ದ ಕಾಲ್ಗಾಹಿನ ಬಿಲ್ಲುಗಾರರಲ್ಲಿ 'ಹೊಲೆಯ ಜಂಗುಳಿ' ಎಂಬ ಪ್ರತ್ಯೇಕ 'ಸೇನೆ' ಇರುತ್ತಿತ್ತು.
೨. ಕುದುರೆಗಳ ಪ್ರಕಾರಗಳಲ್ಲಿ 'ಹೊಲೆಯ ಕುದುರೆ' ಎಂಬ ಪ್ರಭೇದ.
೩. ತೊತ್ತಿರನ್ನು ಒಂಟೆ, ಆನೆ, ಕುದುರೆಗಳಂತೆ ಮಾರಾಟಮಾಡುತ್ತಿದ್ದರು.
೪. ಜೀವಿತಗಾರರಿಗೆ (ಜೀತಗಾರರು) ವರ್ಷಕ್ಕೆ ಹತ್ತು ಹೊನ್ನಿನಿಂದ ಮುಂದೆ ಸಂಬಳ ದರವಿರುತ್ತಿತ್ತು. ಅದೆಷ್ಟು ಸಂಬಳವಿರುತ್ತಿತ್ತೋ ಅಷ್ಟರ ಮೇಲೆ ಸುಂಕವೂ ಇರುತ್ತಿತ್ತು.

ಬೈರೇದೇವರಗುಡ್ಡದ ಕ್ರಿ.ಶ. ೧೨೩೩ರ ವೀರಗಲ್ಲಿನಲ್ಲಿ 'ಹೊಲತಿಯ ಕಲ್ಲಲಿ' ಕಾದು ಸತ್ತ ವೀರನ ಪ್ರಸ್ತಾಪವಿದೆ.

ಒಂದು ತಾಮ್ರ ಶಾಸನದಲ್ಲಿ (EC, XVI ತುಮಕೂರು ಜಿಲ್ಲೆ ಪು. ೩೬) ಸಾಕ್ಷಿಗಳಲ್ಲಿ "ಛಲವಾದಿಗಳು ಆಕೈಯವರು ಈ ಕೈಯವರು" ಪ್ರಸ್ತಾಪವಾಗಿದ್ದಾರೆ. "ಸಮಸ್ತ ಪಣಕಟ್ಟಿನವರ ವಪ್ಪಿತಾ" ಎಂದು ಈ ಶಾಸನದ ಕೊನೆಗಿರುವುದರಿಂದ ಎಡಗೈ ಬಲಗೈ ಜಾತಿಕುಲದವರ ಉಲ್ಲೇಖವಿದು. (ಇವರಲ್ಲಿ ಬರಿ ಹೊಲೆಯರು, ಮಾದಿಗರು ಅಷ್ಟೇ ಇರಲಿಲ್ಲ) ಮತ್ತೊಂದು ತಾಮ್ರ ಶಾಸನದಲ್ಲೂ "ಎಡಗೈ ಬಲಗೈಮನೆ" (ಅದೇ. ಪು. ೩೮) ಎಂಬ ಉಲ್ಲೇಖವಿದೆ.

**ಎಸ್. ಐ. ಐ VII :**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಅಳಿಯಸಂತಾನ ಪದ್ಧತಿಯ ಉಲ್ಲೇಖ ಆ ಭಾಗದ ಶಾಸನಗಳಲ್ಲಿ ಸಾಕಷ್ಟು ಲಭ್ಯ ಇವೆ. ಮಾತೃ ಪ್ರಧಾನ ಸಾಮಾಜಿಕ ಪದ್ಧತಿಯ ಪಳೆಯುಳಿಕೆಯಾದ ಇದು ಬರಿ ದಲಿತರಲ್ಲಿ ಅಲ್ಲ ಇತರ ಹಲವಾರು ಜಾತಿಗಳಲ್ಲಿರುವುದು, ಮಾತೃಮೂಲೀಯತೆಯ ಪ್ರಾಬಲ್ಯದಿಂದಾಗಿಯೇ.

ನಂ ೧೮೫ರ ಶಾಸನದಲ್ಲಿ (ಪು. ೮೧) ಮಾವ ಕುಲಶೇಖರದೇವರಸ ಮತ್ತು ಅಳಿಯ ಬಂಕಿದೇವರಸರು ಬಂಕೇಶ್ವರ ದೇವರಿಗೆ ಕೊಟ್ಟ ಕ್ರಮ ವಿವರವಿದೆ. ಪುಟ. ೯೨ರಲ್ಲಿ 'ಚೌಂಡಿಸೆಟ್ಟಿಯ ಅಳಿಯ ಚವುಟ ಕೋಟೇಶ್ವರ ಸೆಟ್ಟಿ' ಮೊದಲಾದ ಅನೇಕ ಅಳಿಯಂದಿರ ಹೆಸರಿವೆ. ಇಲ್ಲೇ ಕಾಂತು ಸೆಟ್ಟಿತಿ, ಮುದ್ದು ಸೆಟ್ಟಿತಿಯರಿಗೆ ಆಸ್ತಿಯಲ್ಲಿ ಭಾಗ ಹಂಚಿದ್ದೂ ಇದೆ. (ಎಸ್.ಐ.ಐ IX IIರಲ್ಲೂ ಸೆಟ್ಟಿತಿ, ನಾಯಕಿತಿಯರ ಭೂಮಿಗಳ ಪ್ರಸ್ತಾಪಗಳಿವೆ. ಪು. ೫೨೩, ೫೨೫, ೫೪೧)

"ಸೊಸೆ ಮುನಿಯಕ್ಕಗಳು ಕೊಟ್ಟ ವರಹ ೩೦" ಮತ್ತು ಅಳಿಯ ತಂಗಿಯರ ಹೆಸರು ಒಂದೆಡೆ ಇವೆ. (ಪು. ೯೪) ಅನೇಕ ಸೆಟ್ಟಿಗಳ, ಅಳಿಯಂದಿರ ಹೆಸರು ೧೦೧, ೧೦೫, ೧೧೨, ೧೩೩, ೨೩೮, ಮೊದಲಾದ ಪುಟಗಳಲ್ಲಿವೆ. (SII IX II ರ ಪು. ೪೭೬, ೪೮೧, ೪೭೮, ೫೨೭, ೫೨೪, ೪೭೭ ರಲ್ಲೂ ಇವೆ.) ಮಣಿಗಾರರ ಕೇರಿಯ ಕುಂಚದ ಸರಸುವ ಮಗಳು ಸಂಕುಬಾಲೆ ಆಕಿಯ ಮಗಳು ಸಂಕಮ ದೇವರಿಗೆ ದತ್ತಿ ಬಿಟ್ಟ ವಿಷಯವಿದೆ. ತಂಗಾಯಿತಿ ಸೆಟ್ಟಿತಿ (ಪು. ೨೩೫) ಹೆಗ್ಗಡಿತಿ (ಪು. ೨೩೬) ಸರಸು ಓಜತಿ (ಪು. ೨೨೧), ಹಿರಿಯಕ್ಕನ ಬಳಿ (ಪು. ೨೫೦), ಪಾಂಡ್ಯ ಮಹಾದೇವಿ (ಪು. ೨೩೨), ಊರ ಹನ್ನೆರಡು ಮಂದಿ ಜನನಿಗಳ ಒಪ್ಪ" (ಪು. ೧೯೦) ಇವೆಲ್ಲವೂ ಸಮಾಜದಲ್ಲಿದ್ದ ಸ್ತ್ರೀಯರ ಪ್ರಾಬಲ್ಯವನ್ನು ಸೂಚಿಸುತ್ತವೆ.

"ಹೊಲೆಯರ ಅಂಕಸೆಟ್ಟಿ" (ಪು. ೧೭೭) ಎಂಬುದು ತುಂಬ ಮುಖ್ಯವಾದ ಅಂಶ. ಇದು ಬಂಟ ಅಥವಾ ನಾಡವರ ಹೊಲೆಯರ ಬಳಿಯನ್ನು ಸೂಚಿಸುತ್ತಿರುವುದರಿಂದ ಸೆಟ್ಟಿ ಕುಲದ ಮೂಲ ದಲಿತವಾಗುತ್ತದೆ. ಬೇರೆಡೆ ಮತ್ತೆ ಉದಾಹರಣೆಗಳಿವೆ. (ಮುಂದೆ ನೋಡಿ) ಬಾಳದ ಕೂಡ (ಆಸ್ತಿ) "ಹೊಲೆಯಾಳುಗಳು" ಇರುತ್ತಿದ್ದುದನ್ನು (೨೨೧ ಪು) ನೋಡಬಹುದು. (SII IX II ಪು ೪೨೨ ಕೂಡ ನೋಡಿ) ನಿರ್ದಿಷ್ಟ ಭೂ ಆಸ್ತಿಯ ಜತೆ ಹೊಲೆಯರು, ಮಾದಿಗರು ಅಂಟಿಕೊಂಡಿರುತ್ತಿದ್ದು, ಆಸ್ತಿ ಮಾರಾಟವಾದಾಗ ದಲಿತರೂ ಕೊಂಡವರ 'ಮನೆಯ ಮಕ್ಕಳಾ'ಗುತ್ತಿದ್ದರು. ಈಚಿನವರೆಗೂ ನಡೆದು ಬಂದಿರುವ ಪದ್ಧತಿ ಇದು. ಇದು ಹಿಂದೊಮ್ಮೆ ಭೂಮಿ ದಲಿತರದ್ದೇ ಆಗಿತ್ತು ಎಂಬುದನ್ನು ನಿವೇದಿಸುತ್ತದೆ. ಹೀಗಲ್ಲದಿದ್ದರೆ ದಲಿತರು ಭೂಮಿಯ ಜೊತೆ ಇಷ್ಟು ಗಾಢವಾದ ಸಂಬಂಧವುಳ್ಳವರಾಗಿರಲಾರರು.

ಎಸ್. ಐ. ಐ IX-I :

ಬನ್ನಿಕಲ್ಲಿನ ಕ್ರಿ.ಶ. ೧೨೨೬ರ ಶಾಸನದಲ್ಲಿ (ಪು. ೩೬೫) ಭೂಮಿಯ ಗಡಿಮೇರೆ ಹೇಳುವಾಗ ಹೊಲಗೇರಿಯ ಪ್ರಸ್ತಾಪವಿದೆ.

ಕೋಗಳಿಯ ಕ್ರಿ.ಶ. ೧೦೫೫ ಶಾಸನದಲ್ಲಿ (ಪು. ೯೩) "ದೈವಕ್ಕೆ ಕಾಳುಕುರಿಯಿಕ್ಕಿದವರು 'ಪೊಲೆಯರು', ಅವರಿಗೆ ವೃತ್ತಿಯಣಂ ಆಗದು" ಎಂದಿದೆ. ವೃತ್ತಿ (ಖಾಸಗಿ ಆಸ್ತಿ)ಗೆ ಜೈನರನ್ನೇ ಅಧಿಕಾರಿಗಳನ್ನಾಗಿ ಮಾಡಬೇಕೆನ್ನುವಾಗ ಶಾಸನ ಈ ಮಾತು ಹೇಳಿದೆ.

ಬಾಗಳಿಯ ಕ್ರಿ.ಶ. ೧೦೫೫ರ (ಪು. ೧೨೮) ಶಾಸನದಲ್ಲಿ ಉಪ್ಪಾರ, ಬೋವ, ಬಡಗಿ, ಕಮ್ಮಾರರಿಗೆ ಹಾಕಿದ ಸುಂಕಗಳ ಪಟ್ಟಿಯಲ್ಲಿ "ಮಾದರ ಗದ್ಯಾಣ ೧" ಕೂಡ ಸೇರಿದೆ. ಉಳಿದವರಿಗೂ ಗದ್ಯಾಣ ೧ ಅಥವಾ ೨ ಮಾತ್ರ ಇದ್ದುದನ್ನು ನೋಡಿದರೆ, ಮಾದಿಗರನ್ನು ಇತರ ಕರಕುಶಲಿಗಳ ಜತೆ ಸಮಾನವಾಗಿ ಪರಿಗಣಿಸಲಾಗುತ್ತಿತ್ತು. ಮಾದಿಗರ ಆದಾಯದ ಮಿತಿಯನ್ನು ಈ ಸುಂಕದ ಹಣವೇ ಹೇಳುತ್ತದೆ.

ಪೆದ್ದ ತಂಬುಲಂನ ಕ್ರಿ.ಶ. ೧೧೦೬ರ ಶಾಸನ (ಪು. ೧೬೨) "ಮನೆದೆರೆ, ಹೊಲೆದೆರೆ, ಬಳಂಬೆಯ ತೆರೆ, ತಳ, ಸಾರಿಗೆ ಕಾಣಿಕೆ ಕವಣಾಯ ದಂಡಾಯ" ಮೊದಲಾಗಿ ಹೇಳಿದೆ. ಮಾದಿಗರಿಗೆ ಮಾದಾರಿಕೆಯಿದ್ದಂತೆ ಹೊಲೆಯರಿಗೆ 'ಹೊಲೆದೆರೆ' ಇತ್ತು.

ಪರೆಕಾರರು ಎಂದರೆ ಹಲಗೆಬಾರಿಸುವವರು, ದಲಿತರೇ. ದೇಗುಲದ ಸೇವಕರಾಗಿದ್ದ ಅವರಿಗೆ ಇತರರಂತೆ ಭೂಮಿದಾನ ಮಾಡಲಾಗುತ್ತಿತ್ತು. ಅವರೂ ಕರ ಕಂದಾಯಗಳನ್ನು ಕೊಡಬೇಕಿತ್ತು. ದೊಡ್ಡಿಮಕಾಳದ (ಕ್ರಿ.ಶ. ೯೩೧ ಪು. ೩೧) ಕಾಮೇಶ್ವರ ದೇಗುಲದ ಪರೆಕಾರರಿಗೆ ೧೧ ಮತ್ತರು ಎರೆಭೂಮಿ ದೊರಕಿತ್ತು. ಬಾಗಳಿಯ ಒಂದು ಶಾಸನದಲ್ಲಿ (ಕ್ರಿ.ಶ. ೧೦೧೮ ಪು. ೫೧) ದೇಗುಲದ ಸೂಳೆಯರು, ಸೂಳೆವಳರು, ವಂಚಿಗರ ಜತೆ 'ಪರೆಕಾರ'ರ ಹೆಸರಿದೆ. ಇವರೆಲ್ಲ ದತ್ತಿಯಲ್ಲಿ ಪಾಲು ಪಡೆದವರು. ತಲವಾಗಲು (ಕ್ರಿ.ಶ ೧೦೩೪ ಪು. ೫೮) ಭೋಗೇಶ್ವರ ದೇವರ ಪರೆಕಾರರಿಗೆ ಒಂದು ಮತ್ತರು ಗದ್ದೆ ಕಿಸುಗಾಡ ಮತ್ತರು ೮ ದಾನವಾಗಿ ದೊರಕಿತ್ತು. ಇವರ ಜತೆ ಹಾಡುವವರು, ಪೂಜಾರಿ, ಕಲುಕುಟಿಗರೂ ಸೇರಿದ್ದರು. ಹಿರೇಮೇಗಳಗೇರಿ (ಕ್ರಿ.ಶ. ೧೦೫೪ ಪು. ೮೮)ಯಲ್ಲಿ ಸ್ವಯಂಭು ದೇವರ ಪರೆಕಾರರಿಗೂ ಹೊಲಗದ್ದೆಯಲ್ಲಿ ಪಾಲಿತ್ತು. ಇಲ್ಲಿ ಕಂಬದ ನಾಲ್ವರು ಸೂಳೆಯರಿದ್ದರು. ಹೂವಿನ ಹಡಗಲಿಯ (ಕ್ರಿ.ಶ. ೧೦೭೧ ಪು. ೧೧೯) ಕಲಿದೇವಸ್ಥಾನದಲ್ಲಿ ಮಠವೂ ಇತ್ತು. ತಪೋಧನರು, ವಿದ್ಯಾರ್ಥಿಗಳು, ಪರೆಕಾರರು, ಪಾತ್ರ ಪಾಡುವವರಿಗೆ ದಾನವನ್ನು ತ್ರಿಭಾಗವಾಗಿ ಹಂಚಿತ್ತು. ಹೊಳಗುಂದಿಯ ೧೧೯೨ ಶಾಸನದಲ್ಲೂ (ಪು. ೧೫೪) ಪರೆಕಾರರಿಗೆ ೧೨ ಮತ್ತರು ಭೂಮಿ ಹೇಳಿದೆ.

ಕ್ರಿ.ಶ. ೧೨೯೨ರ ಬಾಗಳಿಯ ಶಾಸನ (ಪು. ೩೭೨) ವಿಶೇಷವಾಗಿದೆ. ಬಾಗಳಿಯ ನೀಲಗಿರಿಯ ನೀಲೇಶ್ವರ ದೇವರಿಗೆ ಮೊಗವಾಡ ಮಾಚರಸನ ಹರೆಕಾರ ಬೆಟಿಯನಾಯಕನ ಮಗ ಹೆಗ್ಗಡೆ ಚಂದಯ್ಯ ದೇವರ ಅಂಗರಂಗ ಭೋಗಕ್ಕೆ ಬೆಳ್ಳಿಯ ಕಟ್ಟದ ತನ್ನ ತೋಟಗಟ್ಟಿನ ೧೦೦ ಕಂಬ ಭೂಮಿಯನ್ನು ಬಾಗುಳಿಯ ಬ್ರಾಹ್ಮಣರಿಗೆ ಧಾರೆ ಎರದಿದ್ದಾನೆ.

'ಮಾಚರಸನ ಹರೆಕಾರ' ಎಂಬುದು ಮಾನ್ಯರೂ, ಸಾಮಂತರೂ ಸ್ವಂತ ಹರೆಕಾರರನ್ನು ನೇಮಿಸಿಕೊಳ್ಳುತ್ತಿದ್ದರೆಂದಾಗುತ್ತದೆ. ಇವರು ಅಕ್ಕಸಾಲಿಗ, ಬಡಿಗ, ಸೇನುಬೋವರನ್ನು ಖಾಸಗಿಯಾಗಿ ಇಟ್ಟುಕೊಳ್ಳುತ್ತಿದ್ದ ಬಗ್ಗೆ ಇತರತ್ರ ನಿದರ್ಶನಗಳಿವೆ. ಹರೆಕಾರನ ಮಗ ಚಂದಯ್ಯ ಹೆಗ್ಗಡೆಯಾಗಿದ್ದಾನೆ.

ಅಂದರೆ ಆರ್ಥಿಕವಾಗಿ ಇನ್ನೂ ಮೇಲೆ ಬಂದಿದ್ದಾನೆ. ಹರೆಕಾರರು ಬರಿ ಜಮೀನು ಪಡೆದವರಷ್ಟೇ ಆಗಿರಲಿಲ್ಲ. ಭೂಮಿದಾನವನ್ನೂ ನೀಡುತ್ತಿದ್ದರು. ಇಲ್ಲಿ ಲಕ್ಷಿಸಬೇಕಾದ ಸಂಗತಿಯೆಂದರೆ ದಲಿತನೊಬ್ಬ ಕೊಟ್ಟ ಭೂಮಿಯನ್ನು ಬ್ರಾಹ್ಮಣರು ಪಡೆದಿರುವುದು. ಬ್ರಾಹ್ಮಣರು ಯಾವ ಜಾತಿಕುಲದವರಿಂದಾದರೂ ಭೂಮಿಯನ್ನು ದಾನವಾಗಿ ಸ್ವೀಕರಿಸುತ್ತಿದ್ದರು. ಆದರೆ ತಾವು ಮಾತ್ರ ಬ್ರಾಹಣರಿಗಲ್ಲದೇ ಬೇರಾರಿಗೂ (ಆದಿ, ದಾನ, ಕ್ರಯ, ಪರಿವರ್ತನೆ ಎಂಬ ವ್ಯವಹಾರ ಚತುಷ್ಟಯ) ಕೊಡಬಾರದೆಂಬ ಕಾನೂನು ಮಾಡಿಕೊಂಡಿದ್ದರು. ಕೆಲವು ಶಾಸನಗಳು ಇದನ್ನು ಸ್ಪಷ್ಟವಾಗಿ ಹೇಳುತ್ತವೆ.

ಈ ಸಂದರ್ಭದಲ್ಲಿ ಡಾ. ಎಂ. ಚಿದಾನಂದಮೂರ್ತಿಗಳು ಹೇಳುವ ಮಾತು ಗಮನಿಸಿ: ಅಸ್ಪೃಶ್ಯರು "ದಾನಕೊಡುವಷ್ಟು ಶ್ರೀಮಂತರಲ್ಲ. ದಾನ ತೆಗೆದುಕೊಳ್ಳುವ ಅರ್ಹತೆ ಇಲ್ಲ. ಒಂದು ವೇಳೆ ಅವರು ದಾನಕೊಟ್ಟರೂ ಸ್ವೀಕರಿಸಲು ಯಾರು ತಾನೆ ಸಿದ್ಧರಾಗಿರುತ್ತಿದ್ದರು?" ಈ ಮಾತೂ ಸರಿಯಲ್ಲ ಎಂಬುದಕ್ಕೆ ಮೇಲಿನ ದಾಖಲೆ ಸಾಬೀತಾಗಿದೆ. ಅಲ್ಲದೆ ಚಿದಾನಂದಮೂರ್ತಿಗಳೇ ಸ್ವತಃ ಒಂದು ನಿದರ್ಶನ ನೀಡಿದ್ದಾರೆ. "ಒಂದೇ ಒಂದು ಶಾಸನದಲ್ಲಿ ಹೊಲೆಯನೊಬ್ಬ ದಾನಕೊಟ್ಟ ಸಂಗತಿಯಿದೆ" ಎನ್ನುತ್ತಾರೆ ಅವರು. ಈ ಮಾತೂ ತಪ್ಪು. ಅಲ್ಲದೆ ದಾನ ಕೊಟ್ಟವ ಹೊಲೆಯನೂ ಅಲ್ಲ ಮಾದಿಗ. ಅದು "ಮಾದಗದ ಕಮ್ಮಯ್ಯನ ಮಗಂ ನರಿವನ್ಮ ಗಾವುಂಡುಗೆಯ್ಯೆ ಆತನ ತಮ್ಮ ನಾಣ್ಣೆಯಂ ಗೋಸಾಸವಿವ್ದಿ ತಾಣಗುಂದೂರು ಮಹಾಜನಂ ಪರಸಿದರ್".

ಮಾದಿಗರ ನರಿವನ್ಮ ಗೌಡನಾಗಿದ್ದನೆಂಬ ಅಂಶ ತುಂಬ ಮುಖ್ಯವಾದುದು. ಆದರೆ ಚಿದಾನಂದಮೂರ್ತಿ ಹೇಳುವಂತೆ ಮಾದಗದ ಎಂಬ ಪದ 'ಮಾದಿಗ' ಕುಲವನ್ನು ಸೂಚಿಸುತ್ತಿರುವುದು ಅನುಮಾನಾಸ್ಪದ.

ಚಿದಾನಂದಮೂರ್ತಿ ಬರೆಯುತ್ತಾರೆ, "ದೇವಸ್ಥಾನವೊಂದು ನಿರ್ಮಾಣವಾದಾಗ ಅಷ್ಟೊಂದು ಶ್ರೀಮಂತರಲ್ಲದ ಜೇಡ, ಮೇದ, ಗಾಣಿಗ, ಕಲ್ಕುಟಿಗ, ತಂಬುಲಿಗ ಇತ್ಯಾದಿ ಜಾತಿಯವರು ದೇವಾಲಯಕ್ಕೆ ತಮ್ಮ ಜಾತಿಯ ಕಾಣಿಕೆಯನ್ನೋ ವರ್ಷದ ನಿಬಂಧನೆಯನ್ನೋ (ವರ್ಷಕ್ಕೆ ಇಷ್ಟು ಎಣ್ಣೆ, ಉತ್ಸವಕ್ಕೆ ಇಷ್ಟು ಎಲೆ ಇತ್ಯಾದಿ) ಕೊಡಲು ಮಾತು ಕೊಡುತ್ತಿದ್ದಂತೆ ಹೊಲೆಯರು ಏನು ಕೊಡಬಹುದಿತ್ತು?" (ಪೂರ್ವೋಕ್ತ ಗ್ರಂಥ ಪು. ೩೪) ಈ ಮಾತುಗಳೂ ತಪ್ಪು ಎಂಬುದನ್ನು ಈವರೆಗಿನ ನಮ್ಮ ದೀರ್ಘ ಚರ್ಚೆಯೆ ತೋರಿಸುತ್ತದೆ. "ಕೊಡಲು ಮಾತು ಕೊಡುವ" ಪ್ರಶ್ನೆಯೇ ಇರಲಿಲ್ಲ. ಊಳಿಗಮಾನ್ಯ ಪ್ರಭುತ್ವ ಬಲಾತ್ಕಾರವಾಗಿ ಈ ತೆರಿಗೆ, ಸುಂಕ, ಬಿಟ್ಟಿ ಇತ್ಯಾದಿಯನ್ನು ಶ್ರಮಿಕರಿಂದ ಮುಲಾಜಿಲ್ಲದೇ ಸುಲಿಯುತ್ತಿತ್ತು.

**ಎಸ್. ಐ. ಐ IX-II :**

ಕ್ರಿ.ಶ. ೧೫೬೨ರ ಕೋಟೇಶ್ವರದ ಶಾಸನದಲ್ಲಿ (ಪು. ೬೬೫) 'ಹೊಲೆಯರ ಬಳಿ'ಯ ಚಿತುಶೆಟ್ಟಿಯ ಪ್ರಸ್ತಾಪವಿದೆ. ಈ ಹಿಂದೆ (SII VII 177) ಹೊಲೆಯರ ಅಂಕಶೆಟ್ಟಿಯ ವಿಷಯ ಬಂದಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಶಾಸನಗಳಲ್ಲಿ ಬಳಿಗಳ ಸಹಿತ ವ್ಯಕ್ತಿಗಳನ್ನು ಹೆಸರಿಸುವ ಪದ್ಧತಿಯಿತ್ತು. ಹೀಗಾಗಿ ನಮಗೆ ದೊರಕುವ ಹಲವಾರು ಬಳಿಗಳು ಪ್ರಾಚ್ಯ ಕೌಟುಂಬಿಕ ರೂಪವನ್ನು ತಿಳಿಯಲು ನೆರವಾಗುವಂತಿವೆ. ಅವುಗಳಲ್ಲಿ. 'ಹೊಲೆಯರ ಬಳಿ'ಯಂತೂ ವಿಶೇಷವಾದುದು. ಹೊಲೆಯ ಸಮಾಜ ಘನವಾದುದಲ್ಲದೆ ಇದ್ದಿದ್ದರೆ ಅದು 'ಬಳಿ'ಯಾಗುವಷ್ಟು ಮಹತ್ವ ಪಡೆಯುತ್ತಿರಲಿಲ್ಲ. ಅಲ್ಲದೆ 'ಶೆಟ್ಟಿ'ಯರಿಗೆ (ಬಂಟ) ಈ ಬಳಿ ಅನ್ವಯಿಸುತ್ತಿದೆಯೆ ಹೊರತು ಸ್ವತಃ ಹೊಲೆಯರಿಗಲ್ಲ. ಈ ಶಾಸನ ಸಂಪುಟದಲ್ಲಿ ಕೊಂಗಬಳಿ, ತೊಳಹರ ಬಳಿ (೪೯೪, ಪು) ಗಂಗರ ಬಳಿ (ಪು. ೪೮೪) ಕಿಳಾಬಳಿ (೪೭೮) ಬಳ್ಳಾಬಳಿ (೪೭೬), ಅತಿಮುದ್ದನ ಬಳಿ, ಅನ್ಯಂಟರ ಬಳಿ (೪೫೯) ಅರಿಯಬಳಿ, ಗೊಂಜಡೆಯ ಬಳಿ (೪೩೧) ಉಡುವರ ಬಳಿ (೪೩೦) ಬಳಗಾರ ಬಳಿ (೪೩೧)ಗಳ ಉಲ್ಲೇಖಗಳಿವೆ.

'ಹೊಲೆಯರು' ಕರ್ನಾಟಕದ ಮೂಲನಿವಾಸಿಗಳು. ಹಾಗಾಗಿ ಕರಾವಳಿ ಭಾಗದಲ್ಲಿ 'ಹೊಲೆಯ' ಸಂಸ್ಕೃತಿ ವೈಶಿಷ್ಟ್ಯಗಳೇ ಕಾಣುತ್ತವೆ, ಮಾದಿಗ ಸಂಸ್ಕೃತಿಯಲ್ಲ. ಮಾದಿಗರು ಆಂಧ್ರದಿಂದ ಕರ್ನಾಟಕಕ್ಕೆ ವಲಸೆ ಬಂದಿರುವ ಸಾಧ್ಯತೆ ಇದೆ.

ಅಧಮನಕೊಟ್ಟೈನ ಶಾಸನದಲ್ಲಿ (ಕ್ರಿ.ಶ. ೧೫೩೦, ಎಸ್.ಐ.ಐ X, II. ಪು. ೫೪೭) "ಸುಂಕ ತಳವಾಱ, ಅನುಪು ಮಗಮೆ ಚಲವಾದಿ ಸಂಗೆಡಿ ಪಂತಗಾಱರಿಗೂ ಇದೇ ಭಾಷೆ" ಎಂಬ ವಾಕ್ಯವಿದ್ದು 'ಚಲವಾದಿ' ಪದವನ್ನು ಹೊಲೆಯರಿಗೆ ಪರ್ಯಾಯವಾಗಿ ಬಳಸಲಾಗಿದೆ. ಮಧ್ಯ ಕರ್ನಾಟಕದಲ್ಲಿ ಈ ಬಳಕೆಯಿದೆ. ಇಲ್ಲಿ ಇವರ ಮುಖ್ಯ ಉದ್ಯೋಗ 'ವಾದ್ಯಮೇಳ' ('ಪರಕಾರಿಕೆ') ಮಾಡುವುದು.

ಕುಂದಾಪುರದ ೧೪೭೨ ಇಸ್ವಿಯ ಶಾಸನದಲ್ಲಿ (ಪು. ೪೭೫) ಗಡಿಮೇರೆ ಹೇಳುವಾಗ 'ಚಮ್ಮಾರರ ಓಣಿ'ಯ ಹೆಸರಿದೆ. ೧೩೭೭ರ ಕೋಟೇಶ್ವರದ ಶಾಸನದಲ್ಲಿ (ಪು. ೪೭೭) ಸುಂಕ ಕಂದಾಯಗಳ ಪಟ್ಟಿಯಲ್ಲಿ "ಆ ಬಾಳಿಂಗೆ ಉಳ್ಳ ಹೊಲೆಯಾಳು ಹೆಂಣಾಳು ಗಂಡಾಳು ಕುಱುಟಗಳು ಸಹ ಜನ" ಎಂಬ ಮಾತಿದ್ದು ಖಾಸಗಿ ಆಸ್ತಿಯ ಜೊತೆ ಹೊಲೆಯಾಳುಗಳನ್ನು ಪರಿಗಣಿಸಲಾಗುತ್ತಿದ್ದು ಹೆಣ್ಣಾಳು ಗಂಡಾಳನ್ನು ಬೇರೆ ಬೇರೆ ಹೇಳಿದ್ದು ಗಮನಾರ್ಹ. ಇಲ್ಲಿಯೇ 'ಹೊಲೆಯರ...' ಎಂಬ ಪದವಿದ್ದು ಮುಂದೆ ಶಾಸನ ಒಡೆದಿರುವುದರಿಂದ ಬೇರೆನೂ ತಿಳಿಯದು.

**ಎಸ್. ಐ. ಐ XI-(I&II) :**

ದಾನದ ಮೇರೆಯಲ್ಲಿ 'ಚಾಂಡಾಲಾಲಯಂ' ಎಂಬ ಪದ ಗದಗ ಶಾಸನದಲ್ಲಿದೆ. (ಪು. ೨೫೭) ಕುರ್ತಕೋಟಿಯ ಕ್ರಿ.ಶ. ೧೦೮೭ರ ಶಾಸನ ತುಂಬ ವಿಶೇಷವಾಗಿದೆ. ಮೋರಿಯರ ಕುಲಕ್ಕೆ ಸೇರಿದ ನಾವಿದ, ದಾಸನು 'ದಾಸೇಶ್ವರ' ಗುಡಿಯನ್ನು ಕಟ್ಟಿಸಿ ದಾನದತ್ತಿ ಬಿಟ್ಟಿರುವ ವಿಷಯವಿದೆ. ಇತರರೂ ದಾನದತ್ತಿ ನೀಡಿದ್ದಾರೆ. ಈ ಶ್ರಮಿಕನ ಶಾಸನದಲ್ಲಿ ಸಾಮಾನ್ಯ ಶ್ರಮಿಕರ ಜಾತಿ ಸಹಿತ ಹೆಸರುಗಳು ಪ್ರಸ್ತಾಪವಾಗಿರುವುದು ಸಹಜವೆಂಬಂತಿವೆ. ಇವರಲ್ಲಿ ಗಂಗಾಧರ ಭಕ್ತನಾದ ಮಾಲರ ಕಲ್ಲನನ್ನು ಗೌರವದಿಂದ ಸ್ಮರಿಸಲಾಗಿದೆ. ಪಡವಳರ ಎರಯಮ್ಮ, ಗಡಿಯರ ಸಿಂಗ, ನಾಡ ಅಂಕಕಾರ ಬಾವ, ಬಾರಿಕ ಬೀಚ ಮೊದಲಾದ ಅನೇಕ ಸಾಮಾನ್ಯರ ಹೆಸರುಗಳು ಇಲ್ಲಿ ಬಂದಿವೆ. ತೆಲಗಿನ ಹೊಲೆಯರಿಗೆ 'ಮಾಲ'ರೆನ್ನುತ್ತಾರೆ. ಇಲ್ಲಿ ಉಲ್ಲೇಖಿತನಾದವ ತೆಲಗು ಹೊಲೆಯ ಕುಲದ ಕುಲ್ಲ. ೨೦೦ ಬ್ರಾಹ್ಮಣರ ಅಗ್ರಹಾರ ಕುರ್ತಕೋಟಿ. (ಕುರಿತಕೂಂಟೆ) ಅವರನ್ನು ಹೊಗಳುವ ಶಾಸನ ನಾವಿದ ದೋರ ಮತ್ತು ಅವನ ವಂಶದವರನ್ನು ವಿಶೇಷವಾಗಿ ಸ್ತುತಿಸುತ್ತದೆ. ಹನುಮಂತನಿಗೆ ಅವನನ್ನು (ದಾಸ) ಹೋಲಿಸಿರುವಲ್ಲಿ ಜಾತಿ ಶ್ರೇಣೀಕರಣದ ಕ್ಷುದ್ರತನವೇ ಕಾಣುತ್ತಿದೆ. ಈ ಶಾಸನ ರಚನೆ ಬ್ರಾಹ್ಮಣರದ್ದೆಂದು ಬೇರೆ ಹೇಳಬೇಕಿಲ್ಲ. ('ಕುಲಕರಣಿ ಮಾಬಳಾರ್ಯ ಬರೆದನು') ಆದರೂ ಶ್ರಮಿಕ ಜನಸಾಮಾನ್ಯರನ್ನು ವಿಶೇಷವಾಗಿ ಹೊಗಳುವ (ದೇಗುಲ, ದಾನ ಎಲ್ಲವೂ ದೊರಕಿರುವುದರಿಂದ) ಈ ಶಾಸನ ಅಪರೂಪದ ದಾಖಲೆ. ಮೋರಿಯರ ವಂಶದಂತೆ ಕೋಣೆಯ ವಂಶದ ಹೆಸರೂ ಶಾಸನದಲ್ಲಿದೆ.

ತುಂಬಿಗೆಯ ಕ್ರಿ.ಶ. ೧೦೮೬ರ ಶಾಸನದಲ್ಲಿ (ಪು. ೧೫೪) 'ಹೊಲೆ' ಎಂಬ ಪದವಿದ್ದು ಮುಂದಿನ ಭಾಗ ಒಡೆದಿದೆ. ಕೊಪ್ಪದ ೧೦೭೫ರ ಶಾಸನದಲ್ಲಿ ಇತರರ ಜತೆ ಪರೆಕಾರರಿಗೆ ೩೦ ಮತ್ತರು ಭೂಮಿ ನೀಡಿದ್ದೂ ಸೇರಿದೆ. (ಪು. ೧೧೬) ಕೊರ್ಲಹಳ್ಳಿಯ ೧೦೫೦ರ ಶಾಸನದಲ್ಲೂ (ಪು. ೮೩) ಹರೆಕಾರರಿಗೆ ೬ ಮತ್ತರು ಭೂಮಿ ಬಿಟ್ಟಿದ್ದಿದೆ.

ಹೊಸೂರು (ಕ್ರಿ.ಶ. ೧೦೨೮–ಪು. ೫೬) ಶಾಸನ ಮೊರಕ ಕುಲತಿಲಕ ಎರಕನ ಪುತ್ರ 'ಪೊಲೆಗ' ಬಸದಿ ಮಾಡಿಸಿದ ವಿಷಯವನ್ನು ಶಾಸನಸ್ಥಗೊಳಿಸಿದನೆಂದು ಹೇಳಿದೆ. ಮೇರೆಗಳಲ್ಲಿ "ಪೊಲೆಯಮ ತೋಟ"ವನ್ನು ಈ ಶಾಸನ ಹೆಸರಿಸಿದೆ. (ಪು. ೫೬) ಮೊರಕಕುಲದ ಆಯ್ಚಗೌಡ ತನ್ನ ಹೆಂಡತಿ ಕಂಚಿಕಬ್ಬೆಯ 'ಪರೋಕ್ಷ ವಿನಯ'ಕ್ಕೆ ಬಸದಿ ಮಾಡಿಸಿದ್ದಾನೆ.

ಕನ್ನಡನಾಡಿನ ಬಹಳಷ್ಟು ಶಾಸನಗಳಲ್ಲಿ ಜಾತಿಯ ಹೆಸರನ್ನಲ್ಲ ಕುಲಗಳ ಹೆಸರನ್ನು ಸೂಚಿಸಲಾಗಿದ್ದು ಈ ಹೆಸರುಗಳು ಪ್ರಸಿದ್ಧವಾಗಿರುವ 'ಜಾತಿ' ಪಟ್ಟಿಯಲ್ಲಿ ಸೇರಲಾರವು. ಇದು ನಮ್ಮ ನಾಡಿನಲ್ಲಿ ಜಾತಿವ್ಯವಸ್ಥೆಯಲ್ಲ ಕುಲಪದ್ಧತಿ ಹೆಚ್ಚು ಪ್ರಬಲವಾಗಿತ್ತೆಂಬುದನ್ನು ಸೂಚಿಸುವುದು. ಶಾಸನಗಳಲ್ಲಿ ಉಕ್ತವಾಗಿರುವ 'ಕುಲ'ಗಳ ಬಗೆಗೇ ಬೇರೆ ಅಧ್ಯಯನವಾಗಬೇಕಿದೆ. ಈ ಶಾಸನದಲ್ಲಿ ಸಿಂದಕುಲ, ಮೊರಕ ಕುಲಗಳನ್ನು ಹೇಳಿದೆ. ಹಿಂದೆ ಮೋರಿಯರ ಕುಲದ ವಿಷಯ ಬಂದಿತ್ತು. ಒಂದೆಡೆ ಕುನ್ನಲ ವಂಶ (SI I XV ಪು. ೫೨), ಹಟ್ಟಗಾರ ಕುಲ (ಇದೇ ಪು–೭, ೨೯, ೧೬೧) ಹಟ್ಟಿಗಾರಕುಲ (ಅದೇ ಪು. ೨೮)ಗಳ ಪ್ರಸ್ತಾಪಗಳಿವೆ.

ಎಲೆಶಿರೂರ ಶಾಸನದಲ್ಲಿ (ಕ್ರಿ.ಶ. ೧೧೩೮) ಹೊಲಗೇರಿಯ ಹೆಸರಿದೆ. (ಪು. ೩೮)

ಕ್ರಿ.ಶ. ೮೬೫ರ ಮೇವುಂಡಿ ಶಾಸನದಲ್ಲಿ "ಪುಲಿಗೆರೆಯಿಂ ಬಂದ ಪೊಲೆಯಣ್ಣನ ಶಿಲಾಕರ್ಮ" ಎಂದಿದೆ. 'ಪೊಲೆಯ' ಪದದಿಂದ ಹುಟ್ಟಿದ 'ಪೊಲೆಯಣ್ಣ', ಹೊಲೆಯರಲ್ಲದ ಜಾತಿಯವರಿಗೂ

ಅಂಕಿತವಾಗುತ್ತಿತ್ತು. ೮೬೫ರಷ್ಟು ಹಿಂದಿನ ದಾಖಲೆಯಿದು. ನಾಮ ಊಹಿಸಿರುವಂತೆ, ಕುಶಲಕರ್ಮಿಗಳು ದಲಿತಮೂಲದವರು ಎನ್ನುವುದಕ್ಕೆ ಇಲ್ಲಿ ಸಾಕ್ಷಿ ಇದೆ. ಇದನ್ನು ನೋಡಿದರೆ 'ಹೊಲೆಯ' ಪದಕ್ಕೆ ಪರಂಪರೆಯಿಂದ ಹೇಳುತ್ತ ಬಂದ 'ಹೊಲಸು' ಎಂಬ ಅರ್ಥ ಅರ್ಥಹೀನ. ಹುಲುಸು, ಸಮೃದ್ಧಿ ಎಂಬರ್ಥದ 'ಪೊಲಿ 'ಯಿಂದಲೇ ಈ ಪದ ಬಂದಿದೆ. 'ಮಾದಿಗ'ದಿಂದ ಹುಟ್ಟಿದ ಅಸಂಖ್ಯ ಹೆಸರುಗಳು ಶಾಸನಗಳಲ್ಲಿವೆ. ಇದರ ಬಗ್ಗೆ ನಂತರ ಪ್ರಸ್ತಾಪ ಬರಲಿದೆ. ಸಧ್ಯಕ್ಕೆ ೮೩೭ರ ಕೆಸರಬಾವಿಯ ಶಾಸನದ 'ಮಾದರ', 'ಮಾದಿಗಾಮುಂಡ', ಮಾದರಸಗಳನ್ನು ಗಮನಿಸಬಹುದು. ನಾಡಿನ ತುಂಬ ಅಲ್ಲಲ್ಲಿ ಕಂಡು ಬರುವ 'ಮಾದೇನಳ್ಳಿ' – ಮಾದಿಗನಹಳ್ಳಿಯೇ. ಈ ಊಹೆಗೆ ಆಧಾರವಿದೆ. (ಮುಂದೆ ನೋಡಿ) ಹೂವಿನ ಹಿಪ್ಪರಿಗೆಯ ಕ್ರಿ.ಶ. ೮೬೨ರ ಶಾಸನದಲ್ಲಿ (ಪು. ೬) 'ಪೊಲೆ ಮೇರೆ' ಎಂಬ ಪದವನ್ನು ಇಲ್ಲಿಯೇ ಗಮನಿಸಬೇಕು. ಇಲ್ಲಿ ಹೊಲವನ್ನು 'ಪೊಲೆ' ಎನ್ನಲಾಗಿದೆ. ಈ ಶಾಸನದಲ್ಲಿ ಅಕ್ಷರದೋಷಗಳು ತೀರ ಕಡಿಮೆ. ಹಾಗಾಗಿ 'ಪೊಲೆ' ಎಂಬ ಬಳಕೆ ಹೊಲೆಯರಿಗೆ ಹೊಲದ ಸಂಬಂಧವಿದ್ದುದನ್ನು ಖಚಿತಗೊಳಿಸುವುದು.

ಎಸ್. ಐ. ಐ XV :

೧೧೮೯ರ ಹೊಂಬಳದಲ್ಲಿ (ಪು. ೧೦೩) "ಪೊಲೆಯಮಗೆಜೆ" ಬಳಕೆಯಲ್ಲಿತ್ತು. ಪೊಲೆಗೆರೆಯನ್ನೇ ಹೀಗೆ ಇಲ್ಲಿ ಹೇಳಲಾಗುತ್ತಿದೆಯೋ? ಮೆರೆ ಹೇಳುವಾಗ ಇದು ಬಂದಿದೆ. ಇದು ವಿಶೇಷ ಪ್ರಯೋಗ. 'ಹೊಲಿ ಬನ' (೧೨೦೩ ಮನಗುಂಡಿ ಶಾಸನ ಪು. ೨೮೭) 'ಪೊಲೆಯಚ್ಚಿ' (೮ನೇ ಶ. ಪಟ್ಟದಕಲ್ಲು ಶಾಸನ ಪು. ೩೪೦); ಹೊಲದಾನ ಮಾಡಿದ 'ಪೊಲೆಯಣಯ್ಯ' (ಕ್ರಿ.ಶ. ೧೨ನೇ ಶ. ಎರನಾಳ ಪು. ೩೯೧); ಮಹಾಮಂಡಳೇಶ್ವರ 'ಹೊಲ್ಲರಸರು' (ಕ್ರಿ.ಶ. ೧೧೪೫ ಚಿಕ್ಕ ವಡವಟ್ಟಿ. ಪು. ೩೨); 'ಹೊಲ್ಲಗಾವುಂಡ' (ಕ್ರಿ.ಶ. ೧೧೪೮ ಹೊಸೂರು ಪು. ೪೪, ೪೫, ೪೬); 'ಹೊಲ್ಲಿಗಾವುಂಡ' (ಕ್ರಿ.ಶ. ೧೧೦೬ ನೀಲಗುಂದ. ಪು. ೧೧೦) ಇವೆಲ್ಲವೂ ಗೌರವಾನ್ವಿತ ವ್ಯಕ್ತಿಗಳ ಹೆಸರುಗಳಾಗಿವೆ. ಇಲ್ಲೆಲ್ಲ 'ಹೊಲೆಯ' ಆಶಯವೇ ಮೂಲವಾಗಿದೆ.

"ಹೊಲೆಗೆರೆ ಮಾಡು", "ಹೊಲೆಗೆರೆ ಎಂದು ಬಿಡು" ಎಂಬ ಮಾತುಗಳು ವಿಶೇಷ ಉಲ್ಲೇಖಾರ್ಹವಾಗಿವೆ. ಸಧ್ಯಕ್ಕೆ ಮೂರು ಶಾಸನಗಳಲ್ಲಿ ಈ ಪದ ಸಮುಚ್ಚಯ ದೊರೆತಿದೆ. ೧೨ನೇ ಶತಮಾನದ 'ಕೊಣ್ಣೂರು' ವೀರಗಲ್ಲಿನಲ್ಲಿ "ಆಚಂದ್ರಾರ್ಕಸ್ಥಾಯಿಯಾಗಿ ಕೊಟ್ಟ ಹೊಲೆಗೆಜೆಯೆಂದು ಬಿಟ್ಟ..." ಎಂಬ ಮಾತಿದೆ. (ಪು. ೩೮೨) ೧೨ನೇ ಶತಮಾನದ ಚಟ್ಟರಕಿ ಶಾಸನ (SII XX ಪು. ೧೧೬) ಅಪೂರ್ವವಾದುದು. ಮಹಾಮಂಡಲೇಶ್ವರ ಗೋವಣರಸ ತನ್ನ ದಾಯದಿಗಳಿಂದ ರಕ್ಷಣೆ ಪಡೆಯಲು ಚೆಟ್ಟರುಗೆ ಅಗ್ರಹಾರದ ಆಶ್ರಯ ಪಡೆಯುತ್ತಾನೆ. ಪ್ರಾಣ ರಕ್ಷಣೆ ಮಾಡಿದ ಬ್ರಾಹ್ಮಣರಿಗೆ ತಮ್ಮ ಸೆಳೆರ ಕುಲದ ಮನೆಯ ಸಂತವಣ, ಆಯದಾಯ ಕಾಣಿಕೆ, ಹೊಲದೆರೆ, ಕುರಿದೆರೆ ಸಮಸ್ತ ಕೊಳ್ಳಿ ಇನ್ನೂ ಹುಟ್ಟುವ ಸಂತವಣ ಇಂತಿನಿತು ಸಮಸ್ತ ಆದಾಯವು "ಹುಗದಂತಾಗಿ ಹೊಲೆಗೆಜೆ ಮಾಡಿ" ಸರ್ವನಮಸ್ಯಮಾಗಿ ಧಾರಾಪೂರ್ವಕ ಬಿಡುವನು. ರಾಜನಿಗೆ ಬ್ರಾಹ್ಮಣರು ಕೊಡಬೇಕಿದ್ದ ಮೇಲೆ ಹೇಳಿದ ಕರಗಳನ್ನು ಗೋವಣರಸ ಹೊಲೆಗೆರೆಗೆ ಯಾರೂ ಹೇಗೆ ಹೊಗಲಾರರೊ ಹಾಗೆ ಬಿಟ್ಟನಂತೆ. ಈ ಕರಗಳೆಲ್ಲ ಅವನಿಗೆ ಅಸ್ಪೃಶ್ಯವಾದವು ಎಂದರ್ಥ. ಆದರೆ 'ತರ್ದವಾಡಿ ನಾಡು' ಒಂದು ಅಧ್ಯಯನ ಎಂಬ ತಮ್ಮ ಮಹಾಪ್ರಬಂಧದಲ್ಲಿ ಡಾ.ಎಸ್.ಕೆ. ಕೊಪ್ಪಾ ಅವರು ಇದಕ್ಕೆ "ಊರ ಹೊರಗೆ ಹೊಲಗೇರಿ ಸ್ಥಾಪಿಸುವ ಅಪೂರ್ವ ಉಲ್ಲೇಖ"ವೆಂದೂ, "ಬಹುಶಃ ಊರ ರಕ್ಷಣೆಯ ಮೊದಲ ಕೆಲಸ ಈ ಹೊಲೆಯರನ್ನೇ ಕೂಡಿತ್ತೆಂದು ತೋರುತ್ತದೆ", ಮುಂತಾಗಿ ಅರ್ಥ ಹೇಳುತ್ತಾರೆ. ಇದು ಸರಿಯಲ್ಲ. ೧೦೪೫ರ ಹಾವಿನಹಾಳು ವೀರಾಪುರದ ಶಾಸನದಲ್ಲಿ (SII IX – I ಪು. ೭೦) ಉದಯಾದಿತ್ಯ ಸಿಂದರಸರು ದೊಂಡವಟ್ಟಿ ಊರ ಒಡೆಯ ಪಾಲಿಮಯ್ಯ ಮನ್ನೆಯ ಸಾಮ್ಯದ ತೆರೆ ಎಲ್ಲ ಬಿಟ್ಟು ಮನ್ನೆಯನ್ನು ಸರ್ವನಮಸ್ಯವಾಗಿ ಧಾರಾಪೂರ್ವಕ ಮಾಡಿ ಆ ಚಂದ್ರಾರ್ಕತಾರಂಬರಂ "ಸಿನ್ದರ ಹೊಲೆಗೆ ಜೆಯೆನ್ದು ಬಿಟ್ಟು" ಕೊಡುತ್ತಾರೆ. 'ಸಿಂದರ ಹೊಲೆಗೆರೆ' ಎಂದರೇನು? ಸಿಂದರಿಗೂ ಹೊಲೆಯರಿಗೂ ಏನು ಸಂಬಂಧ? ಕುರುಗೋಡಿನ ಸಿಂದಕುಲದ ಅರಸರು ಸಿಂದ್ ಮಾದಿಗರೇ? ಮೇಲೆ ಹೇಳಿದ ಅರ್ಥವೇ ಇಲ್ಲಿಯೂ ಅನ್ವಯವಾಗುತ್ತದೆ. 'ಸಿಂದ್' ತೆಲುಗಿನ 'ಚಿಂದ್'ಕ್ಕೆ ಸಂವಾದಿ. ಚಿಂದ್ ಎಂದರೆ 'ನಾಟ್ಯ'. ಮಾದಿಗರ ಬಳಿ ಯಾಚಿಸುವ ಒಂದು ಕುಲ ಸಿಂದ್ ಮಾದಿಗರದು. (ಕೆ. ರಾಮಯ್ಯ.)

ತ್ರಿಕೂಟಾಚಲದ ದೇವರಿಗೆ ಬಿಟ್ಟ ತೆರಿಗೆಗಳನ್ನು ಹೇಳುವಾಗ "ಕುಜಿಬಗಾವುಂಡುಗಳುಂ, ಬೇಡರುಂ ಹುಲಿಯ ಜಂಗುಳಿಯನಾಮಿಕರು ಮಾದೆಗರು ಸಹಿತ ಜಾತಿವರ್ಗ್ಗದಲು ಹೊಸತಿಲಲು ಬಿಟ್ಟ ಹಾಗವೊಂದು" ಎಂದು ಬರುತ್ತದೆ. (೧೧೮೪ರ ಮಿಣಜಗಿ ಶಾಸನ ಪು. ೮೧) 'ಹುಲಿಯ ಜಂಗುಳಿಯ ಅನಾಮಿಕರು' ಎಂಬುದು ಹೊಲೆಯ ಸೈನಿಕರನ್ನು ಹೇಳುತ್ತಿರುವಂತಿದೆ. (ಈ ಹಿಂದೆ ಕಾಣಿಸಿರುವ

ಬೇಲೂರಿನ (Ec 9) ತಾಮ್ರ ಪಟದ 'ಹೊಲೆಯ ಜಂಗುಲಿ' ಎಂಬ ಮಾತು ಇಲ್ಲಿ ನೆನಪಾಗುತ್ತದೆ) ಹುಲಿಯಂತೆ ಶೂರರಾದ ಅನಾಮಿಕರು ಇವರು. ಇವರ ಜತೆಗೆ ಮಾದಿಗರೂ ಹೆಸರಿಸಲ್ಪಟ್ಟಿದ್ದಾರೆ. ಕುರುಬರು, ಬೇಡರು, ಹೊಲೆಯರು, ಮಾದಿಗರು ತಮ್ಮ ತಮ್ಮ ಮನೆಯ ಹೊಸ್ತಿಲಲ್ಲಿ 'ಕರ'ದ ಹಣವನ್ನು (ಹಾಗ) ಇಡುತ್ತಿದ್ದರೆಂದು ಕಾಣುತ್ತದೆ. ಅದನ್ನು ಆಡಳಿತಗಾರರು ಸಂಗ್ರಹಿಸಿಕೊಳ್ಳುತ್ತಿದ್ದರು. ಅಥವಾ ಈ ಜಾತಿಗಳಲ್ಲಿ 'ಹೊಸ್ತಿಲು ಮನೆ' ಇರುವ, ಇದ್ದುದರಲ್ಲೇ 'ಇದ್ದುಳ್ಳವರು' ಈ ಕರ ಕೊಡುತ್ತಿದ್ದಿರಬೇಕು. ಅರಸೀಬೀಡಿಯ (೧೧೬೭ ಕ್ರಿ.ಶ. ಪು. ೧೩೮) "ಹೊಸತಿಲು ಹಣ"ವೂ (ಇಲ್ಲಿಯೇ 'ಹೊಲರಸನ' ಹೆಸರಿದೆ) ಇದನ್ನೇ ಸೂಚಿಸುತ್ತದೆ. ಈ ಸಂಪುಟದಲ್ಲಿ ಚಾಂಡಾಲ (ಚಾಂಡಾಳ) ಎರಡು ಸಲ ಬಂದಿದೆ (ಪು ೮೨, ೩೯೭) ಎರಡೂ ಶಾಪವಾಕ್ಯಗಳಲ್ಲಿ.

**ಎಸ್. ಐ. ಐ. ಐ XX :**

ರಾಜಪೂಜಿತ ಕಾಳಿಗನನ್ನು ವರ್ಣಿಸುವಾಗ "ವಿಭುಮಾದಿಗಂ" (ಅರಸನಾದ ಮಾದಿಗನು) ಎಂದು ಕ್ರಿ.ಶ. ೧೦೪೪ರ ಆಡೂರು ಶಾಸನದ ಮಾತು. (ಪು. ೩೩) ೧೨ನೇ ಶತಮಾನದ ಕಾಮಧೇನು (ಕಲಘಟಗಿ ತಾ) ಶಾಸನ "ಮಂಡಳಿಕ ಮಾದಿಗ"ನನ್ನು ಹೆಸರಿಸುತ್ತದೆ. (ಪು. ೩೫೦) ಮಾದರಸ, ಮಾದಿಗೌಡ, ಮಾದೇಶ್ವರ ಮೊದಲಾದ ಹೆಸರುಗಳಂತೆ 'ಮಾದಿಗ' ಎಂಬ ಹೆಸರು ಈ ಎರಡೂ ಶಾಸನಗಳಲ್ಲಿ ಬಂದಿದೆ. ಜಾತಿ ಸೂಚಕವಾಗಿ 'ಮಾದೆಗ'ದಂತೆ 'ಮಾದಿಗ', ಮಾದಗ' ಪದಗಳು ಬಳಕೆಯಾಗಿವೆ. ಹೀಗಿರುವಾಗ 'ಮಾದ' ಮೂಲದ ಅಂಕಿತನಾಮಗಳೆಲ್ಲ 'ಮಾದಿಗ'ದಿಂದ ಹುಟ್ಟಿದ್ದರೆ ಅಚ್ಚರಿ ಪಡಬೇಕಿಲ್ಲ. ಇಂಥ ಪದಗಳಂತೂ ಕನ್ನಡ ಶಾಸನ ಪ್ರಪಂಚದಲ್ಲಿ ಕೈಯಿಟ್ಟಲ್ಲಿ ಸಿಗುತ್ತವೆ. ನಂತರ ಇವುಗಳ ಪಟ್ಟಿ ಕೊಡಲಾಗುವುದು.

ಕುದುರೆ ಮಾರಿದವನಿಗೆ ಮತ್ತು ಕೊಂಡವನಿಗಿಬ್ಬರಿಗೂ ಸುಂಕ ಹಾಕುತ್ತಿದ್ದರು. ಅದೇ ರೀತಿ ಕುರುಬರ ಕಂಬಳಿಗೆ ಒಂದು, 'ಮಾದರು ಮಿಳ...'ಕ್ಕೆ ಸುಂಕವೆಂದು ಒಂದು ಶಾಸನ ಹೇಳುತ್ತದೆ. (ನಿಂಬಾಳ ೧೨ನೇ ಶ. ಪು. ೩೬೧) ಶಾಸನ ತ್ರುಟಿತವಿರುವುದರಿಂದ ಎಷ್ಟು ಸುಂಕವೆಂದು ತಿಳಿಯದು. ಆದರೆ ಕುರುಬರ ಕಂಬಳಿಗೆ ಹಾಕಿದಂತೆ ಮಾದರ ಮಿಣಿ ಮೊದಲಾದುವಕ್ಕೆ ಸುಂಕವಿರುತ್ತಿತ್ತು.

ಲಕ್ಷ್ಮೇಶ್ವರದ ೧೫ನೇ ಶತಮಾನದ ಒಂದು ಶಾಸನದ ಕೊನೆ ಭಾಗ ಮಾತ್ರ ಉಳಿದಿದ್ದು ಶಾಸನ ಕೆಡಿಸಿದವರ ಬಗ್ಗೆ ಹೇಳುವಾಗ, ಮುಸಲ್ಮಾನ, ಶೂದ್ರ, ಶಿವಭಕ್ತ, ಜೈನ, ಕುರುಬ, ಬೇಡ, ಮುಷ್ಟಿಗ ಜಾತಿಗಳ ಜತೆ 'ಹೊಲೆಯ ಮಾದಿಗ'ರನ್ನು ಸೇರಿಸಲಾಗಿದೆ. (ಪು. ೩೭೯) ಹೊಲೆಯ ಮಾದಿಗ, ಶಿವಭಕ್ತ, ಜೈನ, ಕುರುಬ, ಬೇಡ, ಮುಷ್ಟಿಗರನ್ನು ಶೂದ್ರರಲ್ಲಿ ಸೇರಿಸದೆ ಪ್ರತ್ಯೇಕವಾಗಿ ಹೇಳಲಾಗಿದೆ. ಇಲ್ಲಿ ಶೂದ್ರರೆಂದರೆ ಯಾವ ಜಾತಿಯವರೊ?

ಸ್ವಯಂಭು ಸೋಮನಾಥ ದೇವರ ಅಂಗರಂಗಭೋಗಕ್ಕೆ ಬಿಟ್ಟ ಧರ್ಮಗಳ ಪಟ್ಟಿಯಲ್ಲಿ 'ಸಮಗಾರದೆಡ ಹೊಲೆಯ'ರೂ ಇದ್ದಾರೆ. "ಅಂಗಡಿ ಗಾಣ ಹೆಡಗೆಯಲೆಂಣ್ಣೆ, ಉಪ್ಪ ಮಾರುವವರು ಎತ್ತಿನಲು ಹೇಱುವ ಸೆಟ್ಟಿಗಳೆ ಎಲೆಯ ಹೇಱಿಂಗೆ ನೂಱೆಲೆ, ಬಡಗಿ ಕಮ್ಮಾಱ ಅಕ್ಕಸಾಲೆ ಅಗಸ ಸಂಮ್ಮಗಾಱದೆಡೆ ಹೊಲೆಯರ ಕೊಡೆ ವೊಳವಾಗಿ ಪುರದ ಬೀರವಣಮಂ ಬಿಟ್ಟರು". (ಪು. ೩೩೪) (೧೨ನೇ.ಶ. ಕಡ್ಲೇವಾಡ) ಬಡಗಿ, ಕಮ್ಮಾರ, ಅಕ್ಕಸಾಲೆ, ಅಗಸರ ಜತೆ ಸಮಗಾರ ಮತ್ತು ಎಡಹೊಲೆಯರೂ ಸುಂಕವಾಗಿ 'ಬೀರವಣ'ವನ್ನು ಕೊಡಬೇಕಿತ್ತು. ಸಮಗಾರ ಮತ್ತು ಎಡಹೊಲೆಯರನ್ನು ಇಲ್ಲಿ ಪ್ರತ್ಯೇಕವಾಗಿ ಹೇಳಿದೆ. ಬಹುಶಃ ಮಾದಿಗರನ್ನೇ ಇಲ್ಲಿ ಎಡಹೊಲೆಯರೆಂದು ಹೇಳುತ್ತಿರಬೇಕು. ಹೊಲೆಯರು ಮಾತ್ರ ಪರಿಚಿತವಿದ್ದ ಕರ್ನಾಟಕದ ಈ ಭಾಗಕ್ಕೆ ಆಂಧ್ರದಿಂದ ಬಂದ ಮಾದಿಗರು ಎಡಹೊಲೆಯರಾಗಿ ಕಂಡಿರುವಂತಿದೆ. ಕರ್ನಾಟಕದ ಹೊಲೆಯರು ಇವರ ಪ್ರಕಾರ 'ಬಲ ಹೊಲೆಯರು'. ಬಲಗೈ–ಎಡಗೈ ಗುಂಪುಗಳಲ್ಲಿ ಮಾದಿಗರನ್ನು ಎಡಗೈನವರೆಂದು ಈಗಲೂ ಹೇಳುವುದಿದೆ.

ಗ್ರಾಮಗಳ ಕರಕುಶಲಕರ್ಮಿಗಳಲ್ಲಿ ಹೊಲೆಯರು ಮಾದಿಗರು ಸೇರಿದ್ದರು. ಇತರೆಲ್ಲ ಕರಕುಶಲಿಗಳಂತೆ ಹೊಲೆಯ ಮಾದಿರನ್ನೂ 'ಕಾಣಲಾಗುತ್ತಿತ್ತು'. ಇತರರೆಲ್ಲರಂತೆ ದಲಿತರೂ ನಾನಾ ಬಗೆಯ ಕರಕಂದಾಯ ಸುಂಕ ನೀಡುತ್ತಿದ್ದರು. ಈ ದೃಷ್ಟಿಯಿಂದ ಇವರು ಎಂ.ಚಿದಾನಂದಮೂರ್ತಿಗಳು ಹೇಳುವಂತ 'ಅಸ್ಪೃಶ್ಯ'ರೇನಾಗಿರಲಿಲ್ಲ.

ಮದಬಾವಿಯಲ್ಲೂ (೧೧೯೦ ಕ್ರಿ.ಶ. ಪು. ೨೨೨) ಸುಂಕಕಾರರ ಹೆಸರುಗಳಲ್ಲಿ 'ಸಂಮಗಾಱ'ರ ಹೆಸರಿದೆ. ಶಾಸನ ಒಡೆದಿರುವುದರಿಂದ ವಿವರ ತಿಳಿಯದು. ಆದರೆ ೧೧೯೨ರ ಹಿಪ್ಪರಗಿ ಶಾಸನದಲ್ಲಿ (ಪು. ೨೨೫) ಕರಕುಶಲವರ್ಗದಲ್ಲಿ ಸಮಗಾರರನ್ನು 'ಸಮಾನವಾಗಿ' ಸ್ಮರಿಸಲಾಗಿದೆ. "ಗಾಣವೆರಡು ನಮಸ್ಯ ಬಡಗಿ ೧ ಕಂಮಾಱ ೧ ಸಂಮಗಾಱ ೧ ಅಸಗ ೧ ದೇಡಮಗ್ಗ... ಇಂತಿನಿತರ ಬಣ್ಣಿಗೆ ಸುಂಕ". ಇವೆಲ್ಲ ದೇವರ ಅಂಗರಂಗಭೋಗಕ್ಕೆ ಸಲ್ಲುತ್ತಿದ್ದವು. ಹಿಂದಿನ ಶಾಸನದಲ್ಲಿ ಕರಕುಶಲಿಗಳು ನೀಡುವ ಸುಂಕಕ್ಕೆ 'ಬೀರವಣ' ಎಂದಿದ್ದರೆ ಇಲ್ಲಿ 'ಬಣ್ಣಿಗೆ ಸುಂಕ' ಎನ್ನಲಾಗಿದೆ. ಸಮಗಾರರನ್ನು ಕರಕುಶಲಿಗಳ ಪಟ್ಟಿಯ ಕೊನೆಗಲ್ಲ ಮಧ್ಯದಲ್ಲೇ ಸೇರಿಸಿರುವುದನ್ನು ಇಲ್ಲಿ ಗಮನಿಸಬಹುದು. ಇತರರಂತೆ ಸುಂಕ ಪ್ರಮಾಣ '೧'; ಕಡಿಮೆಯಿಲ್ಲ. ಬಹುಶಃ ಸಾಮಾಜಿಕ ಅಸಮಾನತೆ ಅಸ್ಪೃಶ್ಯತೆ ಇದ್ದರೂ ಆರ್ಥಿಕವಾಗಿ ಕರಕುಶಲಿಗಳೆಲ್ಲ ಒಂದೇ ವರ್ಗವಾಗಿದ್ದರು.

ಲಕ್ಷ್ಮೇಶ್ವರದ ೯೬೮ರ ಸಂಸ್ಕೃತ ಶಾಸನದಲ್ಲಿ (ಪು. ೨೯೭) "ಪೂರ್ವತಃ ಬಳಬೇಶ್ವರ ಪಶ್ಚಿಮ ಪ್ರಕಾರಃ ಪಾವಕದಿಶಿ ಚರ್ಮಕಾರ ದೇವಗೃಹ ಸೀಮಾನ್ತಂ" ಎಂದು ಸಮಗಾರರ ಗುಡಿಯನ್ನು ಸೀಮೆಯಲ್ಲಿ ಹೇಳಲಾಗಿದೆ.

ಕಾಳೇಶ್ವರ ದೇಗುಲದ 'ಪರೆಕಾರ'ನಿಗೆ ಭೂಮಿದಾನ ಮಾಡಿದ ವಿಷಯ ಆಡೂರು (ಕ್ರಿ.ಶ. ೧೦೪೪ ಪು. ೩೪) ಮತ್ತು ಕುಳೇ ಕುಮಟಗಿ (ಕುಂಬಿಟ್ಟಿಗೆಯ ಚಂಡೇಶ್ವರ ದೇಗುಲದ ಪರೆಗಾರನಿಗೆ ಕ್ರಿ.ಶ. ೧೦೭೭ ಪು. ೬೩) ಶಾಸನಗಳಲ್ಲಿದೆ.

"ಹಾರುವರ ನೆಲದೊಳಗೆ ಗೊಗ್ಗಿಯಪುರದ ಹೊಲಗೇರಿಗೆ ಮಾಱಕೊಂಡು ಬಿಟ್ಟ ಕಮ್ಮ ೨೦೦ ಬ್ರಹ್ಮಪುರಿಯ ಹೊಲಗೇರಿಗೆ ಬಿಟ್ಟ ಕಮ್ಮ ೫೦" ಎಂದು ಲಕ್ಷ್ಮೇಶ್ವರದ ೧೧೬೬ರ ಶಾಸನದ ಕೊನೆಯಲ್ಲಿದೆ. (ಪು. ೧೮೭) ಹುಲಿಗೆರೆಯಲ್ಲಿ ಹೊಸದಾಗಿ ಬ್ರಹ್ಮಪುರಿಯನ್ನು ಮಾಡುವ ವಿಷಯ ಪ್ರಸ್ತಾಪಿಸುವ ಈ ಶಾಸನ ಕೊನೆಯಲ್ಲಿ ಆ ಬ್ರಹ್ಮಪುರಿಗೆ ಬೇಕಾದ ಹೊಲಗೇರಿಯ ಸ್ಥಾಪನೆಗೂ ಭೂಮಿಯನ್ನು ಬಿಟ್ಟಿರುವುದನ್ನು ತಿಳಿಸಿದೆ. ಸುಂಕ ತೆರಿಗೆಗಳನ್ನು ಹೇಳುವಾಗ "ಹೊಲೆಗೂಱೆ ಮಱಿವ" ಎಂಬ ಮಾತು ಕಡ್ಲೇವಾಡ ಶಾಸನದಲ್ಲಿ (ಕ್ರಿ.ಶ. ೧೧೭೬ ಪು. ೨೦೨) ಬರುತ್ತದೆ. "ತಿಪ್ಪೆಸುಂಕ ಮನೆದಱೆ ಪಾರಿಯಾಯ ಹೊಲೆಗೂಱೆ ಮಱಿವ ಈಂತಿನಿತುವಂ" ಎಂದು ಇರುವ ವಾಕ್ಯದಲ್ಲಿ ಅಕ್ಷರ ದೋಷಗಳಿರುವುದರಿಂದ ಹೊಲೆಗೊರೆಯು ಹೊಲೆದೆರೆಯಾಗಿರಬಹುದು, ಮಱಿವ ಪ್ರತ್ಯೇಕ ಸುಂಕವಾಗಿರುವಂತೆ.

ದಾನಧರ್ಮವನ್ನು "ಉಪದ್ರವ, ಉಪೇಕ್ಷೆ" ಮಾಡುವ ಪ್ರಭುಪ್ರಜೆ, ಮೂಲಿಗರು ಸ್ವಾನ ಗಾರ್ಧಭ, ಚಾಂಡಾಳರು ಎಂದು ಕುಳೇಕುಮಟಗಿ (೧೦೭೭ ಪು. ೬೩) ಶಾಸನ ಹೇಳುವುದು. ಮನಗುಂಡಿಯ ೧೨೨೧ರ ಶಾಸನದಲ್ಲಿ ('ಧಾರವಾಡ ತಾಲೂಕಿನ ಶಾಸನಗಳು' ಸಂ: ಎಂ.ಎಂ. ಕಲಬುರ್ಗಿ ಪು. ೧೧೧) 'ಹೊಲಗೇರಿ' ಸೀಮೆಯ ವಿವರದಲ್ಲಿದೆ.

ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂಪುಟ ೧ (ಬಳ್ಳಾರಿ ಜಿಲ್ಲೆ): ಕೋಳೂರಿನ ೧೦ನೇ ಶ. ಶಾಸನ ಭಾಗ ಇಂತಿದೆ. "ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಞ್ಚ ಮಹಾಶಬ್ದ ಪಲ್ಲವಾನ್ವಯ ಪರಮೇಶ್ವರ ಶ್ರೀ ಮಜ್ಜ ಪರಸರ್ ಬಳ್ಳಾರೆ ಮುವತ್ತಱ ಪೊಲೆಯರ್ಗ್ಗೆ ನಿಱೆಸಿದ ಸತ್ತಿ, ಪೊಲೆಗ್ಗೆ ವರ್ತ್ತಿ ಇಲ್ಲ. ಸತ್ತಿವಡಿಗೆ ತೆತ್ತುಹಿ ಪರನಾ...".

ಬಳ್ಳಾರಿ ೩೦ ಎಂಬ ನಾಡಿನ ಹೊಲೆಯರು ತೆರುತ್ತಿದ್ದ ಹಲವು ತೆರಿಗೆಗಳಲ್ಲಿ 'ವರ್ತಿ'ಯನ್ನು ಈ ಶಾಸನ ಮಾಫ ಮಾಡಿದ್ದನ್ನು ಆದರೆ ಸತ್ತಿವಡಿಗೆ ಎಂಬ ತೆರಿಗೆ ಕೊಡಬೇಕೆನ್ನುವುದನ್ನು ಹೇಳಿದೆ. ಹಿರೇ ಹಡಗಲಿಯ ಸು. ೮೫೧ರ ಶಾಸನದಲ್ಲಿ ಮೂಲಸ್ಥಾನ ದೇವರಿಗೆ 'ಹರೆಕಾರಸೋಮ' ಗದ್ದೆದಾನ ಬಿಟ್ಟ

ಉಲ್ಲೇಖವಿದೆ. (ಪು. ೩೭೨) ಪತಿವಾದ್ಯ ಬಾರಿಸುವ ದಲಿತ ನೀಡಿದ ದಾನವನ್ನು ಬ್ರಾಹ್ಮಣರು ಪ್ರತಿಪಾಲಿಸಿದ್ದಾರೆ.

ಕ್ರಿ.ಶ. ೧೭೦೪ರ ಕೆಂಚನಗುಡ್ಡ ಶಾಸನದ ಕೊನೆಗೆ ತಳವಾರ, ಬಡಿಗ, ಅಗಸ, ನಾಯಿಂದ, ಕುಂಬಾರ, ಬೋಯಿ, ಬಾರಿಕ, ಅಕ್ಕಸಾಲೆಗಳ ಜತೆ "ಮಾದಾರ ಬೆಕ್ಕಿನ ಸುರಿಕ ಮಾದಿಗರ ಹೊಂನ್ನುಗ ಯಲ್ಲುಗ"ರನ್ನು ಹೇಳಿದ ನಂತರ ತಳವಾರರನ್ನು ಹೆಸರಿಸಿದೆ. ಮಾದಾರ ಮತ್ತು ಮಾದಿಗರ ಎಂಬ ಎರಡು ಪ್ರಯೋಗಗಳು ಇಲ್ಲಿವೆ. ಕಸಬುದಾರರ ಮಧ್ಯೆ ಇವರನ್ನು ಸ್ಮರಿಸಲಾಗಿದೆ.

ಹೊಸೂರು ಗ್ರಾಮದೇವಿಯಾದ ಹೊಸೂರಮ್ಮನ ಸ್ಥಾನಿಕರು ದಲಿತರಾಗಿದ್ದರೆಂಬ ಮುಖ್ಯ ವಿಷಯ ಒಂದು ಶಾಸನದಲ್ಲಿದೆ. (ಪು. ೧೫೪ ಹೊಸೂರು ೧೬೪೩ ಕ್ರಿ.ಶ.) "ವಿಜೆನಾಗರದ ಮುಚಿಗರ ಬೂರುಗಲ ಲಕ ಬಯರಣ್ಣ"ರ ಹೆಸರಿವೆ. ಮುಚ್ಚಿಗರು ದಲಿತರು. ಇವರು ಈಗಲೂ ಪ್ರಖ್ಯಾತವಾಗಿರುವ ಹೊಸೂರಮ್ಮ (ಸ್ತ್ರೀ ದೈವ)ನ ಸ್ಥಾನಿಕರಾಗಿರುವದು ನಮ್ಮ ಚರ್ಚೆಗೆ ಉತ್ತಮ ನಿದರ್ಶನ. ಇಲ್ಲಿ ಮಾತಂಗೇಶ್ವರ ಗುಡಿ ಇದೆ. ಉಚ್ಚಂಗಿದುರ್ಗದ ಮೇಲಿನ ಕೋಟೆಯ ಬಟ್ಟಲು ಬಾವಿ ಬಳಿಯ ಬಂಡೆಯಲ್ಲಿ (೧೧೬೭ರ ಶಾಸನ) "ಹೊಲೆಯರು ನೀರುಂಬ ಮಾರಗೆತನ ಕೆಜಿ" ಎಂದಿದೆ. ಚಿರಸ್ತಹಳ್ಳಿಯ ೧೦೫೦ರ ಶಾಸನದಲ್ಲಿ (ಪು. ೫೧೦) "ಲೆಕ್ಕವಿಡುವವಂ ಮಾದಿಗಂ" ಎಂಬ ಮಾತಿದೆ. ಏಣಿಗಿ ಬಸಾಪುರದ ೧೭ನೇ ಶತಮಾನದ ಶಾಸನದಲ್ಲಿ (ಪು. ೬೭೯) "ಹೊಲೆಯನ ಹಳ್ಳಿ"ಯ ಹೆಸರಿದೆ. ಇದು ತುಂಬ ಮುಖ್ಯವಾದ ದಾಖಲೆ. ತಲವಾಗಿಲ ಭೋಗೇಶ್ವರ ದೇವರ ಗುಡಿಯ ಪರೆಕಾರನಿಗೆ ಒಂದು ಮತ್ತರು ಗದ್ದೆ ನೀಡಿದ ವಿಷಯವಿದೆ. (ಕ್ರಿ.ಶ. ೧೦೩೪ ಪು. ೬೬೯) ಬಾಗಳಿಯ ಒಂದು ಶಾಸನದಲ್ಲಿ (ಕ್ರಿ.ಶ. ೧೩ನೇ ಶ) "ಹಱಕಾಱ ದೇವಣ್ಣನ ಮಗಳು ಸೂಳೆ ಬೊಂವೆ" ಅರವಟ್ಟಿಗೆಗೆ ಒಂದು ಮತ್ತರು ೩೦೦ ಕಂಬ ಭೂಮಿಯನ್ನು ದಾನ ನೀಡಿದ್ದಾಳೆ. ಆ ಊರ ಅಗ್ರಹಾರ ಬ್ರಾಹ್ಮಣರು ಇದನ್ನು ಸ್ವೀಕರಿಸಿದ್ದಾರೆ. ದಲಿತ ದೇವಣ್ಣ 'ಪರೆಕಾರ'ನಾಗಿದ್ದ. ಈ ವಿಷಯವೂ ತುಂಬ ಮುಖ್ಯವಾದ ದಾಖಲೆ..

ಕುಕನೂರಿನ ಪ್ರಖ್ಯಾತ ಶಕ್ತಿಪೀಠವಾಗಿದ್ದ ಮಹಾಮಾಯಾ ದೇಗುಲದ ಹರೆಕಾರನಿಗೆ ೧೨ ಮತ್ತರು ಭೂಮಿ, ಒಂದು ಮನೆ ದಾನ ನೀಡಿದ್ದಿದೆ. (ಕ.ವಿ.ವಿ. ಶಾ. ಸಂಪುಟ. ಕೊಪ್ಪಳ ಜಿಲ್ಲೆ. ೧೧೭೮ ಕ್ರಿ.ಶ. ಪು. ೨೩೫)

ಸಿಗ್ಗಾವಿಯ ೧೦೫೫ರ (K.I.I.No. 17) ಶಾಸನದಲ್ಲಿ ಕಲ್ವೆಸದ ಓಜನಿಗೆ ೫ ಮತ್ತರು, ಕಂಬದ ನಾಲ್ವರು ಸೂಳೆಯರಿಗೆ ೨೨ ಮತ್ತರು, ಓಲಗದ ಆರು ಸೂಳೆಯರಿಗೆ ೨೪, ಸೂಳೆವಳಂಗೆ ೫ ಮತ್ತರು ಭೂಮಿ ನೀಡಿದರೆ ಪರೆಕಾರರಿಗೆ ೧೦ ಮತ್ತರು ನೀಡಲಾಗಿದೆ. ಬಹುಶಃ ಇದು ಹೆಚ್ಚಿರಲಾರದು. ಏಕೆಂದರೆ ಪರೆಕಾರ ಒಬ್ಬನೇ ಇದ್ದಿರಲಾರ. ಗುಂಪಿಗೆ ಹತ್ತು ಮತ್ತರು ನೀಡಿರಬೇಕು.

ಭಟಕಳ ಪೇಟೆಯ ಕೈಕಿಣಿ (ಕ್ರಿ.ಶ. ೧೩೯೮ No. ೩೫) ವೀರಗಲ್ಲಿನಲ್ಲಿ 'ಹೊಲೆಯ ಬಳಿ'ಯ ವ್ಯಕ್ತಿಯನ್ನು ಹೇಳಿದೆ. ಹಾಡುವಳ್ಳಿಯ (ಕ್ರಿ.ಶ. ೧೪೨೩ No. ೪೬) ವೀರಗಲ್ಲಿನಲ್ಲಿಯೂ ಹೊಲೆಯ ಬಳಿಯ ಮಾಳನ ಹೆಸರಿದೆ. ಈತನನ್ನು 'ಸಿಂಗಿರಾಜ ಒಡೆಯರ ಬಂಟ ರಾಯರಾಜಗುರು ಪಿತಾಮಹ' ಎಂದಿದೆ. ಇದೇ ಶಾಸನದಲ್ಲಿ ಎರಡುಕೋಲ ಬಳಿ, ಅಡಿಯರ ಬಳಿ, ಹೆಗಡಿ ಬಳಿ, ಅಳಿಯ ಸಿಂಗಿರಾಯ ಎಂಬ ಉಲ್ಲೇಖಗಳು ಗಮನಿಸುವಂತಿವೆ. ಕಾಯ್ಕಿಣಿಯ (ಕ್ರಿ.ಶ. ೧೪೮೪ No. ೬೪) ವೀರಗಲ್ಲಿನಲ್ಲಿ 'ಹೊಲೆಯ ಬಲಿ'ಯ ಪ್ರಸ್ತಾಪವಿದೆ. ಇದೇ ಊರ ಕ್ರಿ.ಶ. ೧೪೯೪ರ ವೀರಗಲ್ಲಿನಲ್ಲೂ (ನಂ. ೬೭) 'ಹೊಲೆಯ ಬಳಿಯ ಚೌಟಯನಾಯಕನ ಮಗ ಬಯಿರಣನಾಯಕನು' ಎಂಬ ಉಲ್ಲೇಖವಿದ್ದು ಇಲ್ಲೇ

ತೊಳರ ಬಳಿಯ ಹೆಸರಿದೆ. ಇದೇ ಶಾಸನದಲ್ಲಿ 'ಹೊಲೆಯ ಬಳಿಯ ತಮ್ಮು ನಾಯಕನ ಮಕ್ಕಳು ವೀರನಾಯಕ, ದೇವರಸ ನಾಯಕರು'ಗಳ ಹೆಸರಿವೆ. ಇದೇ ಊರ ೧೫೨೨ರ ವೀರಗಲ್ಲಿನಲ್ಲಿ (ನಂ. ೬೯) "ನಗಿರ ಚವಡಿಗೆ ಮುಖ್ಯವಾದ ಯೇಳು ಜೀತದಲ್ಲಿ ಹುಟ್ಟಿಕೊಂಡ ಹೊಲೆಯ ಬಳಿಯ ಭಳಿಗೆ, ಸಮಾತಕರ್ಲ್ಗ... ಹೊಲೆಯ ಬಳಿಯ ಬಿರುದಿನ ಅಂಗಯಿರು ನಾಯಕ್ಕ......", "ಹೊಲೆಯ ಬಳಿಯ ಯಿಸರಕ ನಾಯಿಕರಿ ಯೇಲು" ಎಂಬ ವಾಕ್ಯಗಳಿವೆ. ಇಲ್ಲಿ ೭ ಜನ ಜೀತದಲ್ಲಿ ಹುಟ್ಟಿಕೊಂಡ ಹೊಲೆಯರ ಹೆಸರನ್ನು ತಿಳಿಸಿದೆ. ಈ ಹೊಲೆಯರು ಯುದ್ಧಕ್ಕೆ ಹೋಗಿ ಒಡೆಯ ಸತ್ತಾಗ ಶಿರಣನಾಯಕನು ಇವರನ್ನು ಮೂಲವಾಗಿ ತೆಗೆದುಕೊಂಡಿರುವಂತೆ ತೋರುತ್ತದೆ.

"ಎರಡೇ ಎರಡು ಶಾಸನಗಳಲ್ಲಿ ವೀರರಾದ ಹೊಲೆಯರ ಉಲ್ಲೇಖಗಳಿವೆ" ಎಂದು ಹೇಳುವ ಚಿದಾನಂದಮೂರ್ತಿಯವರು, ಅವು ತುಳುನಾಡಿನ ಶಾಸನಗಳಿಂದ ಒಂದು; Ec VIII ಸೊರಬ ೫೩೨, ೯೬೪, A. D ಯ ಒಂದು, ಎಂದು ತಿಳಿಸಿದ್ದಾರೆ. "ಇವನ್ನು ಬಿಟ್ಟರೆ ಯಾವುದೇ ವೀರಗಲ್ಲಿನಲ್ಲೂ ಹೊಲೆಯರ ಉಲ್ಲೇಖಗಳಿಲ್ಲವೆಂಬುದನ್ನು ಗಮನಿಸಿದರೆ ಅವರು ಸತ್ತಾಗ ಸ್ಮಾರಕ ಹಾಕಿಸಲೂ ಅನರ್ಹರು ಎಂದು ಹಿಂದಿನ ಸಮಾಜ ಭಾವಿಸಿರಬಹುದು ಎಂದು ಭಾವಿಸಬೇಕಾಗುತ್ತದೆ. ಈಚಿನ ಕುಮಾರರಾಮನ ಸಾಂಗತ್ಯವನ್ನು (೧೬ನೇ ಶ.) ಬಿಟ್ಟರೆ ಹೊಲೆಯ ಯೋಧರ ಉಲ್ಲೇಖ ಸಾಹಿತ್ಯದಲ್ಲೂ ಕಾಣಿಸದು. ಬದುಕಿನಲ್ಲಿ ಎಂತೋ ಸಾವಿನಲ್ಲೂ ಅದೃಷ್ಟಹೀನರು ಅವರು ಎಂದು ಹೇಳಬೇಕೆಂದು ಮನಸ್ಸಾಗುತ್ತದೆ" ಎನ್ನುತ್ತಾರೆ. (ಪೂರ್ವೋಕ್ತ ಪು. ೩೫)

ಈ ಅಭಿಪ್ರಾಯ ಸರಿಯಲ್ಲ. ಮೇಲೆ ಸೂಚಿಸಿರುವ ದಾಖಲೆಗಳಿಲ್ಲದೆ ಈ ಹಿಂದೆ ನಮೂದಿಸಲಾದ 'ಹೊಲೆಯ ಜಂಗುಳಿ', 'ಹುಲಿಯ ಜಂಗುಳಿಯನಾಮಿಕರು' ಎಂಬ ಉಲ್ಲೇಖಗಳು ಎಂ.ಚಿದಾನಂದಮೂರ್ತಿಯವರ ಅಭಿಪ್ರಾಯವನ್ನು ಸುಳ್ಳು ಮಾಡುತ್ತವೆ. ಎಷ್ಟೋ ಸಲ ವೀರಗಲ್ಲುಗಳಲ್ಲಿ ಸತ್ತವರ ಜಾತಿಯನ್ನು ಹೇಳಿರುವುದಿಲ್ಲ . ಅಂಥಲ್ಲಿ ದಲಿತಯೋಧರು ಇದ್ದಿರುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಹೊಲೆಯ ಬಳಿ ದಲಿತೇತರ ಜಾತಿಗಳಂತೆ ದಲಿತರಿಗೂ ಅನ್ವಯಿಸುತ್ತಿತ್ತು ಎಂಬುದನ್ನು ಮರೆಯಲಾಗದು. ಯಲಬುರ್ಗಾ ತಾಲೂಕು ಮುಧೋಳದ ವೀರಗಲ್ಲಿನಲ್ಲಿ (ಕ್ರಿ.ಶ. ೮೯೨) ಸಮ್ಮಗಾರರ ಚಂದ ಹೋರಾಡಿ ಸತ್ತ ವಿಷಯವಿರುವುದನ್ನು ಇಲ್ಲಿ ಗಮನಿಸಬಹುದು. (ಕ.ವಿ.ವಿ.ಶಾ.ಸಂ: ಕೊಪ್ಪಳ ಪು. ೧೮೯)

**K. I. II :**

ತಿಳಿವಳ್ಳಿ ಅಗ್ರಹಾರದಲ್ಲಿ (ಕ್ರಿ.ಶ. ೧೦೭೨, ನಂ ೮) ಪೊಲೆಯಮ ಗಾವುಂಡ ದಾನ ನೀಡಿದ ವಿಷಯವಿದ್ದರೆ; ರಾಣೆಬೆನ್ನೂರಿನ ಶಾಸನದಲ್ಲಿ (ಕ್ರಿ.ಶ. ೮೫೫ ನಂ. ೫) ಪೊಲ್ಲಿಗಾಮುಂಡ, ಪೊಲ್ಲಬ್ಬೆ ಮಾಡಿದ ಬಸದಿಗಳ ಪ್ರಸ್ತಾಪಗಳಿವೆ. "ಮರುಳೇಶ್ವರ ದೇವರಿಗೆ ದೀಪಕ್ಕೆ ಕೊಟ್ಟ ಗಾಣ ೨ ನ್ನು ಮಾದಿಗ ಬಾಳ ಜೀವಿತದಲ್ಲಿ ಕೊಟ್ಟು ನಡೆಸುವವರು" ಎಂದು ಲಕ್ಕುಂಡಿಯ ೧೦೮೦ರ ಶಾಸನದಲ್ಲಿದೆ. (ನಂ. ೧೦) ಇದರ ಅರ್ಥ ಸ್ಪಷ್ಟವಿಲ್ಲ.

**K.I.III :**

ಹೊನ್ನಾವರ ತಾಲೂಕು ತಳಕೋಡು ಶಾಸನದಲ್ಲಿ (ನಂ. ೧. ೧೧-೧೨ ಶ.) ಹೊಲೆಯಬೆಯ ಬಳಿಯ ಸಿಂಗಬೋಯ ದಾನ ಕೊಟ್ಟ ವಿವರವಿದೆ. ಸಿಂಗಬೋಯ ದಲಿತನಾಗಿದ್ದರೆ ಇದು ಮಹತ್ವದ ದಾಖಲೆಯೇ. ಅದು–

"ಸ್ವಸ್ತಿ ಶ್ರೀಮತು ನೂಱುಂಬಾಡದ ರಾಜ್ಯಮಂ ಬಂಕಿಯಂಣ್ನ ರಸಂ ಪ್ರವರ್ತ್ತಿಸುತ್ತಿರಲು ಹೊಲೆಯಬೆಯ ಬಳಿಯ ಸಿಂಗಬೋಯಂ ಮಾಡಿದ ಅಗ್ರಂ ಒನ್ದು. ಈ ಅಗ್ರಕ್ಕೆ ಕೊಟ್ಟ ಗದ್ಯಾನಂ ಇರ್ಪ್ಪತ್ತು. ಈ ಹೊಂಗೆ ನಡೆವಳಿಯ ಬಿತ್ತಿ ಮೂಗಣ್ದುಗದ ಮೂಡೆ ಪದಿನಯ್ದು ಪೊನ್ನುಂ ಬತ್ತಮುಂ ಸಲಿಕೆಯುಂ ಗ್ರಾಮದವರ ಕೈಯ್ಯಲು ಉಣ್ಡಿಗೆ ಕಮ್ಮಾವಿನ ದೇವರ ದೇವ ಕಮ್ಮಿಯ ಕಯ್ಯಲು..." (ಪು. ೨) (ಅಗ್ರಂ=ನೈವೇದ್ಯದ ಮೊದಲ ಅರ್ಪಣೆ) 'ಹೊಲೆಯಬ್ಬೆ ಬಳಿ', 'ಹೊಲೆಯ ಬಳಿ' ಇವು ಒಂದೇ ಎಂದು ತೋರುತ್ತದೆ. ಇಂಥದೇ ಪ್ರಸ್ತಾಪ ೧೫೪೭ರ ಮಾವಳ್ಳಿ (ಭಟಕಳ ಪೇಠ) ಶಾಸನದಲ್ಲಿದೆ. (೧೫೪೭, ಪು. ೬೧) ಚೈತ್ಯಾಲಯವನ್ನು ಮಾಡಿಸಿ ಪುಷ್ಪದಂತ ತೀರ್ಥಂಕರರನ್ನು ಸ್ಥಾಪಿಸಿ ಭೂದಾನ ಬಿಟ್ಟ ವಿಷಯ ತಿಳಿಸುವ ಈ ಶಾಸನದಲ್ಲಿ "ಸೊಗಯಿಪ ನಾಲ್ವಱು ಮಕ್ಕಳೊಳು ಪೆಸರುವಡಿದಾ ಮಿಗೆ ಹೊಲೆ ಬೀಳಿಗೆ ಭೂಶಣೆ ಜಗದೊಳು ವರ ಮಲ್ಲಿದೇವಿ ಭಾಮಿನಿಯೆಸೆವಳ್". ಈಕೆಯ ಗಂಡ ಕಾಯ್ಕಿಣಿಯ 'ಸಿರಿಯನ ಬಳಿಯ'ವನು. 'ಬೀಳಿಗೆ', ಹೊಲೆ ಬಳಿ ಎಂದಿರಬೇಕು. ಈಕೆಯ ವಂಶದವರೇ ಚೈತ್ಯಾಲಯ ಮಾಡಿಸಿದ್ದು. ಈ ಶಾಸನದಲ್ಲಿ ತಾಯಾಳಿಕೆಯ ಅವಶೇಷರೂಪಿ ವಿಷಯಗಳು ಹಲವಿವೆ. ಉದಾ: "ಗಂಡು ನಾಯ್ಯನ ಹೆಂಡಿರು ಮಕ್ಕಳ ಭಾಗಿ", "ಭಾಣಸಿಯ ಮಗಳು ಬಾಲೆಯಕ್ಕನ ಭಾಗಿ" ಭೈರಮನಾಯಕತಿಯ ಮಕ್ಕಳು "ಸಾತಣ್ಣ ನಾಯಕನ ಕುಟುಂಬದವರು ಆಳುವ ಹಿತ್ತಲ" ತಿಮ್ಮನಾಯಕನ ಕುಟುಂಬ ದವರಾಳುವ ವೃತ್ತಿ, ಪಾರಿಸದೇವನಾಯಕನ ಕುಟುಂಬದವರಾಳುವ ವೃತ್ತಿ ಇತ್ಯಾದಿ.

ಕೆ. ಐ. IV :

ಹಿರೇಹಳ್ಳಿಯ ಶಾಸನದಲ್ಲಿ (ಕ್ರಿ.ಶ. ೧೧೨೧. ಪು.೨೮) "ಹೊಲೆಯಮ ಶೆಟ್ಟಿ"ಯ ವರ್ಣನೆ ಇದೆ. ಅವನ ಹೆಂಡತಿ ಚಂಡಿಕವ್ವೆ, ಇವರ ವಂಶಜ ಜಕ್ಕಿಶೆಟ್ಟಿ, ಜಕ್ಕಣವ್ವೆ, ಸೇನಬೋವ ಹೊಲ್ಲಣ, ಕೆತ್ತಿದ ಮಾದೋಜರ ಹೆಸರೂ ಇವೆ. ಶ್ರೀಮಂತ ವ್ಯಾಪಾರಿ ಕುಟುಂಬದ ಈ 'ಹೊಲೆಯಮ ಶೆಟ್ಟಿ'ಯ ಮೂಲ ದಲಿತ ಕುಲವೇ? ಅಂಗಜೇಶ್ವರ ದೇಗುಲ ನಿರ್ಮಿಸಿದವರು ಈ ವಂಶದವರು. ಸಂಪಾದಕ ಎ.ಎಂ.ಅಣ್ಣಿಗೇರಿಯವರಿಗೆ 'ಹೊಲೆಯಮ' ಹೆಸರು ಕಿರಿ ಕಿರಿ ಮಾಡಿದಂತಿದೆ. ಅವರು ಈ ವಂಶದ ಎಲ್ಲರ ಹೆಸರನ್ನು ದಪ್ಪಕ್ಷರದಲ್ಲಿ ಪ್ರಿಂಟಿಸಿದ್ದಾರೆ. ಆದರೆ ಹೊಲೆಯಮಶೆಟ್ಟಿಯ ಹೆಸರನ್ನು ಮಾತ್ರ ಹಾಗೆ ಅಚ್ಚಿಸಿಲ್ಲ. "ಹೊಲೆಯಮನೆಂಬ ಗೋತ್ರ ನಿಧಿಗಂ" ಎಂಬ ಮಾತು ಬಳಿಯನ್ನಲ್ಲ ಹೊಲೆಯಮ ಶೆಟ್ಟಿಯನ್ನು ವರ್ಣಿಸುತ್ತಿದೆ. ಏನಿದ್ದರೂ ಈ ಹೆಸರಂತೂ ದಲಿತ ಮೂಲದ್ದೆಂಬುದರಲ್ಲಿ ಸಂಶಯವಿಲ್ಲ. ೧೨೪೭ರ ಮಡಾಲೂರು ಶಾಸನದಲ್ಲೂ (ಪು. ೧೦೧) 'ಹೊಲೆಗೌವುಡ'ನ ಹೆಸರಿದೆ. ಮಡಲೂರು ನಾಡ ಪ್ರಭು ಪೊಲ್ಲಗಾವುಂಡನ ಹೆಸರೂ ಇಲ್ಲಿದೆ. ಗಡಿ ಮೇರೆ ಹೇಳುವಾಗ ಎರಡು ಸಲ 'ಹೊಲತಿ' ಎಂಬ ಹೆಸರು ಬಂದಿದೆ. ಗೌಡ ಶೆಟ್ಟಿಗಳು 'ಹೊಲೆ', 'ಮಾದಿಗ' ಹೆಸರುಗಳನ್ನು ಇಟ್ಟುಕೊಳ್ಳುತ್ತಿದ್ದರೆಂಬುದಂತೂ ನಿಸ್ಸಂದೇಹ.

'ಹೊಲಗೇರಿಯ ನಡು ಹೊಂನು' ಎಂಬ ಮಾತು ಅಚಲಾಪುರ (೧೫೫೭, ಕೊಪ್ಪಳ ಜಿಲ್ಲೆ. ಕ.ವಿ.ವಿ.ಶಾ. ಸಂ: ಪು. ೧೫೭) ಶಾಸನದಲ್ಲಿದೆ. ಕೊಪ್ಪಳದ ತಾಮ್ರ ಶಾಸನವೊಂದರಲ್ಲಿ (೧೫೮೩, ಪು. ೩೯೬) ಇತರರ ಜತೆ ಮಾದಿಗ ಮುದುಕನ ಸಾಕ್ಷಿಯೂ ಇದೆ. ಹರೆಕಾರನ ಪ್ರಸ್ತಾಪ ಕುಕನೂರು ೧೧೦೭ರ ಶಾಸನದಲ್ಲಿದೆ. (ಪು. ೨೦೦) ಮುಧೋಳಿನ ವೀರಗಲ್ಲಿನಲ್ಲಿ ಹಿಂದೆ ಹೇಳಿದಂತೆ "ಸಮ್ಮಗಾಱರ ಸನ್ದ ಸತ್ತೋನ್" (೧೮೯, ೮೯೭ ಕ್ರಿ.ಶ.) ಎಂದಿದೆ.

ನನಗೆ ಗಮನಿಸಲಿಕ್ಕಾಗದೇ ಇರುವ ಶಾಸನ ಸಂಪುಟಗಳಲ್ಲಿ ಇನ್ನೂ ಅನೇಕ ಬಗೆಯ ವಿವರಗಳು ಸಿಕ್ಕುವ ಸಾಧ್ಯತೆಯಿದೆ. ಉದಾ : ಎಂ.ಚಿದಾನಂದಮೂರ್ತಿಯವರು 'ಮಾದಾರಿಕೆ ವಟ್ಟದ ಬಗ್ಗೆ ಪ್ರಸ್ತಾಪಿಸಿದ್ದಾರೆ. (ಪೂರ್ವೋಕ್ತ ಗ್ರಂಥ ಪು. ३೭)

"ಹೊಲೆಗೇರಿಗೆ ಮುಖ್ಯಸ್ಥನಾದವನನ್ನು ಊರಗೌಡನೋ, ಆ ನಾಡಿನ ಪ್ರಭುವೋ (ನಾಳ್ಪ್ರಭು) ನೇಮಿಸಿ ಅವನ ಕೈಗೆ ಅವನ ಅಧಿಕಾರ ಸೂಚಕವಾದ ಕಟ್ಟಿಗೆಯನ್ನು ಕೊಡುತ್ತಿದ್ದಂತೆ ಒಂದು ಶಾಸನದಿಂದ ಊಹಿಸಬಹುದು. ಗೌಡಿಕೆ ಇದ್ದಂತೆ, ಮಾದಾಜಿಕೆ ಎಂಬ ಹೆಸರಿನ ಆ ಜಾಗಕ್ಕೆ ನೇಮಕವಾದರೆ ಆ ವ್ಯಕ್ತಿ ಮಾದಾಜಿಕೆವಟ್ಟ (ಮಾದಾಜಿಕೆ + ಪಟ್ಟ) ವನ್ನು ಪಡೆಯುತ್ತಿದ್ದ" ಇತ್ಯಾದಿ. 'ಮದಾರಿಕೆವಟ್ಟದ ಕಟ್ಟಿಗೆ' ಯಾವ ಆಕರವನ್ನು ಸೂಚಿಸದ ಚಿದಾನಂದಮೂರ್ತಿಯವರು ಶೆಟ್ಟಿಗೆ ಪಟ್ಟ ಕಟ್ಟುವುದನ್ನೆ ಮಾದಾರರ ಮುಖ್ಯಸ್ಥನಿಗೆ ಆರೋಪಿಸಿದ್ದಾರೆ. ಹೀಗೆ ಹೇಳುವುದಕ್ಕೆ ಅವರು ಕೊಡುವ ಆಕರಗಳು ಸಬಲವಾಗಿಲ್ಲ. ಮಾದಾರಿಕೆ ಮುಖ್ಯವಾಗಿ ಶಾಸನಗಳಲ್ಲಿ ಸುಂಕವಾಗಿಯೇ ಬಂದಿದೆ. ಗೌಡಿಕೆಯಂಥ ಅಧಿಕಾರವ್ಯಾಪ್ತಿ ಮಾದಾರಿಕೆಗೆ ಇದ್ದ ಸೂಚನೆಯೂ ಇಲ್ಲ. ಹಾಗಾಗಿ ಅಪವಾದದಂತೆ ಅಥವಾ ಅಪರೂಪವಾಗಿ ಬಂದಿರುವ 'ಮಾದಾಜಿಕೆವಟ್ಟ'ಕ್ಕೆ ಬೇರೆಯದೇ ಅರ್ಥ ಹೇಳಬೇಕೇನೊ. ಅಲ್ಲದೆ ಅದು ಬಂದಿರುವ ಮೂಲ ಶಾಸನ ಪಾಠವು ಉದ್ಧೃತವಾಗಿಲ್ಲ.

ಕೊಲ್ಲಾಪುರ ಜಿಲ್ಲೆಯ ಶಾಸನಗಳು: (ಪ್ರಸಾರಾಂಗ ಕ.ವಿ. ಹಂಪಿ.೨೦೦೦) ಕೊಲ್ಲಾಪುರದ (೯) ೧೧೪೪ ಕ್ರಿ.ಶ.ದ ವಿಜಯಾದಿತ್ಯನ ಶಾಸನದಲ್ಲಿ "ಸಮ್ಮಗಾಱರಲ್ಲಿ ಅಱುದಿಂಗಳಿಗೆ ಕುಡುವ ಪಾದರಕ್ಷೆ ತೋಡೊಂದು ಮೇದರಲ್ಲಿ ಸಂತೆಗೆ ಕುಡುವ ಮೊಱನುವೊಂದು, ಮಾದೆಗರಲ್ಲಿ ಅಱುದಿಂಗಳಿಗೆ ಕುಡುವ

ಮಿಳಿವೊಂದು" ಇವನ್ನು ಸೇಡಬಾಳದ ಮಾಧವೇಶ್ವರ ದೇವರಿಗೆ ದಾನ ಕೊಡಬೇಕೆನ್ನುವ ಪ್ರಸ್ತಾಪವಿದೆ. ಇತರ ವ್ಯಾಪಾರಿ, ಕರಕುಶಲಕರ್ಮಿಗಳಿಗೆ ಹಾಕಿದಂತೆ ಇಲ್ಲಿ ಸಮಗಾರರು ಮಾದಿಗರಿಗೂ ಅವರವರ ಉತ್ಪನ್ನಗಳನ್ನೇ ಎತ್ತಿಕೊಳ್ಳುತ್ತಿರುವ ನಿದರ್ಶನವಿದೆ. ಸಮಗಾರರ ವೃತ್ತಿ ಪಾದರಕ್ಷೆ ಮಾಡುವುದು. ಮಾದಿಗರ ವೃತ್ತಿ ಒಕ್ಕಲುತನ ಉಪಕರಣ (ಜತಿಗಿ, ಮಟ್ಟಿ, ಮಿಣಿ ಇತ್ಯಾದಿ) ಮಾಡುವುದು ಎಂಬ ಸ್ಪಷ್ಟ ವ್ಯತ್ಯಾಸ ಇಲ್ಲಿದೆ. ಇವರಿಂದಲೂ 'ವ್ಯವಸ್ಥೆ' ಸುಲಿಯುತ್ತಿತ್ತು ಎಂಬುದಕ್ಕೆ ಇದು ನಿದರ್ಶನ.

**ನಾಮಗಳಲ್ಲಿ ದಲಿತ ನೆಲೆ :**

ಬ್ರಾಹ್ಮಣರಿಂದ ಮೊದಲು ಮಾಡಿಕೊಂಡು ಎಲ್ಲ ಜಾತಿಯವರಿಗೂ ಮಾದಿಗ ಮತ್ತು ಹೊಲೆಯ ಪದಗಳು ಹೆಸರುಗಳಾಗಿರುವುದು ಅಚ್ಚರಿಯ ಸಂಗತಿ ಏನಲ್ಲ. ಇದು ದಲಿತ ಸಂಸ್ಕೃತಿಯ ಶ್ರೇಷ್ಠತ್ವದ ಪ್ರಬಲ ಪಳೆಯುಳಿಕೆ. ಈ ಹೆಸರುಗಳು ತಮಗೆ ಸುಖ, ಸಮೃದ್ಧಿ, ಬಲ, ಶೌರ್ಯವನ್ನು, ತರುತ್ತವೆಂದು ಭಾವಿಸಲಾಗುತ್ತಿದ್ದರಬೇಕು. ಬಹಳಷ್ಟು ಸಲ ಅವು ಕುಲದ ಮೂಲವನ್ನು, ಕುಲಲಾಂಛನವನ್ನು, ಕುಲದೈವವನ್ನು ಕುಲಬಳಿಗಳನ್ನು ಸೂಚಿಸುತ್ತವೆಂಬುದೂ ತುಂಬ ಮುಖ್ಯ.

ಶಾಸನಗಳಲ್ಲಿ ಕಂಡು ಬರುವ ಹೊಲೆಯ, ಮಾದಿಗ ಹೆಸರುಳ್ಳ ಪದಗಳನ್ನು ನೋಡುವಾ–

ಮಾದೇಗೌಡ (ಪು. ೫೦, ೫೧), ಮಾಬ್ಬೆ (೫೩), ಮಾದಿಯಣ್ಣ (೫೭), ಮಾದಿಹಳ್ಳಿ (೧೩೩), ಮಾದರ ಹುಲ್ಲನಹಳ್ಳಿ (೨೬೬), ಹೊಲ ಎಂಬರ್ಥದಲ್ಲಿ ಪೊಳಿ (೩೬೭) ಇವೆಲ್ಲ Ec ೩ ಸಂಪುಟದಲ್ಲಿ. Ec ೪ ರಲ್ಲಿ ಮಾದಿಕಾಳ (೧೨೭), ಮಾದಿಗೌಡ (೧–೨೨೦, ೨೭೭) ಮಾದಿಶೆಟ್ಟಿ (೧–೨೩೫), ಮಾದವಾಡಿ (೧–೨೩೭), ಮಾದಣ್ಣನಾಯಕ (೨–೨೫), ಪೊಲ್ಲಯ್ಯ (೨–೪೦), ಮಾದಪ್ಪ (೨–೧೫೪), ಮಾದಿಗೆಹಳ್ಳಿ (೨–೧೬೮), ಮಾದರಸ (೨–೧೬೯), ಮಾದೆಯ (೩–೫೬), ಮಾದಣ್ಣ (೩–೭೮), ಮಾದಗೌಡ (೪–೩೩), ಮಾದೆಯ ನಾಯಕ (೫–೧೧೮).

Ec ೯ರಲ್ಲಿ ಮಾದಗವುಡಿ (ಪು. ೯೮) ಮಾದರರಸ (೨೪೩), ಮಾದಿಹಳ್ಳಿ (೨೯೬); Ec ೭ರಲ್ಲಿ ಮಾದಿಹಳ್ಳಿ (೧೪೧), ಮಾದಿಗೌಡ (೧೭೩), ಪೋತಯ್ಯ, ಮಾದಯ್ಯ (೨೧೩), ಮಾದೆಯ ನಾಯಕ, ಮಾದವ್ವೆ (೨೧೮), ಹೊಲ್ಲಿಗ (೨೨೭), ಪೊಲಶೆಟ್ಟಿ (೨೮೫), **ಮಾದರ ಗವುಡಿ** (೩೧೧), ಮಾದೆಗವುಡ (೪೨೩); Ec ೮ರಲ್ಲಿ ಮಾದಿಗೌಡ (೪೬, ೩೧೪), ಮಾದಜೀಯ (೧೪೨, ೧೪೪), **ಹೊಲೆಯ ಗಾವುಂಡ** (ಹೆಣ್ಣೂರು, ೧೯೬), ಪೊಲ್ಲೇಶ್ವರ (೧೯೭), ಅಳಿಯ ಸಂತಾನದ ಎಲ್ಲಪ್ಪ ನಾಯಕ (೨೧೪), ಮಾದೆಯ (೩೩೬, ೩೮೪), ಮಸಣಯ್ಯ ( ೩೫೭), ಮಾದ (೪೧೭), **ಹೊಲೆಗಾವುಂಡ** (೪೩೯); Ec ೯ರಲ್ಲಿ ಹೊಲ್ಲೆಯ ಸಾಹಣಿ, ಚಮ್ಮಾವುಗೆಯ ಮಸಣಿಯ ಸಾಹಣಿ(೩೫), ಪೋತನಾಯಕ (೪೧), **ಹೊಲೆಯಬ್ಬೆ** ಕೆರೆ (೬೬), ಪೋತಪ್ಪ ನಾಯಕ (೨೦೪), ಮಾದಿ ಗವುಡ (೨೨೬), ಮಣಿಗಾರ ಮಾದವ್ವೆ (೨೭೫), **ಪೊಲೆಯಮ್ಮ** ಓಜರು (೩೫೨), **ಮಾದಿಗಿ ದೇವ** ದಣ್ಣಾಯಕ (೪೦೧), ಮಾದಣ್ಣ (೪೧೩), ಮಾದಿಹಳ್ಳಿ (೪೪೬), ಮಾದಿಗೌಡ (೪೫೨), ಮಾದೆಯ (೪೭೭), ಮಾದಿವೆಗ್ಗಡೆ (೪೮೪); SII VII ರಲ್ಲಿ ಮಾದರಸ (೮೩), **ಹೊಲೆಯರ ಅಂಕಶೆಟ್ಟಿ** (೧೭೭), ಮಾದಿಯಕ್ಕ (೨೪೩), ಪೋಲ ಗವುಡ (೩೪೩), SII IX- II –ರಲ್ಲಿ ಪೋತರಸ (೫೪೧); ಮಾದಿಗಾಂಕ (೧೩೬), ಪೊಲ್ಲಿಯಕ್ಕ (೧೩೪), ಇವು ಧಾರವಾಡ ತಾಲೂಕು ಶಾಸನಗಳಲ್ಲಿ; SII IX-I ರಲ್ಲಿ ಪೋತರಸ (೭), ಪೊಲ್ಲಗಾವುಂಡ (೧೩), ಮಾದಿಯಬ್ಬೆ (೧೮೦), ಮಾದಿಮಯ್ಯ (೨೫) ಎಮ್ಮೆಯರ ಮಾದಯ್ಯ (೩೩೧); ಕ.ವಿ.ವಿ.ಶಾ.ಸಂ.ಬಳ್ಳಾರಿ ಜಿಲ್ಲೆಯಲ್ಲಿ ಸೌಧರೆ ಮಾದಿಯ (೫), ಪೋತಲಿಂಗ (೧೦೧); SII XI (I-II)ರಲ್ಲಿ ಪೊಲ್ಲಿಯಕ್ಕ (೨೬೫, ೨೩೨), ಹೊಲ್ಲಿ ಶೆಟ್ಟಿ (೨೫೩, ೧೮೩), ಹೊಲ್ಲಿಗಾವುಂಡ (೨೪೬), ಮಾದಿರಾಜ (೧೮೦), (೭೪), ಮಾದಿಯಣ್ಣ (೭೫, ೧೬೪), ಮಾದಿಯಬ್ಬೆ (೧೬೧), ಮಾದಿಮಯ್ಯ ಪೋತ (೯), **ಪೊಲೆಯಣ್ಣ** (೨), ಪೊಲೆಯಮ ತೋಟ (೫೬), ಪೊಲೆಗ (೫೭); SII XV: ಮಾದಿಗಮುಂಡ (೯), ಪೊಲೆಯಜ್ಜಿ (೩೪೦); ಕ.ವಿ.ವಿ.ಶಾ.ಸಂ.ಕೊಪ್ಪಳ: ಪೊಲೆಯ ಬಡಿಗಳು (೯೯), ಪೊಲೆಯಚಿ (೮೮, ೭೧), ಮಾದಿಗವುಡ (೩೨೩, ೧೫೮), ಮಾದ (೩೧೮), ಮಾದೈಯ (೩೫೬), ಪೊಲೆ (೩೦೭), ಪೋತೆಯ

(೨೬೦), ಸಮ್ಮಗಾರರ ಚಂದ (೧೮೯); KI II: ಮಾದಿರಾಜ (೮), ಪೊಲೆಯಮ ಗಾವುಂಡ (೮), ಪೊಲ್ಲಿಗಾಮುಂಡ (೫), ಪೊಲ್ಲಬ್ಬೆ (೫); KI, I: ಹೊಲೆಯ ಬಳಿ (೩೫, ೪೬, ೬೪, ೬೭, ೬೯), K I IV : ಮಾದಿರಾಜ (೩೮), ಮಸಣಿಸೆಟ್ಟಿ (೪೩), ಇತ್ಯಾದಿ.

ನಮ್ಮ ಮೊಟ್ಟ ಮೊದಲ ಪ್ರಶ್ನೆ ಎಂದರೆ ಹೊಲೆಯ–ಮಾದಿಗ ಪದಗಳಿಗೆ ಹೊಲಸು ಮೊದಲಾದ ಕೀಳಾರ್ಥವಿದ್ದಿದ್ದರೆ ಈ ಹೆಸರುಗಳನ್ನು ಎಲ್ಲ ಜಾತಿಗಳ ಜನ ಅಂಕಿತನಾಮವಾಗಿ ಬಳಸುವುದಕ್ಕೇನು ಕಾರಣ? ಹೊಲೆಯ–ಮಾದಿಗ ಜಾತಿಗಳನ್ನು ಒಂದೆಡೆ ಹೀನಾಯವಾಗಿ ಕಾಣುತ್ತಿದ್ದುದು ನಿಜವಾದರೂ ಅವರ ಮೂಲದ ಸಂಸ್ಕೃತಿ ಶ್ರೇಷ್ಠತ್ವದ ಬಗ್ಗೆ ಗೌರವವೂ ಇತ್ತು. (ಇದು ಹಬ್ಬ ಜಾತ್ರೆಗಳಲ್ಲಿ ಸಾಂಕೇತಿಕವಾಗಷ್ಟೇ ಇತ್ತೆಂದು ತೋರುತ್ತದೆ.) ೧೨ನೇ ಶತಮಾನದ ಬಸವಣ್ಣನಂಥ ಮೇಲ್ಜಾತಿ ವಚನಕಾರರು ದಲಿತ ಶರಣರ ಬಗ್ಗೆ ಇಟ್ಟುಕೊಂಡಿದ್ದ ಅಪಾರ ಗೌರವ, ಹಿರಿಯ ಕುಲವೆಂದು ದಲಿತರನ್ನು ಸಂಬೋಧಿಸುವುದು ಇವು ದಲಿತರ ಘನ ಚರಿತ್ರೆಗೆ ಸಲ್ಲಿಸಿದ ಗೌರವವೆಂದೇ ಹೇಳಬೇಕು. ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದ "ವೀರರ" ಪ್ರಯತ್ನವಿದ್ದಿಲ್ಲದಿದ್ದರೆ 'ವೀರಶೈವ'ವೇ ಹುಟ್ಟುತ್ತಿರಲಿಲ್ಲ. ಈ ಕಾರಣಕ್ಕಾಗಿಯೇ ಬಸವಣ್ಣ ಮಾದರ ಚನ್ನಯ್ಯನನ್ನು ಅಪ್ಪ, ಬೊಪ್ಪ, ಕುಲದ ಮೂಲ ಪುರುಷ ಮುಂತಾಗಿ ಹಾಡಿ ಹೊಗಳಿದ್ದಾನೆ.

**ಜಾತಿಯಲ್ಲ ಕುಲಗಳು :**

ದಕ್ಷಿಣ ಭಾರತದ ಜಾತಿ ವ್ಯವಸ್ಥೆಯ ಅನನ್ಯತೆಯ ಕುರಿತು ಬೇರೆ ಅಧ್ಯಯನವೇ ನಡೆಯಬೇಕಿದೆ. ಶಾಸನಗಳಲ್ಲಿ ಜಾತಿ ಹೆಸರುಗಳಿಗಿಂತ ಕುಲದ ಹೆಸರು ಹೆಚ್ಚು ಕಾಣಸಿಗುತ್ತವೆ. ಕನ್ನಡ ಬುಡಕಟ್ಟುಗಳು ವರ್ಗ–ವರ್ಣ ವ್ಯವಸ್ಥೆಗೆ ಹೊಂದಿಕೊಳ್ಳುವ ಪ್ರಕ್ರಿಯೆಯಲ್ಲಿ ಜಾತಿಗಳಾದರೂ ತಮ್ಮ 'ಕುಲ' ಪದ್ಧತಿಗಳನ್ನು ಸಂಪೂರ್ಣ ಕೈ ಬಿಟ್ಟಿರಲಿಲ್ಲ. ಕುಲದ ಹೆಸರುಗಳು ಉಳಿದು ಬಂದಿರುವುದಕ್ಕೆ ಇದೇ ಕಾರಣ. ಕುಲ ಪರಂಪರೆಗೂ, ಜಾತಿಪದ್ಧತಿಗೂ ಇದ್ದ ವ್ಯತ್ಯಾಸವನ್ನು : ವರ್ಗ ಸಮಾಜದಲ್ಲಿ ಇವುಗಳ ಪರಿವರ್ತನೆಯ ಸ್ವರೂಪವನ್ನು ಅಧ್ಯಯನ ಮಾಡುವ ಅವಕಾಶವಿದೆ.

ಕುಲಪದ್ಧತಿಯಲ್ಲಿ ಜಾತಿ ತಾರತಮ್ಯ ಇರಲಿಲ್ಲ. ಮೇಲು ಕೀಳು ಇರಲಿಲ್ಲ. ಸಾಮಾಜಿಕಾರ್ಥಿಕ ಅಸಮಾನತೆ ಇರಲಿಲ್ಲ. ಉತ್ಪಾದನೆಯ ಮಟ್ಟವೇ ಕೆಳಸ್ಥಿತಿಯಲ್ಲಿತ್ತು ನಿಜ. ಆದರೆ ಅಮಾನವೀಯ ನೀಚತನವಿರಲಿಲ್ಲ.

ಶಾಸನ ಪ್ರಪಂಚವೇ ವರ್ಗ ಸಮಾಜದ ಸೃಷ್ಟಿಯಾಗಿದ್ದರಿಂದ ದಲಿತ ಸಂಸ್ಕೃತಿಯ ಮತ್ತು ದಲಿತ ಸಮಾಜದ ಬಗೆಗಿನ ಇತರರ ಧೋರಣೆ ವೈರುದ್ಯಾತ್ಮ ಕವಾಯಿತು. ದಲಿತರನ್ನು ದಲಿತೇತರರು ಹೇಗೆ ಕಾಣುತ್ತಾರೆಂಬುದನ್ನಷ್ಟೇ ಶಾಸನಗಳಲ್ಲಿ ನೋಡುತ್ತೇವೆ. ದಲಿತ ಸಂಸ್ಕೃತಿಯ ವಾಸ್ತವ ಸ್ವರೂಪ ಹೇಗಿತ್ತೆಂಬುದನ್ನು ಪರೋಕ್ಷ ಕ್ರಮಗಳಿಂದಲೆ ಗ್ರಹಿಸಬೇಕು. ಅದನ್ನೇ ಮೇಲೆ ಹೇಳಿರುವ 'ನಾಮ'ಗಳಲ್ಲಿ 'ದಲಿತನೆಲೆ' ಸ್ಪಷ್ಟ ಪಡಿಸುತ್ತದೆ. ಮೊದಲಿನಿಂದಲೂ ಜನಪದ ನೆಲೆಯಲ್ಲಿದ್ದ ದಲಿತಮೂಲದ ಹೆಸರುಗಳು ವಾಸ್ತವ ಸತ್ಯಗಳು ಇವನ್ನು ಶಾಸನಗಳು ಬದಲಿಸುವಂತಿರಲಿಲ್ಲ, ತಿರುಚುವಂತಿರಲಿಲ್ಲ, ಅವನ್ನು ಪ್ರಾಮಾಣಿಕವಾಗಿ ದಾಖಲಿಸಬೇಕಿತ್ತು.

**ಈಗ ಕುಲದ ವಿಷಯ :**

ಯಾವ ವೈದಿಕ ಧರ್ಮಶಾಸ್ತ್ರಗಳಲ್ಲಿಯೂ ಕಾಣಸಿಗದ ಕುಲದ ಹೆಸರುಗಳು ಕನ್ನಡ ಶಾಸನ ಪ್ರಪಂಚದಲ್ಲಿವೆ.

ಸಿಂದಕುಲ (ಕುಳ), (ಪು. ೨೨೧, ೧೯೬, ೬೬, ೧೩೫, ೯೩, ೫೬, ಇತ್ಯಾದಿ) ಮೊರಕಕುಲ (೫೭, ೧೯೦), ಬೈಸಕುಳ (೨೦೩), ತೊರಹರು (೧೮೩), ಮೋರಿಯಕುಲ (೧೫೬), ಕೋಣೆಯವಂಶ (೧೫೬), ಚೋಳಕುಲ (೯೨), ಪಾಪಕಲ್ಲಕುಲ (೨೬), ಖಚರಕುಲ (೨೫), ಬೈರುಂಬರ ಕುಲ (೧೬೮), ಭರಣಿಗರ ಸಂತತಿ (೫೫), ಇವೆಲ್ಲ ಎಸ್.ಐ.ಐ XI (I & II)ರಲ್ಲಿವೆ. ನಾಬಳದ ವಂಶ (೯), ಬಿಳಿಕುಲ ವೈಶ್ಯ (೨೬), ಸಿಂದಕುಲ (೫೫), ಗೊಲ್ಲರು (೬೬), ಹಟ್ಟಗಾರ (೨೯೬, ೩೦೦)– ಎಸ್.ಐ.ಐ XV. ಹೊಲೆಯ ಬಳಿ (No.೩೫, ೪೬, ೬೪, ೬೭, ೬೮, ೬೯) ಕೆ.ಐ I. ಬಟಾರಿ ಕುಲ (೨೨೨), ಅಣ್ಣಿಯ ಕುಲ (೪೬೯),– ಇ.ಸಿ.೯ ಕುಳಿಕಿ ಮಾಳೆಯರ ಕುಲ (೧೬೨), ಕೊಮ್ಮೆಯರ ಕುಲ (೧೭೩), ಬೆಳ್ಳಿಯರು ವಣ್ಣಾಕರು, ಗುದಿಯರ ಕುಲ (೨೦೦, ೨೦೬), ಮದುರೆಯ ಕುಲ (೨೩೯), ತೆಳ್ಳರ ಕುಲ (೩೧೭, ೩೧೮, ೩೧೯, ೩೨೩)– ಇ.ಸಿ. ೭. ಬೆಳ್ಳಿಯರ ಕುಲ (೫೧), ಎಮ್ಮೆಯರ ಕುಲ (೧೨೦), ಗಂಗಡಿಕಾರ (೧೨೨, ೧೨೩), ಎಮ್ಮಾವುರ ಕುಲ (೨೪೬), ಸಂಕಿಯರ ಕುಲ (೩೨೬)–Ec ೬. ಹೊರಲಾದಿ ಕುಲ (೧೧), ಪರಮೆಯರ ಕುಲ (೧೫), ಕೊಮ್ಮೆಯರು (೩೩೮), ಕೋವರು (೩೩೮), ಬಳರಿಮಕ್ಕಳು (೩೬೭), ಕೊವಳೆಯ ಕುಲ (೫೦೯), Ec ೩ ;

ನೊಳಂಬ ಕುಲ (Ec ೨ ಪು. ೨೩), ಕುರುಬ ಕುಲ (೬೭೭), ಉಡುವರ ಬಳಿ (೪೩೦), ತೊಳಹರ ಬಳಿ, ಗೊಜಂಡೆಯ ಬಳಿ, ಆರಿಯ ಬಳಿ (೪೩೧), ಕಿಳಾಬಳಿ, ಬಳ್ಳಾ ಬಳಿ, ಕೊಂಗ ಬಳಿ, ತೊಳಹರ ಬಳಿ (೪೭೮, ೪೭೬, ೪೯೪)– SII IX-II, ನಾಬಳವಂಶ (೮೮), ಬಾಯರ ವಂಶ (೧೮೦), ಗುಜ್ಜರ (೨೧೩), ಕಮ್ಮೆಕುಲ (೨೬೧)– ಧಾ.ತಾ.ಶಾ. ಸೆಳರ ಕುಲ (೧೧೬, ೧೪೧), ಶಳಾರ ಕುಲ (೮೬), ಶಿಳಾರ ವಂಶ (೧೬೫), ಎಸ್.ಐ.ಐ XX; ಮಾವಾಣಿಗರು (೪೦) Ec XVI; ಪೆಣ್‌ವಳಿ ಬಳಿ (೧–೧೭೨), ವೇಳರು ಕೋವರು, ಕುಣಿಂದರು, ನಲೊಡೆಯರು (೧–೧೯೫), ತೆಳ್ಳರು (೧–೧೮೮), ಚೆಳ್ಳಿಯರ ಕುಲ (೪–೪೦), Ec ೪.

ಸರಿಯಾಗಿ ಸಂಗ್ರಹಿಸುವುದಾದರೆ ಇನ್ನೂ ಸಾಕಷ್ಟು ಕುಲಗಳು ಸಿಗುತ್ತವೆ. ಇಷ್ಟು ದೊಡ್ಡ ಸಂಖ್ಯೆಯಲ್ಲಿ ಕುಲಗಳ ಹೆಸರು ದೊರಕುವುದಕ್ಕೆ ಕಾರಣ ಊಳಿಗಮಾನ್ಯ ಕಾಲದಲ್ಲಿ ಉಳಿದು ಬಂದ ಬುಡಕಟ್ಟು ಸಂಸ್ಕೃತಿಯೇ.

ನಮೂದಿಸಲಾದ ಕುಲಗಳಲ್ಲಿ ಹೊಲೆಯ ಮಾದಿಗ ಜಾತಿಗೆ ಸೇರಿದುವೂ ಇದ್ದಿರುವುದು ಸಹಜ. ನಮಗೆ ಜಾತಿಗಳ ಬಗ್ಗೆ ತಿಳಿದಿರುವಂತೆ ಕುಲಗಳ ಬಗ್ಗೆ ಎಳ್ಳಷ್ಟೂ ತಿಳಿಯದು. ಕುಲಗಳ ಬಗ್ಗೆ ಸರಿಯಾಗಿ ಗೊತ್ತಾಗದೇ ಜಾತಿಗಳ ಬಗ್ಗೆ ಬರೆಯುವುದು ಕಷ್ಟ. ವೀರಶೈವ ಚಳುವಳಿ ಜಾತಿ ಸಮಾಜ ವ್ಯವಸ್ಥೆಯನ್ನು ಕಿತ್ತು ಹಾಕಿ ಕುಲಸಮಾಜವ್ಯವಸ್ಥೆಯ ಪರ್ಯಾಯವನ್ನು ಹೇಳುವುದು, ಬುದ್ಧ 'ಸಂಘ' ಸಮಾಜವನ್ನು ಹೇಳಿದ್ದಕ್ಕೆ ಸಂವಾದಿಯಾಗಿದೆ. ಇಬ್ಬರ ಪ್ರಯತ್ನವೂ ಅಸಾಧ್ಯವಿತ್ತು. ಜಾತಿಗೆ ಪ್ರತಿಯಾಗಿ 'ಭವಿಕುಲ–ಭಕ್ತಕುಲ' ಪರಿಕಲ್ಪನೆ ಶರಣರಲ್ಲಿದೆ.

'೧೮ ಜಾತಿ, ೧೦೧ ಕುಲ'ಗಳ ಪ್ರಸ್ತಾಪ ಕೆಲವು ಶಾಸನಗಳಲ್ಲಿದೆ (ಉದಾ: Ec ೪. ೫–೧)

**ಮಾತಂಗೇಶ್ವರ :**

ಕರ್ನಾಟಕದ ಶೈವ ಸಂಸ್ಕೃತಿ ಪರಂಪರೆಯ ಪ್ರಮುಖ ವೈಶಿಷ್ಟ್ಯವೆಂದರೆ ಜಾತಿ, ಮತ ಭೇದವಿಲ್ಲದಂತೆ, ಯಾರಾದರೂ ತಮ್ಮ ಹೆಸರಿನಿಂದ; ಸಂಬಂಧಿಕರ; ಕುಲದ, ವೃತ್ತಿಗಳ, ಊರ ಹೆಸರಿನಿಂದ 'ಈಶ್ವರ' ಲಿಂಗವನ್ನು ಸ್ಥಾಪಿಸಲು ಸಾಧ್ಯವಿದ್ದುದು. ಇಂಥ ಈಶ್ವರ ದೇಗುಲಗಳಿಗೆ ದಾನ ದತ್ತಿ ನೀಡಿ ಕೆಲಸಲ ಅದರ ಜತೆ ಮಠಗಳನ್ನು ಸ್ಥಾಪಿಸಿ, ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಡಲಾಗುತ್ತಿತ್ತು. ಈ ದೇಗುಲಗಳು ಎಷ್ಟೋ ಕಡೆ ಕಾಳಾಮುಖ ಸನ್ಯಾಸಿಗಳ ನೈಷ್ಠಿಕ ಸ್ಥಾನವಾಗುತ್ತಿದ್ದವು. ಇದೇ ದೇಗುಲಗಳಲ್ಲಿ ಪ್ರಾಚೀನ ಶಾಕ್ತ ತಾಂತ್ರಿಕ ಪಂಥದ ಹಿನ್ನೆಲೆಯಿದ್ದುದರಿಂದ, ಸೂಳೆಯರನ್ನು ರಂಗಭೋಗಕ್ಕೆ ಬಿಡಲಾಗುತ್ತಿತ್ತು. ಹೀಗಾಗಿ ಈ ನೈಷ್ಠಿಕ ಸನ್ಯಾಸಿಗಳು ಕೆಟ್ಟು ಮೂರಾಬಟ್ಟೆಯಾಗುತ್ತಿದ್ದರು. ಇದು ಬೇರೆ ವಿಷಯ. ಈ ಮಠಗಳು ಅಗ್ರಹಾರಗಳಂತೆ ಫ್ಯೂಡಲ್ ಸಮಾಜದ ಪ್ರಮುಖ ಶೋಷಕ ಕೇಂದ್ರಗಳಾದವು ಎಂಬುದು ಮುಖ್ಯ.

ಆರ್ಥಿಕವಾಗಿ ದುರ್ಬಲರಾಗಿದ್ದ ದಲಿತರು ಈಶ್ವರ ದೇಗುಲ ನಿರ್ಮಿಸುವ ಸಾಧ್ಯತೆಯಿರಲಿಲ್ಲ. ಆದರೂ ಹಿಂದೆ ಇಂಥ ಕೆಲವು ನಿದರ್ಶನಗಳನ್ನು ನೋಡಿದ್ದೇವೆ. ಇತರ ಶೋಷಿತ ಜಾತಿ–ಕುಲ ಜನಸಮುದಾಯ ಕಟ್ಟಿಸಿರುವಂತೆ ಹೊಲೆಯ–ಮಾದಗರೂ ಈಶ್ವರ ದೇಗುಲ ನಿರ್ಮಿಸುತ್ತಿದ್ದರೆಂಬುದಕ್ಕೆ ನಿದರ್ಶನವಿದೆ. ನನ್ನ ಗಮನಕ್ಕೆ ಬಂದಿರುವ "ಮಾತಂಗೇಶ್ವರ" (ಎಸ್.ಐ.ಐ XI I & II ಪು. ೨೧೧) ಇಂಥ ಅಪರೂಪದ ಸಾಕ್ಷ್ಯಾಧಾರ. ಇಂಥ ಇನ್ನೂ ಹಲವು ನಿದರ್ಶನಗಳಿರುವ ಸಾಧ್ಯತೆಯಿದೆ.

೧೧೧೩ ರ ರೋಣ ತಾಲೂಕಿನ ಅಬ್ಬಿಗೇರಿ ಶಾಸನದಲ್ಲಿ ದಾನ ಬಿಟ್ಟ ಪ್ರದೇಶದ ಗಡಿ ಮೇರೆ ಹೇಳುವಾಗ "ಮಾತಂಗೇಶ್ವರ ದೇವರ ತೋಟ"ದ ಉಲ್ಲೇಖವಿದೆ. ತೆಲ್ಲಿಗರು ತೆಲ್ಲಿಗೇಶ್ವರ (ಎಸ್.ಐ.ಐ. IX-I– ಪು. ೩೫೭; Ec VII ಪು. ೧೧); ನಕರರು, ನಕರೇಶ್ವರ (ಎಸ್.ಐ.ಐ. IX-I– ಪು. ೪೦೪)ಗವರೆಗಳು, ಗವರೇಶ್ವರ; ದೇವದಾಸಿಗಳ ಮಕ್ಕಳು ವಿದುರೇಶ್ವರ (ಕ್ರಿ.ಶ. ೧೧೨೪. ಎಸ್.ಐ.ಐ. XI ಪು. ೨೫೩) ಮೊದಲಾದ ಈಶ್ವರ ದೇಗುಲಗಳನ್ನು ನಿರ್ಮಿಸುತ್ತಿದ್ದಂತೆ ಇಲ್ಲಿ ಮಾತಂಗರು (ಮಾದಿಗರು) ತಮ್ಮ ಕುಲದ ಹೆಸರಿನಿಂದ ಮಾತಂಗೇಶ್ವರ ಗುಡಿ ನಿರ್ಮಿಸಿದ್ದು ಸ್ಪಷ್ಟ. ಮಾದಯ್ಯನು ಮಾದೇಶ್ವರ ದೇಗುಲ (ಎಸ್.ಐ.ಐ. XI–ಪು. ೧೪೧), ಅಣ್ಣಿಯ ಕುಲಗೌಡರು ಅಣ್ಣಬೇಶ್ವರ (Ec. ೯ ಪು. ೪೬೯), ಪಲ್ಲಾದಿತ್ಯ–ಪೊಲ್ಲೇಶ್ವರ (Ec.೮ ಪು. ೧೯೭), ಕೊಮ್ಮೆಯರ ಕುಲದವರು ಕೊಮ್ಮೇಶ್ವರ (Ec ೭ ಪು. ೧೭೩) ಧಮ್ಮಗವುಡ ದಮ್ಮೇಶ್ವರ (Ec. ೬–ಪು. ೫೧), ಉಗುರ ಮುನ್ನೂರ್ವರು ಉಗುರೇಶ್ವರ (ಧಾ.ತಾ.ಶಾ. ಪು. ೯೬), ದೇಮರಸನು ದೇಮೇಶ್ವರ (ಎಸ್.ಐ.ಐ. IX.I ೯೪ ಪು.), ಬಾಣಾಸುರನು ಬಾಣೇಶ್ವರ (ಅದೇ ಪು. ೧೧೦), ನೊಳಂಬರು ನೊಳಂಬೇಶ್ವರ (ಅದೇ ೧೮೩) ಮುಂತಾಗಿ ಈಶ್ವರ ದೇಗುಲಗಳನ್ನು ನಿರ್ಮಿಸಿದ್ದು ಇತರ ಉದಾಹರಣೆಗಳು.

ಈ ಅವೈದಿಕ ಪದ್ಧತಿ ತುಂಬ ವ್ಯಾಪಕವಾಗಿತ್ತು. ಇದು ಮುಂದೆ ಪ್ರಭು, ರಾಜ, ಗೌಡ, ಮೊದಲಾದ ಶೋಷಕರು ತಮ್ಮ, ತಮ್ಮ ಸಂಬಂಧಿಕರ ಹೆಸರುಗಳನ್ನು ಊರು, ಕೆರೆಗಳಿಗೆ ಇಡುವಂತೆ ಪ್ರಭಾವ ಬೀರಿತು. ಗ್ರಾಮಗಳ ಮೊದಲ ಹೆಸರನ್ನು ತೆಗೆದುಹಾಕಿ ತಮ್ಮ ಹೆಸರಿಟ್ಟು ಅಗ್ರಹಾರ ಮಾಡಿ ಬ್ರಾಹ್ಮಣರಿಗೆ ದಾನ ನೀಡುವ ಪದ್ಧತಿಯಾಗಿ ಇದು ಹಿಗ್ಗಿತು.

**ತೆರಿಗೆ – ಹೊರಿಗೆ :**

ಹೊಲೆಯ–ಮಾದಿಗರಾದಿಯಾಗಿ ಎಲ್ಲ ಶ್ರಮಿಕ ಜನಕುಲಗಳು ನಾನಾ ಬಗೆಯ ತೆರಿಗೆ, ಸುಂಕ, ಕಂದಾಯಗಳನ್ನು ನೀಡಬೇಕಾಗುತ್ತಿತ್ತಲ್ಲದೆ ಬಿಟ್ಟಿ ಕೆಲಸವನ್ನು ಮಾಡಬೇಕಿತ್ತು. ಅವರು ಇರುವ ಮನೆ, ಸಾಕಿದ ದನ–ಕರು, ಕುರಿ ಕೋಳಿ, ಹಾಕುವ ತಿಪ್ಪೆ, ಮಾಡುವ ಕೆಲಸ, ಕೆಲಸದ ಸಾಧನ ಸಲಕರಣೆಗಳು, ಉಡುವ–ತೊಡುವ ಬಟ್ಟೆ ಆಭರಣ, ಹಚ್ಚುವ ನಾಮ ವಿಭೂತಿ, ಬಳಸುವ ನೀರು ಕಾಡುಕಟ್ಟಿಗೆ ಇವೆಲ್ಲಕ್ಕೂ ಸುಂಕ ತೆರಿಗೆ ನೀಡಬೇಕಾಗುತ್ತಿತ್ತು. ಇವುಗಳ ಪ್ರಮಾಣ ಇಷ್ಟೇ ಎಂದು ಖಚಿತವಾಗಿ ಹೇಳುವಂತಿರಲಿಲ್ಲ. ಪ್ರದೇಶಕ್ಕನುಗುಣವಾಗಿ ಇವುಗಳಲ್ಲಿ ವ್ಯತ್ಯಾಸವೂ ಆಗಬಹುದಿತ್ತು ಊಳಿಗಮಾನ್ಯ ಕಾಲದ ಪ್ರಧಾನ ಸುಲಿಗೆಯೇ ಸುಂಕ, ತೆರಿಗೆ, ಬಿಟ್ಟಿಗಳಾಗಿದ್ದವು.

ಹೊಲೆಯ–ಮಾದಿಗರು ನೀಡಬೇಕಿದ್ದ ತೆರಿಗೆ ಸುಂಕಗಳ ಬಗ್ಗೆ ಸ್ವಲ್ಪ ಮಟ್ಟಿಗೆ ತಿಳಿದು ಬಂದಿದ್ದರೂ ಪ್ರತ್ಯೇಕವಾಗಿ ಅವರು ಮಾತ್ರ ಮಾಡುತ್ತಿದ್ದ ಬಿಟ್ಟಿಯ ಸ್ವರೂಪ, ತೆರುತ್ತಿದ್ದ ತೆರಿಗೆಗಳ ಬಗ್ಗೆ (ಮಾದಾರಿಕೆ, ಹೊಲೆದೆರೆ, ಹೊಲೆಮಗ್ಗ) ಹೆಚ್ಚು ತಿಳಿಯುತ್ತಿಲ್ಲ. ಈ ಹಿಂದೆ ನೋಡಿರುವಂತೆ ಸುಲಿಗೆಯ ವಿಷಯದಲ್ಲಿ ಶ್ರಮಿಕರೆಲ್ಲರ ಮೇಲೆ ಸಾಮಾನ್ಯ ಕ್ರಮವಿರುತ್ತಿತ್ತು.

ಈ ಹಿನ್ನೆಲೆಯಲ್ಲಿ ಒಂದು ವಿಶೇಷ ನಿದರ್ಶನವನ್ನು ನೋಡಬಹುದು.

ವಿಜಯನಗರದ ಅಳಿಯ ರಾಮರಾಜದೇವ ಮಹಾರಾಜ ತನ್ನ ನಾವಿದರಾದ ಬದ್ರೋಜ, ತಿಮ್ಮೋಜ, ಕಂಡೋಜರ ಸೇವೆಗೆ ಮೆಚ್ಚಿ ಇಡೀ ರಾಜ್ಯದ ನಾಯಿಂದರೆಲ್ಲರಿಗೂ ತೆರಿಗೆ, ಸುಂಕ, ಬಿಟ್ಟಿಗಳನ್ನು ಮಾಫ (ಮಾನ್ಯ) ಮಾಡುವ ಆಜ್ಞೆ ಹೊರಡಿಸುತ್ತಾನೆ. ವಿಜಯನಗರ ಸಾಮ್ರಾಜ್ಯದ, ಆ ಕಾಲದ ಇಡೀ ಕ್ಷೌರಿಕ ಕುಲ ಬದ್ರೋಜ, ತಿಮ್ಮೋಜ, ಕಂಡೋಜರಿಗೆ ಎಷ್ಟು ಕೃತಜ್ಞರಾದರೂ ಸಾಲದಿತ್ತು.

ಸಾಮ್ರಾಜ್ಯದ ಅನೇಕ ಕಡೆ ಈ ನಾಯಿಂದರ ಶಾಸನಗಳು ಸಿಕ್ಕುತ್ತವೆ. ಬೇರೆ ಬೇರೆ ಪ್ರದೇಶಗಳ ನಾಯಿಂದರಿಗೆ ಯಾವ ಯಾವ ತೆರಿಗೆಗಳಿದ್ದವು ಎಂಬುದನ್ನು ನೋಡಿದರೆ ಒಟ್ಟು ಶ್ರಮಿಕರಿಗೆ ಇರುತ್ತಿದ್ದ ತೆರಿಗೆಗಳ ಸ್ವರೂಪವನ್ನು ಊಹಿಸಲು ಸಾಧ್ಯವಾಗುತ್ತದೆ.

ಕೂಡ್ಲಿಗಿ ತಾಲೂಕು ಕೊಟ್ಟೂರು ಸೀಮೆ ಕ್ಷೌರಿಕರು (SII.IX-II ಪು. ೬೩೧) 'ತೆಜಿಗೆ, ಕಂಡಾಯ, ಬಿಟಿ, ಕೊಟಣ'ಗಳಿಗೆ ಸಂಬಂಧಿಸಿದ್ದರೆ ಬಾಗಳಿಯ ನಾಯಿಂದರು, "ಕಾಣಿಕೆ, ಕಡಾಯ, ಬಿಟಿ, ಕೊಟಣ.... ಬ ತೆರೆ ಲಿಂಗದೆರೆ"ಗಳನ್ನು ನೀಡಬೇಕಿತ್ತು. ಇಲ್ಲಿಯ ನಾಯಿಂದರು ಲಿಂಗಾಯತ ಮತದವರಾಗಿದ್ದರಿಂದ ಅವರು ಕಟ್ಟಿಕೊಂಡಿದ್ದ ಲಿಂಗಗಳಿಗೆ ತೆರಿಗೆ ಹಾಕುತ್ತಿದ್ದರು. ಇದು ಇತರೆಡೆಯ ನಾಯಿಂದರಿಗೆ ಇರಲಿಲ್ಲ. ಗೂಟಿ ತಾಲೂಕು ಕಸವಪುರಂ ಶಾಸನದ ಪ್ರಕಾರ (ಅದೇ ಪು. ೬೨೯. ಕ್ರಿ.ಶ. ೧೫೪೭) ತೆರಿಗೆ ಹೊರಿಗೆ ಕಾಣಿಕೆ ಕಪ್ಪ ಬಿಟ್ಟಿ ಬಿರಾಡಗಳಿದ್ದವು. ಬಳ್ಳಾರಿ ತಾಲೂಕು ಎಲ್ಪಿಯಲ್ಲಿ (ಅದೇ ಪು. ೬೧೫. ಕ್ರಿ.ಶ. ೧೫೪೪) 'ನಾಯಿಂದ ಓಜಗಳು,' "ತೆರುತ್ತಿದ್ದುದು ಗ್ರಾಮದ ಕಟ್ಟು, ಸಿದ್ಧಾಯ, ತೆರಿಗೆ, ಬಿಟ್ಟು ಬಿರಾಡ ಅನ್ನು ಪನ್ನು ಇತ್ಯಾದಿ". ಮುದುಡಿಯ ಶಾಸನದಲ್ಲಿ (ಕ್ರಿ.ಶ.೧೫೪೪) ಸಿದ್ಧಾಯ, ಕಟ್ಟಳೆ ಸರ್ವಮಾನ್ಯ ಎಂದಿದ್ದರೆ, ಅಮರಾಪುರಂ ಶಾಸನದಲ್ಲಿ (೧೫೪೪) ತೆರೆ, ಕಾಣಿಕೆ, ಬಿಟ್ಟಿ ಇತ್ಯಾದಿ ಎಂದಿದೆ. (ಪು. ೬೧೯) ಅಮ್ಮಿನ ಬಾವಿಯಲ್ಲಿ (ಧಾ.ತಾ.ಶಾ.ಪು. ೧೯). 'ನಾಯಿಂದರ ತೆರಿಗೆ ಅನೀಕ ಅಕಾಲ ಚಕ್ರ ಬಿಟಿ ಬೇಗಾ....."ಗಳಿದ್ದವು. ಕುಕನೂರಿನಲ್ಲಿ (ಕ.ವಿ.ವಿ.ಶಾ.ಸಂ. ಕೊಪ್ಪಳ ಕ್ರಿ.ಶ. ೧೫೪೭) ಅನ್ನು ಪನ್ನು ಬಿಟ್ಟಿ ಬಿರಾಡ ಸಿದಾಯ ಸೇಸೆ ಇತ್ಯಾದಿಗಳಿದ್ದವು. ಹಿರೇಕೆರೂರ ಗಡ್ಡದ ಕೆಲಸಿಗಳಿಗೆ (KI IV ಪು. ೬೯)ತೆರಿಗೆ,

ಸಿದ್ಧಾಯ, ಮನೆವಣ, ಕಾಣಿಕೆ, ಕಡ್ಡಾಯ, ಮದುವೆಯ ಸುಂಕ, ಮಹನವಮಿಯ ಆಳು ಆ ಕಾಲಚಕ್ರ ಮುಂತಾಗಿ ಇದ್ದವು.

ಕ್ಷೌರಿಕಂತೆ ಬೆಸ್ತ ಬೋವುಗಳಿಗೆ ತೆರಿಗೆ, ಹೊರಿಗೆ, ಕ್ರಯ, ಸಿದ್ಧಾಯ, ಬಿಟ್ಟಿ ಬಿರಾಡಗಳಿದ್ದು, ಅವರ ಕೋಳಿ ಹಂದಿಗಳನ್ನು ಅಧಿಕಾರಿಗಳು ದೌರ್ಜನ್ಯದಿಂದ ಹಿಡಿದೊಯ್ಯುತ್ತಿದ್ದ ವಿಷಯ ಒಂದು ಶಾಸನದಲ್ಲಿದೆ. (ಎಸ್.ಐ.ಐ. IX-II ಪು. ೬೨೯)

ಕರಕುಶಲಕರ್ಮಿಗಳಲ್ಲಿ ಹೊಲೆಯರು, ಮಾದಿಗರು ಸಾಮಾಜಿಕವಾಗಿ, ಆರ್ಥಿಕವಾಗಿ, ಹೀನಾಯ ಸ್ಥಿತಿಯಲ್ಲಿದ್ದರೆಂಬುದು ನಿಸ್ಸಂದೇಹ. ಬಡಿಗ, ಕಮ್ಮಾರ, ತೆಲ್ಲಿಗ, ಕುಂಬಾರ ಮೊದಲಾದ ಸವರ್ಣೀಯ ಕರಕುಶಲಿಗಳು ಅನೇಕ ಸಲ ಶ್ರೀಮಂತರಾಗಿರುತ್ತಿದ್ದರು. ಎಣ್ಣೆ ವ್ಯಾಪಾರ, ಎಲೆ ವ್ಯವಹಾರದ ಜನಕುಲಗಳು ಅನೇಕ ಕಡೆ ತಮ್ಮ ಹೆಸರುಗಳ ಈಶ್ವರ ದೇಗುಲಗಳನ್ನು ಕಟ್ಟಿಸಿದ್ದಾರೆ. ನಾವಿದ ದೋರ, ದೋರೇಶ್ವರ ದೇಗುಲ ಕಟ್ಟಿಸಿದ್ದು ಇಂಥ ಅಪರೂಪದ ನಿದರ್ಶನ. ಬಡಗಿ ಕಮ್ಮಾರರಿಂದ ಮಾಡಿಸಿದ ಕೆಲಸಗಳಿಗೆ ಪ್ರತಿಯಾಗಿ ಕುದುರೆ, ಸತ್ತಿಗೆ, ಭೂಮಿಗಳನ್ನು ಕೊಟ್ಟ ವಿಶೇಷ ದಾಖಲೆಯೊಂದಿದೆ. (Ec. XVII ಕೋಲಾರ ಜಿಲ್ಲೆ ತೇಕಲ್ಲು. ಪು. ೩೮) ಇಂಥ ಯಾವ ಉದಾಹರಣೆಗಳು ದಲಿತರ ಜೀವನದಲ್ಲಿಲ್ಲ. ಎಷ್ಟಿದ್ದರೂ ಕರಕುಶಲಿಗಳು ಶ್ರಮಿಕರಾಗಿ ನಾನಾ ಬಗೆಯ ಕಷ್ಟಗಳಿಗೆ ಸಿಲುಕುತ್ತಿದ್ದರು. ಬೇಲೂರಿನ ಒಂದೇ ಸಾಲಿನ ಒಂದು ಚಿಕ್ಕ ಶಾಸನ ಇಂಥ ಕಷ್ಟದ ಸ್ಥಿತಿಯನ್ನು ತಿಳಿಸುತ್ತದೆ. ಅದು ಬೇಲೂರು ಚನ್ನಕೇಶವ ದೇಗುಲದ ಕಲ್ಲು ತೊಲೆಯ ಮೇಲೆ ಇದೆ. (Ec. ೯. ೧೨ನೇ ಶ. ಪು. ೨೪)

"ಮೈಲೋಜನ ಮಾಚಯ ಹಲಗೆಯ ಕಡದು ತಂನ್ನ ತಂಗೆಯ ಕೊಂಡ". ಮಾಚಯ್ಯ ಕೆಲಸ ಪೂರ್ಣಗೊಳಿಸುವ ವರೆಗೆ ತನ್ನ ತಂಗಿಯನ್ನೇ ಒತ್ತೆಯಿಡಬೇಕಾಗಿ ಬಂದಿದೆ. ಆತ ತನ್ನ ಕೆಲಸ ಪೂರ್ಣ ಮಾಡಿ ಆಕೆಯ ಸೆರೆ ಬಿಡಿಸಿದನೆಂದು ಶಾಸನ ಹೇಳುತ್ತಿದೆ. ಪೂಜಾರಿಗಳು ದೇಗುಲದ ಪ್ರಸಾದವನ್ನೇ ಒತ್ತೆಯಿಡುತ್ತಿದ್ದ ಸ್ಥಿತಿ ಇರುವಾಗ ("ಇ ಹೊಂನನು ಪ್ರಸಾದದ ವೊತ್ತೆಗೆ ಕೊಟ್ಟು ಆ ವೊತ್ತೆಯ ಪ್ರಸಾದದ...."Ec. ೯. ಪು. ೩೭; "ಪ್ರಸಾದವನು ವೊತ್ತೆಯ ಹಿಡಿತಕ್ಕೆ". ಅದೇ ಪು. ೩೪ ಇತ್ಯಾದಿ) ಕೆಲಸಗಾರರ ಮನೆಯ ಜನರನ್ನು ಒತ್ತೆಯಿಟ್ಟುಕೊಂಡಿರದೆ ಬಿಟ್ಟೀತೆ ಅಂದಿನ ಶೋಷಕ ವರ್ಗ. ಇಂಥದರಲ್ಲಿ ದಲಿತರ ಸ್ಥಿತಿಯನ್ನು ಊಹಿಸಿಕೊಳ್ಳಬೇಕಷ್ಟೇ.

**ಸ್ತ್ರೀ ದೈವಗಳು :**

ದಲಿತ ಸಂಸ್ಕೃತಿಯ ಪ್ರಧಾನ ಭಾಗವಾಗಿರುವ ಸ್ತ್ರೀ ದೈವಗಳ ಬಗ್ಗೆ ಶಾಸನಗಳಲ್ಲಿ ಸಿಗುವ ಮಾಹಿತಿಯನ್ನು ಈಗ ನೋಡಬೇಕಿದೆ.

ಬೇಸಾಯ ವೃತ್ತಿ, ತಾಂತ್ರಿಕ ಪಂಥ, ಮಾತೃಪ್ರಧಾನ ಸಮಾಜ ವ್ಯವಸ್ಥೆ, ಸ್ತ್ರೀ ದೈವಗಳು ಇವೆಲ್ಲ ಪರಸ್ಪರ ಸಂಬಂಧವುಳ್ಳ ದಲಿತ ಸಂಸ್ಕೃತಿ ಘಟಕಗಳು. ಜಗತ್ತಿನ ಆದಿವಾಸಿ ಜನಕುಲಗಳ ಅಧ್ಯಯನ ಮಾಡಿರುವ ವಿದ್ವಾಂಸರು ಒಮ್ಮತಕ್ಕೆ ಬಂದಿರುವ ಸಂಗತಿ ಎಂದರೆ ನೆಲಸುಗಾರ ಬೇಸಾಯಗಾರರಿಗೂ ಮಾತೃ ವ್ಯವಸ್ಥೆ, ತಾಯಿಪಂಥಗಳಿಗು ಸಂಬಂಧವಿದೆ ಎಂದು.

ಇಂದು ನಮ್ಮ ನಾಡಿನಲ್ಲಿ ಗಂಡು ದೈವಗಳಿರುವಷ್ಟೇ ಸಂಖ್ಯೆಯಲ್ಲಿ ಹೆಣ್ಣು ದೈವಗಳೂ ಇವೆ. ಪ್ರತಿ ಗ್ರಾಮ, ನಗರಗಳಲ್ಲಿ ಒಂದಲ್ಲ ಹಲವು ಸ್ತ್ರೀ ದೈವಗಳು; ಅವುಗಳಿಗೆ ಸಂಬಂಧಿಸಿದ ವಿಧಿಯಾಚರಣೆ, ಹಬ್ಬ, ಉತ್ಸವ, ಜಾತ್ರೆಗಳು ಹಿಂದೊಮ್ಮೆ ಬೇಸಾಯಗಾರರಾಗಿದ್ದ ದಲಿತರ ಮಾತೃಮೂಲೀಯ ಸಮಾಜ ಮತ್ತು ಸಂಸ್ಕೃತಿಯನ್ನೇ ನಿವೇದಿಸುತ್ತವೆ.

ಊಳಿಗಮಾನ್ಯ ಸಮಾಜ ಪುರುಷ ಪ್ರಧಾನವಿದ್ದುದರಿಂದ ಕನ್ನಡ ನಾಡಿನಲ್ಲಿ ರಚನೆಗೊಂಡಿರುವ ಶಾಸನಗಳಲ್ಲಿ ಸ್ತ್ರೀ ದೈವಗಳ ಮಾಹಿತಿ ಸಿಗುವುದು ಕಷ್ಟವೇ. ಆದರೂ ಮುಖ್ಯವಾಗಿ ಬಳರಿ, ಭಗವತಿ, ಬಾದುಂಬೆ ಎಂಬ ದೈವಗಳ ಪ್ರಸ್ತಾವ ಹೆಚ್ಚಿಗಿವೆ. ಇವಾವೂ ಇಂದು ನಾಡಿನಲ್ಲಿ ಪ್ರಚಲಿತವಿಲ್ಲ. ಗ್ರಾಮೀಣ ನೆಲೆಯಲ್ಲಿ ಉತ್ತರ ಕರ್ನಾಟಕದಲ್ಲಿ ದ್ಯಾಮವ್ವ, ದುರುಗವ್ವ, ಎಲ್ಲಮ್ಮ; ಮಧ್ಯ ಕರ್ನಾಟಕದಲ್ಲಿ ಊರಮ್ಮ, ಉಚ್ಚಂಗೆಮ್ಮ, ಹುಲಿಗೆಮ್ಮ, ಉಡುಚಮ್ಮ; ದಕ್ಷಿಣ ಕರ್ನಾಟಕದಲ್ಲಿ ಮಾರೆಮ್ಮ, ಕೆಂಚಮ್ಮ, ಗಂಗಮ್ಮ, ಮೊದಲಾದ ದೈವಗಳು ಪ್ರಸಿದ್ಧವಿವೆ. ದ್ಯಾಮವ್ವ, ಊರಮ್ಮ, ಮಾರೆಮ್ಮ ದೈವಗಳ ಕತೆ, ಆಚರಣೆ, ಆಶಯಗಳಲ್ಲಿ ಹೋಲಿಕೆ ಇದೆ. ಈ ದೈವಗಳನ್ನೇ ಶಾಸನ ಪ್ರಪಂಚ 'ಭಗವತಿ' ಎಂದು ಶಿಷ್ಟೀಕರಿಸಿ ಹೇಳಿರುವಂತೆ ತೋರುತ್ತದೆ.

'ಬಳರಿ' ನಾನು ಬೇರೆಡೆ ಚರ್ಚಿಸಿರುವಂತೆ 'ದುರುಗಮ್ಮ'ನೇ. ಬಳ್ಳಾರಿ ದುರುಗಮ್ಮ ಈಗಲೂ ಪ್ರಸಿದ್ಧ ದೈವ. ಬಾದುಬ್ಬೆ ಮೊದಲಾದ ಸ್ತ್ರೀ ದೈವಗಳ ಕುರಿತು ಕೆಲವು ವಿದ್ವಾಂಸರು ಚರ್ಚಿಸಿದ್ದಾರೆ.

ಈ ಸಂದರ್ಭದಲ್ಲಿ ಆಂಧ್ರ ಪ್ರದೇಶದ ಗಡಿರಕ್ಷಣೆಯ ದೇವಿಯಾದ 'ಪೊಲೆರಮ್ಮ'ನ ಬಗ್ಗೆ ತಿಳಿಯಬೇಕಿದೆ. ಹೇನ್ರಿವೈಟ್‌ಹೆಡ್ ಈಕೆಯ ಬಗ್ಗೆ ಕೆಲವು ಮಾಹಿತಿ ನೀಡಿದ್ದಾರೆ. ಏಳು ಸ್ತ್ರೀ ದೈವಗಳಲ್ಲಿ (ಸಪ್ತ ಮಾತೃಕೆ) ಈಕೆ ಒಬ್ಬಳು.

ಹೆಸರೇ ಸೂಚಿಸುವಂತೆ ಈಕೆ ಹೊಲೆಯ ಸಂಸ್ಕೃತಿಗೆ ಸೇರಿದವಳು. ಆಂಧ್ರದಲ್ಲಿ ಹೊಲೆಯ ಎಂಬ ಪದವಿಲ್ಲ. ಹೊಲೆಯರಿಗೆ ಅಲ್ಲಿ ಮಾಲರು ಎನ್ನುತ್ತಾರೆ. ಕನ್ನಡ ಮೂಲದ 'ಪೊಲೇರಮ್ಮ' ಆಂಧ್ರದ ತಾಯಿದೈವವಾಗಿ ಉಳಿದಿರುವುದು ಹೇಗೆ? ಹಿಂದೆ ಆಂಧ್ರ, ಮಹಾರಾಷ್ಟ್ರದ ಎಷ್ಟೋ ಭಾಗಗಳು ಕನ್ನಡನಾಡಾಗಿದ್ದವು. ಹಾಗಾಗಿ ಪೊಲೇರಮ್ಮ ಆಂಧ್ರದಲ್ಲಿ ಉಳಿದಿರಬೇಕು. ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕಿನ ಲಕ್ಷ್ಮಿ ಪುರದಲ್ಲಿ ಹೊಲೇರಮ್ಮನನ್ನು ರಡ್ಡಿ ಜನ ಪೂಜಿಸುತ್ತಾರೆ. ತುಮಕೂರು ಜಿಲ್ಲೆ ಪಾವಗಡ ತಾಲೂಕಿನ ಗುಂಡಾರ್ಲಹಳ್ಳಿಯ ಗ್ರಾಮದೇವಿ ಪೊಲೇರಮ್ಮ. ಹೊಲೆಯ–ಮಾದಿಗರ ಸಂಸ್ಕೃತಿ ಮೆರೆಗೆ ಸಂದಿರುವಂತೆ ಸ್ತ್ರೀ ದೈವಗಳ ಹಬ್ಬ, ಆಚರಣೆ, ಜಾತ್ರೆಗಳೂ, ಲಿಖಿತ ಪರಂಪರೆಯಲ್ಲಿ ದಾಖಲಾಗುವುದು ಅಪರೂಪ.

**ಎಸ್.ಐ.ಐ. XI I & II :**

ಬಳ್ಳಾರಿ (೧೧೬), ಬಾದುಬ್ಬೆ (೧೧೬), (೧೧೫) ಬಳ್ಳಾರಿಯ ಮಾನ್ಯ (೧೧೬, ೮೩) ಗ್ರಾಮಾಧಿದೇವತೆ ಭಗವತಿ (೧೧೭), ಕೊಲ್ಲಾಪುರದ ದೇವಿಯ ಭಕ್ತರಾದ ಪಾಶುಪತರು (೭೬, ೭೯), ಕುಲದೈವ (೬೦), ಭಳರಿ (೨೧), ಮಾರೆಮ್ಮ (೫).

**ಎಸ್.ಐ.ಐ. XV :**

ಮಾರಿ (೧೩), ಕಾಳಿಕಬ್ಬೆ ಕೆಯ್ (೨೭), ಮಾತಂಗಿ ಉಡಿಚಮ್ಮ (೪೩೩), ಭಗವತಿಕೊಳ್ಳ (೧೧೩), ಬಳಾರಿ (೧೧೮), ಚಂಡಿಕಾದೇವಿ (೧೩೨), ಬಾದುಮೆ (೧೬೬), ಮಾರೀಚಾಸುರ ಪ್ರತಿಷ್ಟಿತಲಿಂಗ (೧೭೪), ೪೦೦ರ ಕುಲದೇವತೆ ಹಿರಿಯಕ್ಕ (೨೨೪), ಭಗವತಿ (೨೫೩ ೨೮೪) (೩೭೩), ಮಾರಿಕಬ್ಬೆ (೩೦೨), ದುರ್ಗಾಭಗವತಿ (೩೪೨), ದುರ್ಗಾಪರಮೇಶ್ವರಿ (೪೩೬).

**ಕ.ವಿ.ವಿ.ಶಾ.ಸಂ. ಕೊಪ್ಪಳ :**

ಕುಕ್ಕನೂರು ಶಕ್ತಿಪೀಠ, ಸಹಜಾಯೋಗಿನಿಯರು (೨೩೧), ಬಾದುಮೆ (೩೩೪), ಭಗವತಿ (೨೭೮), ಹೊಸೂರು ಮಹಾಮಾಯಿ (೧೩೫), ಬಳ್ಳಾರಿ (೧೭೭, ೧೭೫).

**ಕೆ. ಐ. II :**

ದುರ್ಗಾದೇವಿಯ ಮನೆ (No.೫), **ಕೆ.ಐ IV** : ಬಾದುಮೆ (೩೦), ಬಾದುಂಬೆ (೫೮), ಭಗವತೀ (೫೭, ೧೦೧, ೧೨೪) ಇ.ಸಿ.೯ : ಮಾರಿಯಕ್ಕ (೫೬), ಇ.ಸಿ. ೮: ಚೌಡೇಶ್ವರಿ ಭೂಮಿ (೩೦೮); ಇ.ಸಿ.೭ : ಭಳಾರಿ (೫೯), ಇ.ಸಿ. ೬ : ದೇವಿ ಜಾತ್ರೆ (೨೨), ದುರ್ಗಿ (೨೩೬), ಮಾರಿಗುಡಿ (೩೮೧); ಇ.ಸಿ. ೩ : ಕುಲದೇವರು (೪೯), ಕುಲಸ್ವಾಮಿ (೧೩೨), ಗ್ರಾಮದೇವತೆ (೧೩೭, ೩೯೯) ಇ.ಸಿ. ೨ : ಬಳರಿ ಬನ (೨೯೦, ೨೯೮, ೩೫೪, ಭಳಾರಿ). **ಎಸ್.ಐ.ಐ VII** : ದುರ್ಗಾ ಪರಮೇಶ್ವರಿ (೮೭, ೧೧೧, ೧೧೨, ೧೧೩) ಮಾರೆಮ್ಮ (೧೪೪) ಚಂಡಿಕಾ (೧೬೮, ೧೬೯), ಭಗವತಿ (೨೧೪), ಹಿಂಗುಳಾದೇವಿ (೨೩೯); **ಎಸ್.ಐ.ಐ IX-II** : ಚೌಡೇಶ್ವರಿ ಒಕ್ಕಲು (೬೩೮), ಬನದ ಚೌಡೇಶ್ವರಿ (೬೩೦), ಮೂಕಾಂಬಿಕಾ (೪೮೪, ೪೮೫), ಪೊಳಲದೇವಿ (೪೭೨), ಹಾದಿದೇವಿ (೪೬೯); ಧಾ.ತಾ.ಶಾ. ಮೂಲಸ್ಥಾನ, ಭಗವತಿ (೧೫೬ ೪೫); **ಎಸ್.ಐ.ಐ IX-I** ಬಳಾರಿ ಗೆಯಿ (೪೫), ಬನದ ಬಳಾರಿ (೬೯), ಮಾರಿ (೩೦೬, ೩೮೮) ಭಗವತಿ (೯೭, ೧೦೩, ೩೯೩, ೨೨೮, ೧೨೨, ೨೩೪, ೧೬೦, ೧೫೪, ೧೫೧, ೩೨೪); ಉಚ್ಚಂಗಿ (೧೦೮); ಬಾದುಂಬೆ (೧೫೯), ಹೊನ್ನದೇವಿ (೧೭೬), ತುಂಗಾಭದ್ರಾದೇವಿ (೧೯೦), ಬಾದುಬ್ಬೆ (೧೯೫, ೩೨೭, ೩೪೬) ಕಾಳಿ (೨೦೪). **ಎಸ್.ಐ.ಐ XX** : ಬಟಾರಿ, ದುರ್ಗಾಶಕ್ತಿ (೨), ಭಗವತಿ (೧೪೬, ೧೫೭, ೩೩೭) ಬಳಾರಿ (೧೪೭, ೧೭೯, ೩೪೫); ದುರ್ಗಾ (೨೪೮), ಚಂಡಲದೇವಿ (೩೭೩); **Ec VII, VIII**: ಬನದೇವತೆ (೩೦), **Ec XVII** : ಕೋಳಾಲದೇವಿ (೩), ದುರ್ಗಿ (೫೦), ಮಾರೆಮ್ಮ (೪೬), **Ec ೪** : ಭಗವತಿ (೩–೪೯), **ಕ.ವಿ.ವಿ.ಶಾ.ಸಂ. ಬಳ್ಳಾರಿ** : ಬಾದುಂಬೆ (೨೬), ಭಗವತಿ (೩೩, ೩೭, ೩೪೨, ೪೨೭), ದೇಕಮ್ಮನ ಗುಡಿ (೫೩), ಭಳಾರಿಗೆ ಭೂಮಿ (೧೧೬) ಮಹಾಮಾಯಿ (೧೫೫), ಬಳಾರಿ (೨೬೫, ೪೮೫), ಬಾದುಬ್ಬೆ (೬೨೦, ೩೧೦, ೩೯೧) **ಕೆ.ಐ. VI:** ಭಗವತಿ ಎಲ್ಲಮ್ಮ (೩೩), ಇತ್ಯಾದಿ,

ಈಶ್ವರ ದೇಗುಲಗಳ ಸ್ಥಾಪನೆಯ ಭರಾಟೆಯ ಆ ಕಾಲದಲ್ಲಿ, ಶಾಸನಗಳಲ್ಲಿ ಅಪರೂಪವೆಂಬಂತೆ ಸಿಗುವ ಈ ಸ್ತ್ರೀ ದೈವಗಳ ವ್ಯಾಪಕ ಪ್ರಸರಣವನ್ನು, ಪ್ರಭಾವವನ್ನು ಮುಚ್ಚಿಡಲು ಶಕ್ಯವಾಗಲಿಲ್ಲ. ಆದರೆ ಈ ಎಲ್ಲ ಸ್ತ್ರೀ ದೈವಗಳ ಸ್ಪಷ್ಟ ಸ್ವರೂಪ ತಿಳಿಯಬೇಕಾಗಿದೆ. "ಬಳರಿ ಹೊಲೆಯರ ದೇವತೆ; ಮಾರಿಮಸಣಿವಾಸಿನಿಯರೂ ಹೊಲೆಯರ ದೈವಗಳೇ" (ಎಂ. ಚಿದಾನಂದಮೂರ್ತಿ, ಪೂರ್ವೋಕ್ತ ಗ್ರಂಥ ಪು. ೫೩) ಇವು ಸ್ಥಳೀಯ ಗ್ರಾಮ ದೈವಗಳಾಗಿದ್ದವು. ಕೆಲವು ಹೆಚ್ಚು ವ್ಯಾಪ್ತಿ ಪಡೆದಿದ್ದವು. ಅರಸರು, ಮಾಂಡಳಿಕರು, ವ್ಯಾಪಾರಸ್ಥರು ಜನಕುಲಗಳ ಈ ದೈವಗಳನ್ನು ತಮ್ಮ ಕುಲದೈವಗಳೆಂದು ಸ್ಮರಿಸುವುದನ್ನು ಕಾಣುತ್ತೇವೆ.

ತಾಂತ್ರಿಕ ಪಂಥದ ಲಜ್ಜಾಗೌರಿಯ ಶಿಲ್ಪಕೃತಿಗಳನ್ನು ನಾಡಿನಲ್ಲಿ ಅಲ್ಲಲ್ಲಿ ಶೋಧಿಸಲಾಗಿದೆ. ಕಾವ್ಯ ಶಾಸ್ತ್ರಗಳಲ್ಲೂ ಸ್ತ್ರೀ ದೈವಗಳ ಅಷ್ಟಿಷ್ಟು ವಿವರಗಳು ಸಿಗುತ್ತವೆ.

ಇದೆಲ್ಲವೂ ದಲಿತರ ಸ್ತ್ರೀ ದೈವ ಪ್ರಧಾನ ಸಂಸ್ಕೃತಿ ಪ್ರಭಾವ ಗಾಢವಿದ್ದುದನ್ನೇ ನಿರೂಪಿಸುತ್ತದೆ.

**ಲಿಖಿತ ಪರಂಪರೆಯಲ್ಲಿ ದಲಿತರು :**

ಸಾವಿರ ವರ್ಷದ ಕನ್ನಡ ಕಾವ್ಯ, ಶಾಸ್ತ್ರ ಪರಂಪರೆ ದಲಿತರನ್ನು, ಅವರ ಸಂಸ್ಕೃತಿಯನ್ನು ಹೇಗೆ ಚಿತ್ರಿಸಿದೆ? ಬ್ರಾಹ್ಮಣ, ಶೈವ–ವೀರಶೈವ, ಜೈನ, ಲೇಖಕರು ಮಾತ್ರ ಬರೆಯುತ್ತ ಬಂದಿರುವುದರಿಂದ, ಅವರವರ ಮತೀಯ ದೃಷ್ಟಿಕೋನದಿಂದಲೇ ದಲಿತರನ್ನು ಗ್ರಹಿಸಿದ್ದಾರೆ.

ಚಳುವಳಿಯ ಕಾಲದ ವಚನಕಾರರಲ್ಲೂ ದಲಿತರ ಬಗ್ಗೆ ವೈರುದ್ಯಾತ್ಮಕ ನಿಲುವು ಕಾಣುತ್ತದೆ. ವೀರಶೈವರಾದ ದಲಿತರನ್ನು ಹೊಗಳುವ ಸವರ್ಣೀಯ ಶರಣರು, ವೀರಶೈವರಾಗದ ದಲಿತರನ್ನು ಸಾಂಪ್ರದಾಯಿಕ ಮನೋಭಾವದಿಂದಲೇ ಗ್ರಹಿಸಿದರು.

ದಲಿತರ ಬಗ್ಗೆ ಇದ್ದ ವಕ್ರಬುದ್ಧಿಯನ್ನು, ಹೊಲಸು ಮನೋಭಾವವನ್ನು, ವೀರಶೈವ ಪರಂಪರೆ ತೊಳೆದು ಹಾಕಲು ಸಾಕಷ್ಟು ಯತ್ನಿಸಿದೆ. ಉದಾಹರಣೆಗೆ: ಹರಿಹರನ ಮಾದರ ಚನ್ನಯ್ಯ. ಸಾಮವೇದಿ, ತಿರುನಾಳ್ವೋವರ ರಗಳೆಗಳನ್ನು, ಸಂಭೋಳಿನಾಗಿದೇವನ ಪ್ರಸಂಗ (ಬಸವರಾಜ ದೇವರ ರಗಳೆ), ಕೆಂಭಾವಿ ಭೋಗಣ್ಣನ ರಗಳೆಗಳನ್ನು ನೋಡಬಹುದು.

ಲಿಖಿತ ಸಾಹಿತ್ಯ ಪರಂಪರೆಗೆ ಕ್ರಾಂತಿಕಾರವಾದ ಹೊಸ ದಿಕ್ಕು ದೆಸೆ ನೀಡಿದ, ಹೆಚ್ಚು ಮಾನವೀಯ ಮತ್ತು ಜನಪರವಾಗುವಂತೆ ಯತ್ನಿಸಿದ ಶರಣರ ವಚನ ವಾಙ್ಮಯ ಮತ್ತು ನಂತರದ ವೀರಶೈವ ಸಾಹಿತ್ಯ ಆ ಕಾಲದ ಪ್ರಗತಿಪರ ಶಕ್ತಿಗಳ ಪ್ರತಿನಿಧಿ ಎಂಬಂತೆ ತೋರುತ್ತದೆ. ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಉರಿಲಿಂಗಪೆದ್ದಿ, ಕಾಳವ್ವ ಮೊದಲಾದ ದಲಿತ ಶರಣ ಶರಣೆಯರು ವೀರಶೈವ ಪರ ವಚನಗಳನ್ನು ಬರೆದು ಸಾವಿರ ವರ್ಷದ ಕನ್ನಡ ಸಾಹಿತ್ಯದಲ್ಲಿ ಅಪವಾದಾತ್ಮಕ ನಿದರ್ಶನಗಳಾದರು. ದುರಂತವೆಂದರೆ ಈ ಪರಂಪರೆ ಮುಂದುವರೆಯಲಾಗಲಿಲ್ಲ. ಆದರೆ ದಕ್ಷಿಣ ಕರ್ನಾಟಕದಲ್ಲಿ ಹೊಲೆಯ ಮತ್ತು ಮಾದಿಗ ಕುಲಗಳ ಮಂಟೇಸ್ವಾಮಿ ಮತ್ತು ಮಾದೇಶ್ವರರು ಈ ಪರಂಪರೆಯನ್ನು ಆ ಕಾಲಕ್ಕೆ ಅನುಗುಣವಾದ ಕ್ರಮದಲ್ಲಿ ಜೀವಂತವಿಟ್ಟರು. ಜನಪದ ಪರಂಪರೆಯಲ್ಲಿ ಇವರಿಬ್ಬರ ಮಹಾಕಾವ್ಯಗಳು ಸಿಕ್ಕವುದು ಅತ್ಯಂತ ಮಹತ್ವದ ಘಟನೆ. ಅದು ದೈವಿಕ ಪರಂಪರೆಯಾಗಿ ಕೆಳ ಜಾತಿ ಮತ್ತು ದಲಿತರ ಜೀವನದ, ಮತೀಯ ಭಾಗವಾಗಿ ಉಳಿದಿದೆ. ನೀಲಗಾರ ಮತ್ತು ದೇವರಗುಡ್ಡರೆಂಬ ಜನಪದ ಗುರುವರ್ಗದವರು ಈ ಮಹಾಕಾವ್ಯಗಳನ್ನು, ಈ ಪಂಥಗಳನ್ನು ಜೀವಂತವಿಟ್ಟಿದ್ದಾರೆ.

ಲಿಖಿತ ಪರಂಪರೆಗೆ ಪ್ರತಿಯಾಗಿ ಅಲಿಖಿತ ಮೌಖಿಕ ಪರಂಪರೆ ಇಡೀ ಕನ್ನಡ ಜನ ಸಮುದಾಯದಲ್ಲಿ ತನ್ನದೇ ಆದ ಅನನ್ಯ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬಂದಿದೆ. ದಲಿತ ಸಂಸ್ಕೃತಿಯ ನಿಜವಾದ ಚರಿತ್ರೆ ನಿಚ್ಚಳವಾಗಿ ಗೋಚರಿಸುವುದೇ ಇಲ್ಲಿ.

ಕಾವ್ಯ, ಶಾಸ್ತ್ರಾದಿಗಳಲ್ಲಿ ದಲಿತರು ಹೇಗೆ ಚಿತ್ರಿತರಾಗಿದ್ದಾರೆಂಬ ಮಾಹಿತಿಯನ್ನು ಡಾ.ಚಿದಾನಂದಮೂರ್ತಿಯವರು ತಮ್ಮ ಗ್ರಂಥದಲ್ಲಿ ("ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ"; ಪ್ರಸರಾಂಗ, ಕ.ವಿ.ವಿ. ಧಾರವಾಡ ೧೯೮೫) ನೀಡಿದ್ದಾರೆ. ಅಲ್ಲಿ ದಲಿತವಾದಿ ಕಣ್ಣೋಟವಿಲ್ಲ. ಅಲ್ಲಿ ಕೊಟ್ಟಿರುವ ವಿವರಗಳನ್ನು ಮತ್ತೆ ಇಲ್ಲಿ ಗಮನಿಸುವ ಅಗತ್ಯವಿಲ್ಲ.

**ಹೊಲೆಯ ೧೮ ಜಾತಿ :**

ನಾಲ್ಕು ವರ್ಣಗಳ ಬಗ್ಗೆ ಎಲ್ಲೊ ಕೆಲವು ಕಡೆ ಮಾತ್ರ ಉಲ್ಲೇಖಿಸುವ ಶಾಸನಗಳು ೧೮ ಜಾತಿಗಳನ್ನು ಕೆಲವು ಕಡೆ ೧೦೧ ಕುಲಗಳನ್ನು ಹೇಳುತ್ತವೆ. ನಾಲ್ಕು ವರ್ಣವಲ್ಲ, ೧೮ ಜಾತಿಗಳು ಇಲ್ಲಿ ಮುಖ್ಯವಾಗಿದ್ದವು. ಬ್ರಹ್ಮನ ತಲೆ, ಭುಜ, ತೊಡೆ, ಕಾಲುಗಳಿಂದ ೪ ವರ್ಣಗಳು ಹುಟ್ಟಿದುವೆಂಬ ವೈದಿಕರ ಪ್ರಖ್ಯಾತ ಹೇಳಿಕೆಗೆ ಅನುಗುಣವಾಗಿ ಸೊಡ್ಡಳ ಬಾಚರಸ, ಅಂಬಿಗರ ಚೌಡಯ್ಯರು ೧೮ ಜಾತಿಗಳು ತಮ್ಮ ದೇಹದಲ್ಲಿವೆ ಎಂದು ಹೇಳಿಕೊಳ್ಳುತ್ತಾರೆ. ಇಲ್ಲಿ ಹೊಲೆಯ ಒಳದೊಡೆ, ಸಮಗಾರ ಕಣಕಾಲು, ಮಚ್ಚಿಗ ಮೇಗಾಲು, ಮಾದಿಗ ಅಂಗಾಲು ಆಗಿದ್ದಾರಂತೆ. ಇವೆಲ್ಲ ಒತ್ತಟ್ಟಿರಲಿ ೧೮ ಜಾತಿಗಳ ಹೆಸರಂತೂ ಸಿಗುತ್ತವೆ. ಅವು ೧) ಬ್ರಾಹ್ಮಣ ೨) ಕ್ಷತ್ರಿಯ ೩) ಬಣಜಿಗ ೪) ಒಕ್ಕಲಿಗ ೫) ಗೊಲ್ಲ ೬) ಕುಂಬಾರ ೭) ಪಂಚಾಳ ೮) ಉಪ್ಪಾರ ೯) ನಾಯಿಂದ ೧೦) ಡೊಂಬ ೧೧) ಅಗಸ ೧೨) ಜೇಡ ೧೩) ಕಬ್ಬಿಲ ೧೪) ಹೊಲೆಯ ೧೫) ಈಳಿಗ ೧೬) ಸಮಗಾರ ೧೭) ಮಚ್ಚಿಗ ೧೮) ಶುದ್ಧ ಮಾದಿಗ.

ಕುತೂಹಲದ ಸಂಗತಿ ಎಂದರೆ ಚೌಡಯ್ಯನ ೧೮ ಜಾತಿಗಳ ಹೆಸರು ಕೆಲವೆಲ್ಲ ಬೇರೆ. ಎರಡೂ ಪಟ್ಟಿಯಲ್ಲಿ ವೀರಶೈವರೇ ಇಲ್ಲ! "ಇವರಲ್ಲೆಲ್ಲ ಬ್ರಾಹ್ಮಣ ವರ್ಣವೊಂದು ಮಾತ್ರ ವೇದ ಕಾಲದಿಂದ ಇಂದಿನ ವರೆಗೆ ತನ್ನ ಅನನ್ಯತೆಯನ್ನು ಒಂದು ಗುಂಪಾಗಿ ಉಳಿಸಿಕೊಂಡು ಬಂದಿದ್ದರೂ ಅವರೂ ತಮ್ಮ ವರ್ಣಧರ್ಮಕ್ಕೆ ಅನುಗುಣವಲ್ಲದ ವೃತ್ತಿಗಳನ್ನವಲಂಬಿಸಿದ್ದರು." (ಎಂ.ಚಿ. ಪೂರ್ವೋಕ್ತ ಪು. ೩೮)

ಬ್ರಾಹ್ಮಣ ಲೇಖಕರ ಪ್ರಕಾರ ಬ್ರಾಹ್ಮಣನೇ ಸರ್ವಶ್ರೇಷ್ಠನಾದರೆ, ವೀರಶೈವರ ಪ್ರಕಾರ ಬ್ರಾಹ್ಮಣನಿಗಿಂತ ವೀರಶೈವನೇ ಶ್ರೇಷ್ಠ, ಜೈನರು ತಾವೇ ಎಲ್ಲರಿಗಿಂತ ಮೇಲು ಎಂದರು. ಮೇಲ್ಜಾತಿ ಧರ್ಮಗಳ ನಡುವೆ ಈ ಪೈಪೋಟಿ ಚರಿತ್ರೆಯುದ್ದಕ್ಕೂ ಇದೆ. ಇದು ಬೇರೆ ವಿಷಯ. ಅವೈದಿಕರಾದ ಜೈನ, ವೀರಶೈವರು ೧೧–೧೨ ನೇ ಶತಮಾನದಲ್ಲಿ ದಲಿತರನ್ನು ತಮ್ಮ ಮತಗಳಿಗೆ ಆಕರ್ಷಿಸಲು ಯತ್ನಿಸಿದ್ದು ಮಾತ್ರ ಕುತೂಹಲದ ಸಂಗತಿ. ಪಂಪನ ತಂದೆ ಬ್ರಾಹ್ಮಣನಾದರೂ ಜೈನಧರ್ಮ ಸೇರಿರುವ, ಬಸವಣ್ಣ ಬ್ರಾಹ್ಮಣನಾದರು ವೀರಶೈವ ಮತಕ್ಕೆ ಸೇರಿ ಚಳುವಳಿಯ ನೇತಾರನಾದುದರ ನಿದರ್ಶನಗಳು ಬರಿ ಅಪವಾದಗಳಲ್ಲ. ಲೋಕಾಯತ, ಚಾರ್ವಾಕ, ತಾಂತ್ರಿಕರಾಗಿದ್ದ ಬ್ರಾಹ್ಮಣರು ಬ್ರಾಹ್ಮಣಕ್ಕೆ ವಿರುದ್ಧವಿದ್ದರು. ಇದು ದಲಿತಸಂಸ್ಕೃತಿಯ ಸಮೀಪಕ್ಕೆ ಬರುವ ಬ್ರಾಹ್ಮಣರ ಯತ್ನವಾದರೆ, ಪ್ರತಿಯಾಗಿ ದಲಿತರು ಬ್ರಾಹ್ಮಣರಾಗುವುದಕ್ಕೆ ಈ ರೀತಿ ಯತ್ನಿಸಿದ್ದು ಕಂಡು ಬರುವುದು ಅಪರೂಪ. ಮಾರೆಮ್ಮ ಅಥವಾ ಊರಮ್ಮನ ಪತಿಯಾದ ದಲಿತನ ಕತೆ, ಬರಿ ಕತೆಯಷ್ಟೇ.

**ಬಿನುಗು–ಬೆಸವಕ್ಕಳು :**

ಬೆಸವಕ್ಕಳು ಮತ್ತು ಬಿನುಗು ಪ್ರಜೆಗಳು ಎಂಬ ಫ್ಯೂಡಲ್ ಪರಿಭಾಷೆ ಶ್ರಮಿಕ, ಶೋಷಿತ ಜನಸಮುದಾಯವನ್ನು ಸೂಚಿಸುತ್ತವೆ. ಅನೇಕ ಶಾಸನಗಳಲ್ಲಿ ಇವು ಸುಂಕ, ತೆರಿಗೆ ಬಿಟ್ಟಿಗಳ ಸಂದರ್ಭದಲ್ಲಿಯೂ ಬರುತ್ತವೆ. ಗ್ರಾಮದಾನದಲ್ಲಿ ಇತರ ಆಸ್ತಿಗಳ ಜತೆ ಇವರೂ ಸೇರುತ್ತಿದ್ದರು. ಶ್ರಮಿಕರನ್ನು ಆಸ್ತಿಯ ಭಾಗವಾಗಿ ಕಾಣುವ ಅಮಾನವೀಯ ದೃಷ್ಟಿ ಊಳಿಗಮಾನ್ಯ ಶೋಷಕ ವರ್ಗಕ್ಕೆ ಸಾಮಾನ್ಯವಾಗಿತ್ತು. ಇವರಲ್ಲಿ ದಲಿತರೂ ಸೇರಿರುತ್ತಿದ್ದಿರಬೇಕು. ಮಧ್ಯಯುಗದ ವೈದಿಕ ವಾಙ್ಮಯ 'ಶೂದ್ರರು' ಎಂದು ಕರೆದಿರುವುದು ಇವರನ್ನೇ.

ಶಾಸನಗಳಲ್ಲಿ ಕೆಲವು ಸಲ ಬಿನುಗು ಬೆಸವಕ್ಕಳ ಜತೆ ಹೊಲೆಯ–ಮಾದಿಗರನ್ನು ಪ್ರತ್ಯೇಕವಾಗಿ ಸೂಚಿಸಿರಲಾಗುತ್ತದೆ. ಇಂಥಲ್ಲಿ ದಲಿತೇತರ ಬಡವರು ಕರಕುಶಲಿಗಳು ಬಿನುಗು ಬೆಸವಕ್ಕಳು. ಜೀತದಾರರು, ಜೀವಿತವರ್ಗ ಎಂದೂ ಕೆಲವು ಶಾಸನಗಳು ಹೇಳುವುದು ಶೋಷಿತವರ್ಗವನ್ನೇ.. ಇವರಲ್ಲೂ ದಲಿತರಿರಬಹುದಿತ್ತು. (**Ec** ೮. ಪು. ೩೧೭)

ನೇಕಾರ, ಬಡಿಗ, ಚರ್ಮಕಾರ ಮೊದಲಾದ ಕರಕುಶಲಿಗಳು ಋಗ್ವೇದದ ಕಾಲದಲ್ಲಿ ಕೀಳೆಂದಾಗಿರಲಿಲ್ಲ. ಪಾಲಿಗ್ರಂಥಗಳ ಕಾಲಕ್ಕೆ ಇವರೆಲ್ಲ ಕೀಳೆಂದು ಪರಿಗಣಿತರಾದರು. (ಶರ್ಮಾ)

'ಬೆಸವಕ್ಕಳ ಬೀರವಣ' ಎಂಬ ಸುಂಕದ ಹೆಸರು ತೊಣಚಿ (ಕ್ರಿ.ಶ. ೧೦೪೮. **Ec** ೬. ಪು. ೩೭) ಶಾಸನದಲ್ಲಿದೆ. "ಬಿನುಗುದೆರೆ" (ಸಿಂದಘಟ್ಟ ಕ್ರಿ.ಶ. ೧೧೭೯. **Ec** ೬ ಪು. ೭೨), "ಬಿನುಗುದೆರೆ ಮೊದಲಾದ ನಿಬಂಧಿ" (ಅದೇ ಪು. ೭೫), ಗದ್ದೆ, ಬೆದ್ದಲು ಮುಂತಾಗಿ ಸಕಲ ಸ್ವಾಮ್ಯ ಪಟ್ಟಿಯಲ್ಲಿ 'ಒಕ್ಕಲು ಮಕ್ಕಳು' (ಅದೇ ಪು. ೨೨೦ ಮೇಲುಕೋಟೆ ಕ್ರಿ.ಶ. ೧೫೬೪; ಮೇಲುಕೋಟೆ ೧೫೪೫ ಪು. ೨೨೨, ೧೫೩೦ ಮೇಲುಕೋಟೆ ಪು. ೨೨೨, ೧೪೫೮ ಮೇಲುಕೋಟೆ ೨೫೬) ಸೇರಿದ್ದವು.

ತ್ರಿಯಂಬಕಪುರ ೧೪೯೨ರ ಶಾಸನದಲ್ಲಿ ಸುಂಕ ತೆರಿಗೆಗಳ ಪಟ್ಟಿಯಲ್ಲಿ 'ಬಿನುಗು ಬೆಸವಕ್ಕಳು' ಸಕಲ ಸ್ವಾಮ್ಯದಲ್ಲಿ ಕಾಣುತ್ತೇವೆ. (Ec. ೩. ಪು. ೯೯). ೧೦ನೇ ಶತಮಾನದ ಇಗ್ಗಲಿ ಶಾಸನದಲ್ಲಿ (ಅದೇ ಪು. ೨೯೭) "ಇಲ್ಲಿಯ ಪುರದ ಒಕ್ಕಲಿಗರು, ಇಲ್ಲಿಯ ಬೆಸಮಕ್ಕಳಾರೆನ್ದೊಡೆ ಕಾಱ ಗೊಡೆಯನುಂ, ಕನಗಗಾವನುಂ, ಬಿಳಿಯಾಚಾರಿಯು ಕುಬಾಚಾರಿಯು ತೊರೆಯರಾಳ ಪಡಿಯನುಂ ಮುಡಿಯನುಂ ಎತಿಯನುಂ ಸನವಡಿಯನುಂ ಪರಿಯಟ್ಟರಾಳ ಕೊತ್ತಕ್ಕೆಯೂರ ಪೂರ್ವ್ವದ ಬೆಸಮಕ್ಕಳಾವರುಂ......" ಎಂದಿದೆ. ಇದರಲ್ಲಿ ಕೆಲವರಾದರೂ ದಲಿತರಿರಬೇಕು. ಯೀರೇದೇವನ ಪುರದ ೧೪೮೮ರ ಶಾಸನದ ಸುಂಕಗಳ ಪಟ್ಟಿಯಲ್ಲಿ "ಬಿನುಗು ಬೆಸ ಒಕ್ಕಲು" ಸೇರಿವೆ. (ಪು: ೩೪೮) ವೆಲ್ಲಮಡಗು ೧೫೨೫ರ ಶಾಸನದಲ್ಲಿ "ಚಿಲುವಾಂನ ಬಿನುಗುಗಳಿಗೆ ನಾನಾ ಜಾತಿಯ ವೊಕ್ಕಲುಗಳಿಗೆ" ವರುಷಕ್ಕೆ ಇಂತಿಷ್ಟು ಎಂದು ಸುಂಕ ಆಕರಣೆ ಹೇಳಿದೆ. (ಪು. ೫೩೧) ಕೀಳೊಕ್ಕಲು ೩೦ (ಎಸ್.ಐ.ಐ. IX-I ಕ್ರಿ.ಶ. ೧೩೭೯ ಪು. ೪೨೪, ೪೮) ('ಕೀಟೂಕ್ಕಲ್ ಪಸುಗೆಗೆ ಮೂವತ್ತು ಮತ್ತರು ಒಂದು ತೋಂಟಮುಮಾಗೆ'), 'ಕೀಳು ಹಳ್ಳಿ' (ಎಸ್.ಐ.ಐ. IX-II ೬೧೩ಪು.); ಚಿಲುವಾನ ಪ್ರಜೆ (Ec. ೪; ೧–೨೧೮) ಬಿನುಗುದೆರೆ (ಅದೇ ೧–೨೬೦) 'ಮಾದಾರಿಕೆ, ಬಿನುಗು ಬೆಸವಕ್ಕಳು' (ಅದೇ ೧–೩೦೧, ೩೭೨; ೨–೧೫, ೬೨; ೩–೭, ೬೨); ಬೆಸವಕ್ಕಳು (ಬ.ಜಿ.ಕ.ವಿ.ವಿ.ಶಾ.ಸಂ. ಪು. ೨೫೩); ಕೀಳೊಕ್ಕಲು (ಅದೇ ೨೭೨ ಪು.) ಚಿಲುವಾನ ಕಾಣಿಕೆ (Ec. ೮ ಪುಟ ೨೬, ೧೧೫, ೧೨೪); ಚಿಲುವಾನ ಸುಂಕ (ಅದೇ ಪು. ೨೧೫), ಶೂದ್ರ ಪಂಚಮ

(ಕ.ವಿ.ವಿ.ಶಾ.ಸಂ. ಕೊಪ್ಪಳ ಪು. ೩೬); ಬೆಸವಕ್ಕಳು (K.I.II. ಪು. ೩೭, K I IV ಪು. ೮೦) ಈ ಮೊದಲಾದ ಉದಾಹರಣೆಗಳನ್ನು ಗಮನಿಸಬಹುದು.

"ಬೆಸಮಕ್ಕಳ ಮೈ ಬೆವರಿನಿಂದ ಬೀದಿ ಕೆಸರಾಗಿದ್ದವು" ಎಂದು ನಂಜುಂಡ ರಾಮನಾಥ ಚರಿತೆಯಲ್ಲಿ ಹೇಳುತ್ತಾನೆ. ಇದು ಬೆಸವಕ್ಕಳ ದುಡಿಮೆಯ ಅತಿಶಯತೆಯನ್ನು ರೂಪಕವಾಗಿಸಿದೆ. ಬೆಸದಾಳು, ಬೆಸವಕ್ಕಳು ಒಂದೇ ಎನ್ನುವ ಚಿದಾನಂದಮೂರ್ತಿಯವರು "ಬೆಸದಾಳುಗಳು ತೊತ್ತು ಅಥವಾ ದಾಸರು (Slave) ಎಂಬಲ್ಲಿ ಅನುಮಾನ ಕಾಣಿಸದು" ಎಂದಿದ್ದಾರೆ. (ಪೂರ್ವೋಕ್ತ ಪು. ೬೧) ಆದರೆ ಇದು ಸರಿಯಲ್ಲ. ಶಾಸನಗಳು ನೀಡುವ ಮಾಹಿತಿಯಿಂದ ಕರಕುಶಲಕರ್ಮಿಗಳು, ಮತ್ತಿತರ ಸ್ವತಂತ್ರ ಕೂಲಿಕಾರರು, ಸಣ್ಣ ಹಿಡುವಳಿದಾರರು, ರೈತ ಕೂಲಿಕಾರರನ್ನು 'ಬೆಸವಕ್ಕಳು' ಎಂದು ಹೇಳುವುದು ಸೂಕ್ತವೆಂದು ತೋರುತ್ತದೆ. ಚಿದಾನಂದಮೂರ್ತಿಯವರು "ಮನೆಮಗ ಎಂಬುದು ದಾಸ ಅಥವಾ ತೊತ್ತನ್ನು ಹೇಳುತ್ತದೆ ಎಂಬಲ್ಲಿ ಅನುಮಾನವಿಲ್ಲ" (ಅದೇ ಪು. ೬೦) ಎಂದಿರುವುದೂ ಸೂಕ್ತವಲ್ಲ. ತೊತ್ತು ಬೇರೆ. ಮನೆಮಗ ಬೇರೆ, ತೊತ್ತನ್ನು ಮಾರುಕಟ್ಟೆಯಲ್ಲಿ ದನಕುರಿಗಳಂತೆ ಮಾರುತ್ತಿದ್ದರು. ಆದರೆ ಮನೆಮಗನನ್ನು ಹಾಗೆ ಮಾರುತ್ತಿದ್ದರೆಂಬುದಕ್ಕೆ ಆಧಾರಗಳೇ ಇಲ್ಲ. ಮಾನ್ಯರ ಮನೆಗಳಲ್ಲಿ ಕೆಲಸಕ್ಕೆ 'ಮಕ್ಕಳಂತೆ' ಇರುತ್ತಿದ್ದವರು 'ಮನೆಮಕ್ಕಳು'. ಇವರು ಮನೆ ಹೊಲೆಯ ಅಥವಾ ಮನೆಮಾದಿಗರೇ ಆಗಬೇಕೆಂದಿರಲಿಲ್ಲ. ಮನೆ ಮಾದಿಗ ಅಥವಾ ಮನೆ ಹೊಲೆಯರ ಸಂಬಂಧ ಇವರೆಲ್ಲರಿಗಿಂತ ಭಿನ್ನವೂ, ವಿಶೇಷ ಅರ್ಥವತ್ತಾದ ಪರಂಪರೆಯದೂ ಆಗಿತ್ತು. ಇದು ದಲಿತರು ಮೂಲದಲ್ಲಿ ಭೂಮಿಯ ಅಥವಾ ಹಳ್ಳಿಯ ಒಡೆಯರಾಗಿದ್ದರೆಂಬುದನ್ನು ಸೂಚಿಸುವಂಥದು. ಇದಕ್ಕೆ ಗಡ್ಡ ಮಂಡೆ ಪದ್ಧತಿಯನ್ನು ಉದಹರಿಸಬಹುದು. 'ಗಡ್ಡ ಮಂಡೆ ಪದ್ಧತಿ' ಎಂಬ ಲೇಖನದಲ್ಲಿ ಮ. ರಾಜಶೇಖರ ನಾರ್ವೆ (ಸಾಧನೆ ೯-೧) ಅವರು ಮಲೆನಾಡಿನ ಹರಿಜನ ಮತ್ತು ಈಗ ಜಮೀನುದಾರರಾಗಿರುವ ಗೌಡರ ಸಂಬಂಧದ ಬಗ್ಗೆ ಬರೆದಿದ್ದಾರೆ.

**ಒಂದು ಪದ್ಧತಿ :**

"ಮಲೆನಾಡಿನ ಹರಿಜನರು ಬಹು ಹಿಂದಿನಿಂದಲೂ ಸ್ವಾಮಿನಿಷ್ಠೆಗೆ ಹೆಸರಾಗಿದ್ದವರು. ಈ ಸಂಪ್ರದಾಯಕ್ಕೆ ಅನುಗುಣವಾದ ಒಂದು ಪದ್ಧತಿ ಬಹುಕಾಲದಿಂದಲೂ ಹರಿಜನ ಮತ್ತು ಊರಿನ ಗೌಡರಲ್ಲಿ ಬೆಳೆದು ಬಂದಿತ್ತು. ಊರಿನ ಗೌಡನಿಗೆ ತನ್ನ ಕೆಲಸಕ್ಕಾಗಿಯೇ ಕೆಲವು ಹರಿಜನರಿರುತ್ತಿದ್ದರು. ಅವರು ಊರಸ್ತರು. ಅವರು 'ತರಗು ಗುಡ್ಸಿ ಮನೆ ಕಟ್ಟಿದವರು' ಎಂದರೆ ಆ ಊರಿನ ಆರಂಭಗಾರರು ಎಂದು. ಗೌಡನ ಮನೆಗೆಂದೇ ಮೀಸಲಾದ ಇಂತಹ ಹರಿಜನ ಮನೆತನದವರನ್ನು 'ಹುಟ್ಟಾಳು ಹೊಲೆಯರು' ಎಂದೆನ್ನುತ್ತಿದ್ದರು. ಹುಟ್ಟಿನಿಂದಲೇ ಅವರು ಗೌಡನ ಮನೆಯ ಆಳಾಗುತ್ತಾರೆ. ಅವರು ಗೌಡನ ಮನೆಯ ಕಷ್ಟ ನಷ್ಟಗಳಲ್ಲಿ ಭಾಗಿಯಾಗುತ್ತಾ, ಗೌಡನ ಮನೆಯ ಶ್ರೇಯೋಭಿವೃದ್ಧಿಯತ್ತಲೇ ತಮ್ಮನ್ನು ಸವೆಯಿಸುತ್ತಾರೆ......." (ಪು. ೧೫೨)

ಮನೆ, ಹಳ್ಳಿಗಳ ಸ್ಥಾಪನೆಯ ಕಾಲದಲ್ಲಿ ದಲಿತರು ಆದಿಮ ಕಾಲದಲ್ಲಿ ಮಾಡುತ್ತಿದ್ದಿರ ಬಹುದಾದ ಆಚರಣೆಯನ್ನು ಈ ಮುಂದಿನ ಭಾಗ ವಿವರಿಸುವುದರಿಂದ ಇದನ್ನಿಲ್ಲಿ ಹೆಚ್ಚು ಉದ್ಧರಿಸುತ್ತಿದ್ದೇನೆ.

"ಗೌಡನ ಮನೆಯ ಒಕ್ಕಲು ಹಾಕುವ ದಿವಸ (ಎಂದರೆ ಗೃಹ ಪ್ರವೇಶದ ದಿವಸ) ಹುಟ್ಟಾಳು ಮುಖ್ಯನಾದವನಾಗಿರುತ್ತಾನೆ. ಹೊಸ ಮನೆಯ ನಾಲ್ಕು ಮೂಲೆಗಳಲ್ಲೂ ಕಪ್ಪು, ಬಿಳಿ ಮತ್ತು ಕೆಂಪು ಬಣ್ಣದ ಅನ್ನವನ್ನು ಇಕ್ಕಿ ಪೂಜಿಸುತ್ತಾನೆ. ಇದರ ಜತೆಗೆ ನಾಲ್ಕು ಮೂಲೆಗೂ ಕೋಳಿ, ಮುಂಬಾಗಿಲಿಗೆ ಒಂದು ಹುಂಜ ಇವುಗಳನ್ನು ಬಲಿಕೊಡುತ್ತಾನೆ. ಇದಕ್ಕೆ ;ರಕ್ತ ಬೋಜನ' ಎಂದೆನ್ನುತ್ತಾರೆ.

"ಮನೆಯ ಬಾಗಿಲಿನಲ್ಲಿ 'ರಾಪಾಗಿ' ಅನ್ನ ಸುರಿದಿರುತ್ತಾರೆ. ಅದರ ಮುಂದೆಯೇ 'ರಾಡಾ'ಗಿರುವ ಒಂದು ಬಾಳೆಯ ಕಂಬವನ್ನು ನೆಟ್ಟಿರುತ್ತಾರೆ. ಇದೇ ಬಲಿಕಂಬ: ಬಲಿಕಂಬವನ್ನು ಪೂಜಿಸಿದನಂತರ ಒಂದೊಂದೇ ಏಟಿಗೆ ತುಂಡಾಗುವಂತೆ ಮೂರು ಬಾರಿ ಬಾಳೆಕಂಬವನ್ನು ತುಂಡರಿಸಲಾಗುವುದು. ಬಲಿ ತೆಗೆಯಲು ಪೂಜಿಸಿದ ಅನ್ನ ಇತ್ಯಾದಿಗಳನ್ನು ಈತ ತೆಗೆದುಕೊಂಡು ಹೋಗಿ ಗೌಡನ ಯಾವುದಾದರೂ ಒಂದು ಗಣ್ಣಕ್ಕೆ (ಗದ್ದೆಗೆ) ಹಾಕಿಕೊಳ್ಳುತ್ತಾನೆ. ಈ ಗದ್ದೆಗೆ 'ಬಕರಿ ಗಣ್ಣ' ಎಂದು ಹೆಸರು. ಹೀಗೆ ಅನ್ನವನ್ನು ಹಾಕಿ 'ಬಕರಿ'ಯಾದ ಗದ್ದೆ ಅಂದಿನಿಂದಲೇ ಹುಟ್ಟಾಳುವಿನದಾಗುತ್ತದೆ. ಅದು ಆತನ ಮಕ್ಕಳು, ಮರಿಮಕ್ಕಳು, ಅನುಭವಿಸಲು ಬರುತ್ತದೆ. ಹಾಗೆ ಬಕರಿಯಾದ ಗದ್ದೆಯನ್ನು ಪುನಃ ತೆಗೆದುಕೊಳ್ಳುವ ನೈತಿಕ ಹಕ್ಕು ಗೌಡನಿಗೆ ಇರುವುದಿಲ್ಲ. ಮೇಲಾಗಿ ಹುಟ್ಟಾಳು ಅನ್ನ ಹಾಕಿಕೊಂಡ ಯಾವ ಗದ್ದೆಯನ್ನಾದರೂ ಗೌಡ, ಅವನಿಗೆ ಅದನ್ನು ಬಿಟ್ಟು ಕೊಡಲೇಬೇಕು. ಬಲಿ ತೆಗೆಯುವಾಗ ಬರಬಹುದಾದ ಸಂಕಷ್ಟಗಳನ್ನೆಲ್ಲಾ ಹುಟ್ಟಾಳು ಅನುಭವಿಸುವನಾದ್ದರಿಂದ ಆ ಜಮೀನನ್ನು ಆತನ ವಶಕ್ಕೆ ಬಿಟ್ಟು ಬಿಡಲಾಗುವುದು.

ದಲಿತರು, ಗೌಡರು ಬರುವ ಮೊದಲು ರೈತರಾಗಿದ್ದವರು. ಗೌಡರು ಪ್ರವೇಶಿಸಿದ ನಂತರ ಜಾತಿ ಶ್ರೇಣಿಕರಣದಿಂದಾಗಿ ಮನೆ, ಹೊಲ, ಕಳೆದುಕೊಳ್ಳಬೇಕಾಯಿತು. ಆದರೆ ವಿಧಿಯಾಚರಣೆಯ ಸಂದರ್ಭದಲ್ಲಾದರೂ ತಿರುಗಿ ಪಡೆದುಕೊಳ್ಳುವ ಮೂಲಕ ತಮ್ಮ ಆದಿಮ ಸಂಸ್ಕೃತಿ ಪಳೆಯುಳಿಕೆಯನ್ನು ಉಳಿಸಿಕೊಂಡಿದ್ದಾರೆ. ಬಕರಿಯಾದ ಗದ್ದೆಗೆ ಒಡೆಯರಾಗುವ ಅಂಶ ತುಂಬ ಮುಖ್ಯವಾದುದು.

"ಗೌಡ ಮಡಿದಾಗ ಹುಟ್ಟಾಳು ಮನೆ ಮಗನಿಗಿಂತಲೂ ಹೆಚ್ಚಾಗಿ ಸಂಸ್ಕಾರದಲ್ಲಿ ಭಾಗವಹಿಸುತ್ತಾನೆ. ಸಾವಿನ ದಿವಸ ಆತ ಗಡ್ಡೆ ಮಂಡೆಗಳನ್ನು ನುಣ್ಣಗೆ ಬೋಳಿಸಿಕೊಳ್ಳುತ್ತಾನೆ. ಇದಕ್ಕೆ 'ಗಡ್ಡ ಮಂಡೆ ತೆಗೆಯುವುದು' ಎಂದೆನ್ನುತ್ತಾರೆ. ಆದುದರಿಂದಲೇ ಇವರನ್ನು 'ಗಡ್ಡ ಮಂಡೆ ಒಕ್ಕಲು' ಎಂದು ಕರೆಯಲಾಗುತ್ತಿತ್ತು..... ಗೌಡರ ಮನೆಯವರು ಕೊಟ್ಟ ಹೊಸ ಬಟ್ಟೆಯನ್ನುಟ್ಟುಕೊಂಡು ಶವಕ್ಕೆ ನಮಸ್ಕಾರ ಮಾಡಿ ಹತ್ತಿರದಲ್ಲಿಯೇ ಇರುತ್ತಾನೆ. ಶವದ ಬಾಯಿಯಲ್ಲಿ ಎಲೆ ಅಡಿಕೆಯನ್ನು ಕುಟ್ಟಿ ಇಟ್ಟಿರುತ್ತಾರೆ. ಈ

ಬಯ್ದುಂಬುಲವನ್ನು ಶವದ ಬಾಯಿಯಿಂದ ತೆಗೆದು ಗಡ್ಡ ಮಂಡೆಗೆ ಕೊಡುತ್ತಾರೆ. ಆತ ಅದನ್ನು ಬಾಯಿಯಲ್ಲಿ ಹಾಕಿಕೊಂಡು ಹಾಗೆಯೇ ಹೋಗಿ ಗೌಡನ ಯಾವುದಾದರೂ ಒಂದು ಗಣ್ಣಕ್ಕೆ ಅಗಿದು ಉಗಿದು ಬಿಡುತ್ತಾನೆ. ಇಂತಹ ಗದ್ದೆಯನ್ನು 'ಗಡ್ಡ ಮಂಡೆ ಗಣ್ಣ' ಎನ್ನುವರು. ಇಂತಹ ಗಣ್ಣವನ್ನು ಗೌಡ ಹಿಂತೆಗೆದು ಕೊಳ್ಳಲಾಗದು." ಇತ್ಯಾದಿ.

ಲೇಖಕ ಹೇಳುವಂತೆ 'ಸ್ವಾಮಿನಿಷ್ಠೆ' 'ಶ್ರೇಯೊಭಿವೃದ್ಧಿ' 'ನಿಸ್ವಾರ್ಥ ಸೇವೆ' ಇವೆಲ್ಲ ಮುಖ್ಯವಲ್ಲ. ದಲಿತರಿಗೆ ಗೌಡರಿಂದ ಮತ್ತೆ ಭೂಮಿ ಮರಳುತ್ತಿರುವುದು ಮುಖ್ಯ, ಮನೆ ಹೊಸದಾಗಿ ನಿರ್ಮಾಣವಾಗುವಾಗ ನಡೆವ ದಲಿತರ ಪದ್ಧತಿ ಮುಖ್ಯ, ತರಗು ಗುಡ್ಸಿ ಮನೆ ಕಟ್ಟಿದ್ದು ಮುಖ್ಯ. ಐತಿಹಾಸಿಕ ಕಟು ವಾಸ್ತವಗಳು ಇಂದು ವಿಧಿಯಾಚರಣೆಯ ರೂಪದಲ್ಲಿರುವುದರ ವ್ಯಂಗ್ಯವನ್ನು ಗಮನಿಸಬೇಕು. ಈ ಹಿನ್ನೆಲೆಯಲ್ಲಿ ತೊತ್ತು, ಬೆಸವಕ್ಕಳು, ಬಿನುಗುಪ್ರಜೆಗಳ ಜತೆ ದಲಿತರನ್ನು ಹೋಲಿಸಲಿಕ್ಕಾಗದು. ದಲಿತ 'ಹುಟ್ಟಾಳು' ವಿಧಿಯಾಚರಣೆಯ ಮೂಲಕವಾದರೂ 'ಜಮೀನಿನ' ಒಡೆಯನಾಗುತ್ತಾನೆ. ಜಮೀನಿಗೆ ಅಗತ್ಯವಿದ್ದ ಮನೆಯಂಥ ನೆಲೆಯೂರುವ ಪ್ರಸಂಗ ಪೊಲಿ>ಬಲಿಯನ್ನಾಧರಿಸಿತ್ತು. ಹೊಲೆಯ–ಮಾದಿಗರ ಅಮ್ಮನ ಆರಾಧನೆಯ ಮತ್ತು ಕೌಟುಂಬಿಕ ಆಚರಣೆಗಳ ಸಂದರ್ಭದಲ್ಲಿ ಬಲಿ ಮತ್ತು ಅನ್ನ ಕಡ್ಡಾಯವಾಗುತ್ತವೆ. ಊರಮ್ಮನ (ಮಾರೆಮ್ಮ, ದ್ಯಾಮವ್ವ ಮುಂತಾಗಿ) ಆಚರಣೆಯಲ್ಲೂ ಅದೇ ಪ್ರಧಾನ ವಸ್ತು.

ಗೌಡರು (ಒಕ್ಕಲಿಗರು) ಹೆಸರಿನ ಮೂಲಕ ಬೇಸಾಯಗಾರರಿಬಹುದೆಂದು ಅನುಮಾನ ಬರುತ್ತದೆ. ಆದರೆ ಇವರ ಮೊದಲ ವೃತ್ತಿ ಬೇಸಾಯವಲ್ಲ 'ಗೌಡ' ಪದವಂತೂ ಬೇಸಾಯವನ್ನು ಸೂಚಿಸಲಾರದು. ಹೆಗ್ಗಡೆ, ನಾಯಕ ಪದಗಳಂಟಿರುವ ಒಕ್ಕಲಿಗ, ಕುರುಬ, ಬಂಟ, ಬೇಡ, ಮೊಗೇರ, ಈಡಿಗ, ಬಲಿಜ, ಬೋಯ ಗೊಲ್ಲರೆಲ್ಲ ಒಂದೇ ಮೂಲದವರು. ಇವರೆಲ್ಲ ಪಶುಪಾಲಕರು. ಬಂಗಾಲಕ್ಕೆ ಗೌಡದೇಶವೆನ್ನುತ್ತಾರಷ್ಟೇ. ಗೌಡ ಸ್ಥಾನಸೂಚಕವೋ, ವೃತ್ತಿ ಅಥವಾ ಜಾತಿ ಸೂಚಕವೋ ತಿಳಿದಿಲ್ಲ ಎನ್ನುತ್ತಾರೆ ಹಿರಿಯಣ್ಣ. ("ಮಲೆನಾಡ ಒಕ್ಕಲಿಗರು ಮತ್ತು ಅವರ ಜಾನಪದ" –ಎ. ಹಿರಿಯಣ್ಣ ೧೯೮೨) ಒಕ್ಕಲಿಗ ಕೂಡ "ಜಮೀನುದಾರರಿಂದ ಸಾಗುವಳಿ ಹಕ್ಕನ್ನು ಪ್ರತಿಫಲ ಕೊಟ್ಟು ಪಡೆವಾತ" ಎಂದಾಗುತ್ತದೆ. (ಅದೇ) "ಭೂಮಾಲಿಕರಿಗೂ ಅವರ ಭೂಮಿಯನ್ನು ಕೃಷಿ ಮಾಡುವ ಭೂರಹಿತ ರೈತರಿಗೂ ನಡುವಣ ಸಂಬಂಧವನ್ನು ಸೂಚಿಸುವ ಪದ" ಒಕ್ಕಲು. (ಅದೇ ಪು. ೮೩)

ಈಗ ರೈತರಾಗಿರುವ ಉತ್ತರ ಕರ್ನಾಟಕದ ಲಿಂಗಾಯತರು ಗೌಡರೇ. ದಕ್ಷಿಣ ಭಾರತದ ರೈತರಾದ ರಡ್ಡಿ, ನಾಯರ್, ಗೌಂಡರ್, ವೆಲ್ಲಾಳ ಇವರೆಲ್ಲ ಮೊದಲ ಕೃಷಿಕರಲ್ಲ.

**ಒಕ್ಕಲಿಗರು ಮತ್ತು ದಲಿತ ಸಂಸ್ಕೃತಿ :**

ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು, ಭಾಗಗಳಲ್ಲಿರುವ ನಾಮಧಾರಿ ಒಕ್ಕಲಿಗರು "ಮಾದಾರನನ್ನು 'ಹುಲುಸ' ಎಂದು ಕರೆಯುತ್ತಾರೆ. ಅವು ಹುಲುಸನಾದ್ದರಿಂದ ಕಣದಲ್ಲೇ ಅವನಿಗೆ 'ಆಯ' ಅಳೆಯಲಾಗುವುದು. ಪಣತಕ್ಕೆ ಬತ್ತ ತುಂಬಿ ಕೊಡುವವನೂ ಅವನೇ," (ಅದೇ ಪು. ೩೩೩) "ಆಯಗಾರರಲ್ಲಿ ಮಾದರನಿಗೆ ವಿಶೇಷ ಪ್ರಾಶಸ್ತ್ಯ. ಅದಕ್ಕೆ ಕಾರಣ ಅವನು ಇವರ ಜೀವನದ ಬಹು ಮುಖ್ಯ ಸಂದರ್ಭಗಳಲ್ಲಿ ಮಹತ್ವದ ಕಾರ್ಯಗಳನ್ನು ನಿರ್ವಹಿಸುವುದು. ಆದ್ದರಿಂದ ಅವನಿಗೆ ಮೊಟ್ಟ ಮೊದಲು ವರ್ಷದ ಫಲವನ್ನು ಕಣದಲ್ಲೇ ಅಳೆಯುವುದು. ಉಳಿದವರಿಗೆ ಸಂಗ್ರಹಣೆಗೆ ಬಂದಾಗ ಕೊಡುವ ಪದ್ಧತಿ. ಬತ್ತ, ಅಕ್ಕಿ, ಅಡಕೆ ಇವನ್ನು ಆಯ ಕೊಡಲಾಗುವುದು." (ಅದೇ ಪು. ೩೨೯) ಇಂಥ ಯಾವ ಸಂಗತಿಗಳಿಗೂ; ಶಿಷ್ಟ ಪರಂಪರೆ ಮತ್ತು ಬೂರ್ಷ್ವಾ ಸಂಶೋಧಕರು ಮತ್ತು ಇತಿಹಾಸಕಾರರು ಚಿತ್ರಿಸುತ್ತ ಬಂದ ದಲಿತರ ಬದುಕಿಗೂ ಸಂಬಂಧವೇ ಇಲ್ಲ. ಇಂಥ ವಿಚಾರಗಳು ದಲಿತರ ಆದಿಯ ಜಮೀನು ಮಾಲಿಕತ್ವವನ್ನಲ್ಲದೇ ಬೇರೆನನ್ನು ಹೇಳುತ್ತವೆ? ಅವನಿಂದ ಭೂಮಿಯನ್ನು, ಬೇಸಾಯ ತಂತ್ರವನ್ನು ಕಿತ್ತುದಕ್ಕೆ ಪ್ರತಿಫಲ ಅಥವಾ ಪಶ್ಚಾತ್ತಾಪವಲ್ಲವೇ ಈ ಪದ್ಧತಿಗಳು?

ನಮ್ಮ ನಾಡಿನ ಜನಸಮೂಹದಲ್ಲಿ ಪಶುಪಾಲಕ ಮೂಲದವರು ಹೆಚ್ಚಿದ್ದರೂ ಅವರ ಮದುವೆ ಆಚರಣೆಗಳು ಕೃಷಿ ಫಲವಂತಿಕೆ ಸಂಕೇತಗಳಿಂದ ತುಂಬಿವೆ. ಅವು ಬೇಸಾಯಗಾರರಾದ ದಲಿತರ ಸಂಸ್ಕೃತಿಯಿಂದಲೇ ಬರಬೇಕಲ್ಲವೇ? ಒಕ್ಕಲಿಗರ "ಮದುವೆಯ ಕಾಲದಲ್ಲಿ ಮಾದರ ೧೨ ಕಂಬದ ಹಸಿರು ಚಪ್ಪರ ನಿರ್ಮಿಸಿ ಹಸಿರು ತೋರಣ ಕಟ್ಟಿಕೊಡುವುದು," ಇದೇ ಕಾರಣಕ್ಕಾಗಿ. (ಅದೇ ಪು. ೩೩೩)

ಈ ಪ್ರದೇಶದ ಸ್ತ್ರೀ ದೈವಗಳಿಗೂ, ದಲಿತರಿಗೂ ಇರುವ ನಂಟಿನ ಕುರಿತು ಕೆಲವು ಮಾಹಿತಿಗಳಿವೆ ಮುತ್ತೂರು ಚೌಡಿ ಗ್ರಾಮದ ಜಮೀನುಗಳ ತಲೆಯಲ್ಲಿ ವಾಸವಾಗಿದ್ದು, ಮುತ್ತೂರು ಸೀಮೆಯಿಂದ ಕೆಲಸ ಹುಡುಕಿಕೊಂಡು ಬಂದ ಹೊಲೆಯರ ಸಂಗಡ ಬಂದ ದೈವ. (ಪು ೩೫೭) ಹಂದಿ ಸಾಕುವ ಹೊಲೆಯರು ಅದನ್ನು ಈ ಚೌಡಿಗೆ ಬಲಿ ಕೊಡುವರು. ಕರೆವ ಎಮ್ಮೆ ಒದೆವ ಚಾಳಿ ಆರಂಭಿಸಿದರೆ ಹೊಲೆಯರಿಗೆ ಬೆಲ್ಲ ಅಕ್ಕಿ ಕೊಟ್ಟು ಚೌಡಿಗೆ ಎಡೆ ಅರ್ಪಿಸಲು ಕೇಳುತ್ತಾರೆ. ಸರಳದ ಚೌಡಿ "ತನ್ನ ಊರಿನಿಂದ ಹೊರಗೆ ಮದುವೆಯಾಗಿ ಹೋಗುವ ಎಲ್ಲ ಹೆಣ್ಣುಗಳೊಂದಿಗೂ, ಹೆಣ್ಣುಗಳಿಗೆ ಬಳುವಳಿಯಾಗಿ ಕೊಡುವ ಎಮ್ಮೆಗಳೊಂದಿಗೆ ಬೆನ್ನತ್ತಿ ಬರುತ್ತಾಳೆ"ಂದು ನಂಬಿಕೆ. (ಅದೇ ಪು. ೩೫೦)

ಎಮ್ಮೆ ಕೋಣಗಳನ್ನು ದೈವವೆಂದು ಆರಾಧಿಸುತ್ತಿದ್ದ ಜನಗಳೊಂದಿಗೆ ಚೌಡಿ ಸರಿಹೊಂದುವಂತೆ ತೋರುತ್ತಾಳೆ. ಎಮ್ಮೆಯನ್ನು ಇಲ್ಲಿ ಚೌಡಿ ಎಂದಿರುವಂತೆ, ಒಕ್ಕಲಿಗರು 'ಎಮ್ಮೆ' ಮಾರಿದೈವವೆಂದೂ ಭಾವಿಸಿದ್ದಾರೆ. (ಅದೇ ಪು. ४೨೧) ಕೋಣನಂತೂ ಪೋತರಾಜನಾಗಿ ಇಡಿ ದಕ್ಷಿಣ ಭಾರತದಲ್ಲಿ ಆರಾಧನೆಗೊಳ್ಳುತ್ತಿರುವ ದೈವ. ಆಕಳು–ಹೋರಿಗಳ ಆರಾಧನೆಯಂತೆ, ಎಮ್ಮೆ–ಕೋಣಗಳ ಪಂಥವೂ ನಮ್ಮ ಪ್ರಾಚ್ಯ ಸಂಸ್ಕೃತಿ ಘಟಕಗಳು. ಶ್ರೇಷ್ಠರೆಂದು ಪರಿಗಣಿತರಾದ ಆರ್ಯವೈದಿಕರ ಆಕಳು ಪೂಜೆ ಪ್ರಭಾವದಿಂದ ಎಮ್ಮೆ ಪೂಜೆ ಸ್ಥಗಿತಗೊಂಡಿರಬೇಕು. ಇದೇ ರೀತಿ 'ನಂದಿ' ಅವತಾರದಿಂದಾಗಿ, ಕೋಣ ಕೀಳು ದೈವದ ಸ್ಥಾನಕ್ಕೆ ತಳ್ಳಲ್ಪಟ್ಟಿತು. ಅದು ಮಾತೃದೈವದ ಬಲಿಪಶುವಾಗಿ ಉಳಿಯಿತು. ಎಮ್ಮೆ ಕೋಣ ಸಂಸ್ಕೃತಿಯ ದ್ರಾವಿಡ(?) ಜನ, ಆಕಳು ಹೋರಿ ಸಂಸ್ಕೃತಿಯ ದ್ರಾವಿಡರಗಿಂತ ಭಿನ್ನವಿರುವಂತೆ ತೋರುತ್ತದೆ. ದಲಿತ ಸಂಸ್ಕೃತಿಯಲ್ಲಿ ಎಮ್ಮೆ ಕೋಣ ಪಂಥ ಪ್ರಸಕ್ತಿಯೆ ಪ್ರಧಾನ. ದಲಿತರು ಒಂದು ಹಂತದಲ್ಲಿ ಸಾಮಾಜಿಕವಾಗಿ ಕೀಳಾದುದರಿಂದ ಅವರ ದೈವಗಳೂ ಕೀಳಾದವು, ಇಲ್ಲವೇ ಸವರ್ಣೀಯರ ಪಾಲಾದವು.

'ರಣ' ಎಂಬ ದೈವದ ಪೂಜೆ ಒಕ್ಕಲಿಗರಲ್ಲಿದೆ. ಇದೂ ಕೂಡ ತೋಟದ ತಲೆಯಲ್ಲಿರುವುದು. ದನಕಾಯುವ ಹೊಲೆಯನೊಬ್ಬ ದನಕಾಯುವಾಗ ತೋಟದ ತಲೆಯಲ್ಲಿ ಸತ್ತನಂತೆ. ಅವನ ಶವಸಂಸ್ಕಾರ ಯಾರೂ ಮಾಡಲಿಲ್ಲ. ದನ ಕರುಗಳಿಗೆ ತೊಂದರೆ ಕೊಡಲಾರಂಭಿಸಿದ. ಜನ, ಅವ ಸತ್ತಲ್ಲಿ ಕಲ್ಲಿಟ್ಟು ಪೂಜೆ ಮಾಡತೊಡಗಿದರು. ಇದೇ ರಣ. ಇದರ ಮಹಿಮೆ ಎಂದರೆ ಇದು ದನಗಳನ್ನು ಕೊಲ್ಲುವುದು. ಹಾಗಾಗಿ ಕೋಳಿ ಬಲಿ ಕೊಟ್ಟು ಎಡೆ ಇಡಬೇಕು.

ಹೊಲೆಯನೊಬ್ಬ ದೈವವಾಗಿ ಸವರ್ಣೀಯರಿಂದ ಆರಾಧನೆಗೊಳ್ಳುವುದು, ದಲಿತರ ಬಗೆಗಿನ ಪಂಡಿತರ ಹಲವು ಪೂರ್ವ ಗ್ರಹಗಳನ್ನು ತೊಡೆಯುತ್ತದೆ. ಈ ಕತೆಯ ಹೊಲೆಯ ದೈವ ತೋಟದಲ್ಲಿರುವುದು, ದನಗಳನ್ನು ಕೊಲ್ಲುವುದು, ಅವನು 'ದನಗಾವಿ' ಎನ್ನುವುದಕ್ಕಿಂತ ಕೃಷಿಕನಾಗಿದ್ದುದನ್ನೇ ಸಮರ್ಥಿಸುವವು. ಕೃಷಿಕರ ಪಾಲಿಗೆ ಅವರ ಬೆಳೆಗಳನ್ನು ನಾಶಮಾಡುತ್ತಿದ್ದ ದನಗಳು (ಸಾಕು ದನಗಳಿರಲಿ, ಕಾಡು ಪಶುಗಳಿರಲಿ) ವೈರಿಗಳೇ; ಪಶುಪಾಲಕರಿಗೆ ಕೃಷಿ ಬೆಳೆಗಳು ಮೇವು (ವೈರಿಗಳು) ಹೇಗೋ ಹಾಗೆ. ಸುದೀರ್ಘವಾದ ಸಂಘರ್ಷದ ನಂತರವಷ್ಟೇ ಇವೆರಡೂ ಜನ ಸಮುದಾಯಗಳು ಒಂದರೊಳಗೊಂದು ಕಲೆತು ಸಂಸ್ಕೃತಿಗೆ 'ದ್ರಾವಿಡತನ'ದ ಮುಖ ಮೂಡುವಂತಾಯಿತು.

ಹಿರಿಯಣ್ಣ ಅವರ ಇನ್ನೊಂದು ಮಾಹಿತಿ– ಗ್ರಾಮದೇವತೆಯ ಆರಾಧನೆಯಲ್ಲಿ **ಜಾತಿಮತ ಭೇದ ಮಾಡದಂತೆ** ಅಗಸ, ಬಡಗಿ, ಕುಂಬಾರ, ಕ್ಷೌರಿಕ, **ಮಾದಾರ,** ಬೋವಿ, ದಾಸಯ್ಯ, ದೀವಟಿಗೆಯವ, ಕೊರಮ, ಹೆಳವ, ಬೇಲ, ಬಣಗಾರ ಎಂಬ ೧೨ ಕೈವಾಡದವರು ಪಾಲ್ಗೊಳ್ಳಲೇ ಬೇಕು. ಅವರಿಲ್ಲದೇ ಯಾವ ಆಚರಣೆಯೂ ನಡೆಯಲಾರದು.

'ಮಾಸ್ತಿ' ನಮಗೆಲ್ಲ ತಿಳಿದಿರುವಂತೆ ಗಂಡನ ಚಿತೆಯೊಡನೆ 'ಸತಿ ಹೋದವಳ' ಸ್ಮಾರಕ. ಆದರೆ ಮಲೆನಾಡಿನಲ್ಲಿ 'ಮಾಸ್ತಿ' ಸ್ತ್ರೀದೈವಗಳಲ್ಲೊಂದು. ಒಕ್ಕಲಿಗರಿಗೆ ಇದು ಮನೆದೇವತೆ. ನಾಗಗಳು ಈಕೆಯ ಮಕ್ಕಳೆಂಬ ನಂಬಿಕೆ ಈ ಭಾಗದ ಜನರಲ್ಲಿದೆ. ಪುರುಷ ಪ್ರಧಾನ ಸಮಾಜದಲ್ಲಿ ಪುರುಷ ದೈವಗಳ ಹೆಚ್ಚಳಿಕೆ ಇರಬೇಕಾದದ್ದು ಸಹಜ. ಆದರೆ ಪಶುಪಾಲಕ ಒಕ್ಕಲಿಗರು ಕೃಷಿಕರಾಗಿ ಪರಿವರ್ತನೆಗೊಂಡುದರಿಂದ ಸ್ತ್ರೀದೈವಗಳನ್ನು ಆರಾಧಿಸುವಂತಾದರು. ಅಂತೆಯೆ ಊರಿನ ದೈವ, ಮನೆಯ ದೈವ, ಹೊಲಗಳ ದೈವ, ಎಲ್ಲವೂ ಸ್ತ್ರೀ ರೂಪಿಯೇ.

ಮಾಸ್ತಿ ಸಂಪ್ರದಾಯದಲ್ಲೂ ದಲಿತರ ಸಂಬಂಧವನ್ನು ಕಲ್ಪಿಸಲಾಯಿತು. ಐತಿಹ್ಯವೊಂದರ ಪ್ರಕಾರ ಕೆಂಡಕೊಂಡವಾದ ಮಹಾಸತಿಯನ್ನು ಗಂಡನ ಚಿತೆಯಲ್ಲಿಟ್ಟು ಸುಡಬೇಕಾದ ಸಂದರ್ಭದಲ್ಲಿ ತಾರಿ ಎಂಬ ಮಾದಿಗ ಕೊಳ್ಳಿ ತಂದು ಕೊಟ್ಟನಂತೆ. ಕೆಲವೆಡೆ ಈ ತಾರಿಗೂ ಪೂಜೆ ಆಗುತ್ತದೆ.

ಉತ್ತರ ಕರ್ನಾಟಕದ ಕಾಮನಹಬ್ಬದಲ್ಲಿ ಕಾಮನನ್ನು ಸುಡುವಾಗ ತೂರುವ ಕೋಳಿಗೆ 'ಮಾಸ್ತಿ' ಎನ್ನುತ್ತಾರೆ.

ಒಕ್ಕಲಿಗರ ಸೀಮೆದೈವಗಳೂ ಸ್ತ್ರೀರೂಪಿಯೇ. ಒಂದು ಸೀಮೆಯ ವ್ಯಾಪ್ತಿಗೆ ಸೇರುವ ದೈವಗಳ ರಥೋತ್ಸವಕ್ಕೆ ೧೫ ದಿನ ಮೊದಲೇ ಆ ಸೀಮೆಯ ಮಾದಿಗರು ಸೀಮೆಯ ಎಲ್ಲ ಒಕ್ಕಲುಗಳ ಮನೆಗೆ ಹೋಗಿ ದವಸ ಧಾನ್ಯ ಸಂಗ್ರಹಿಸುವರು. ಈ ದೀರ್ಘ ಆಚರಣೆಯಲ್ಲೂ ಮಾತೃ ಪ್ರಧಾನ ಸಂಸ್ಕೃತಿ ಆಶಯಗಳೇ ತುಂಬಿವೆ.

ಗೌರಿಹಬ್ಬದಲ್ಲಿ ಒಕ್ಕಲಿಗರು, "ಗೌರಿ ತಮ್ಮ ಮನೆಗಳಿಗೆ ಬರುವುದಕ್ಕೆ ಮೊದಲು ಮುಂದೆ ಮಾದಿಗನ ಮನೆಗೆ ಹೋಗುತ್ತಾಳೆಂಬ ಕಾರಣಕ್ಕಾಗಿ" ಅವಸರ ಮಾಡುತ್ತಾರಂತೆ. ಬೆಳಕು ಹರಿಯುವುದರೊಳಗೇ ಎಡೆ ಇಡುವುದು ಇವರಲ್ಲಿ ರೂಢಿ. (ಅದೇ ಪು. ೪೧೨)

ಮಾರಿಯ ಮೂರ್ತಿ ಮಾಡಲು ಅಡವಿಯಿಂದ ಕಟ್ಟಿಗೆ ತಂದು ಕೊಡುವವನು ಹೊಲೆಯ. ಅಸಾದಿ (ಎಡಗೈ) ಪೂಜಾರಿ ಮಾರಿಗೆ ಗದ್ದುಗೆ ಪೂಜೆಮಾಡಿ ಹಣ್ಣು ಕಾಯಿ ಮಾಡಬೇಕು.

ಹೀಗೆ ಗ್ರಾಮೀಣ ಸಂಸ್ಕೃತಿಯಲ್ಲಿ ದಲಿತರು ಪ್ರತ್ಯೇಕವಾಗಿಲ್ಲ. ಪ್ರತ್ಯೇಕತೆಯ ಮಾತಿರಲಿ ಕೃಷಿ ಸಂಬಂಧಿ ಹಬ್ಬ ಉತ್ಸವ ಜಾತ್ರೆಗಳಲ್ಲಿ ಅನಿವಾರ್ಯವೂ, ಅಗತ್ಯವೂ ಆದ ಭಾಗವಾಗಿದ್ದಾರೆ. ಅವರಿಲ್ಲದೆ ಈ ಆಚರಣೆಗಳು ನಡೆಯಲಾರವು.

ಈವರೆಗೆ ಮಲೆನಾಡ ಒಕ್ಕಲಿಗರ ಜತೆ ಬೆರೆತುಹೋದ ದಲಿತರ ಕುರಿತು ವಿವೇಚಿಸಲಾಯಿತು.

ಇನ್ನು ಮುಂದೆ ದ್ರಾವಿಡ ಪಶುಸಂಗೋಪಕರ ಜತೆ ಅನಿವಾರ್ಯವಾಗಿ ಘರ್ಷಣೆಗಿಳಿಯಬೇಕಾಗಿ ಬಂದ ಕೃಷಿಕ ದಲಿತರ ಕುರಿತು ಕೆಲವು ಸಂಗತಿಗಳು.

**ಸಂಘರ್ಷ, ಸಮನ್ವಯಗಳ ನೆಲೆಯಲ್ಲಿ ಕೃಷಿಕರು, ಪಶುಪಾಲಕರು :**

ಚರಿತ್ರ ಪೂರ್ವಕಾಲಕ್ಕೆ ಸೇರಿದ ಘಟನೆಗಳು ರಿಚ್ಯುವಲ್ಲಾಗಿ ಉಳಿದು ಬಂದಿರುವ ಸಾಂಸ್ಕೃತಿಕತೆ ನಮ್ಮದು. ದಲಿತ ಸಂಸ್ಕೃತಿಯ ಮೊದಲ ಬೇರುಗಳನ್ನೆಲ್ಲ ಇಂಥ ವಿಧಿಯಾಚರಣೆಗಳ ಮೂಲಕವೇ ತಿಳಿದುಕೊಳ್ಳಬೇಕಾಗಿ ಬಂದಿರುವುದು ದುರಾದೃಷ್ಟ. ಹಾಗಾದರೂ ಸರಿಯೆ ಅವು ಉಳಿದು ಬಂದಿರುವುದಕ್ಕೆ ಕೃತಜ್ಞರಿರಬೇಕಿದೆ.

ಕರ್ನಾಟಕದ ಕುರುಬ ಸಂಸ್ಕೃತಿಯ ಕೇಂದ್ರವಾದ 'ಮೈಲಾರ', ಮಹಾರಾಷ್ಟ್ರದ ಕುರುಬರಾದ ಧನಗರರ ಸಂಸ್ಕೃತಿಯಲ್ಲಿ 'ಖಂಡೋಬಾ', ಕರ್ನಾಟಕದ ಮಣ್ಣು ಮೈಲಾರ (ಹಡಗಲಿ ತಾಲೂಕು), ದೇವರಗುಡ್ಡ (ರಾಣೆಬೆನ್ನೂರು ತಾಲೂಕು)ಗಳು ಈ ಪಂಥದ ಪ್ರಧಾನ ನೆಲೆಗಳಾಗಿರುವಂತೆ, ಮಹಾರಾಷ್ಟ್ರದಲ್ಲಿ ಜೇಜುರಿಯೂ ಒಂದು. ಇಲ್ಲಿಯ ಮುಖ್ಯ ಗುಡಿಯ ಹೊರಭಾಗದಲ್ಲಿ ಮಾಂಗನೊಬ್ಬನ (ಮಾದಿಗ) ಗುಡಿಯಿದೆ. ಐತಿಹ್ಯದ ಪ್ರಕಾರ ಜೇಜುರಿಯ ಕೋಟೆಯ ಅಡಿಪಾಯಕ್ಕೆ ಬಲಿಯಾದವನು ಈತ. ಮೂಳೆ ಮುರಿತಕ್ಕೆ ಪರಿಹಾರ ನೀಡುವ ದೈವವೆಂದು ಜನ ಇವನನ್ನು ಪೂಜಿಸುತ್ತಾರೆ. (ಸೊಂಥೈಮರ್.)

ಮೈಲಾರನಿಗೂ ದಲಿತರಿಗೂ ಇಲ್ಲಿಯ ಸಂಬಂಧ ದೂರದ್ದೆಂದು ತೋರಿದರೆ, ಮಣ್ಣು ಮೈಲಾರ, ದೇವರಗುಡ್ಡ ಮೊದಲಾದ ಕಡೆ ಸಂಘರ್ಷ ಮತ್ತು ಸಮನ್ವಯ ಎರಡೂ ನೆಲೆಗಳಲ್ಲಿ ಮೈಲಾರನ ಜತೆ ದಲಿತರ ಸಂಬಂಧವಿದೆ.

ಸಂಘರ್ಷದ ನೆಲೆ: ಪಶುಪಾಲಕರ ನೇತಾರನಾದ ಮೈಲಾರಲಿಂಗ ಸ್ಥಳೀಯ ರಾಕ್ಷಸರಾದ ಮಣಿ ಮತ್ತು ಮಲ್ಲರನ್ನು ಕೊಂದು ಮಲ್ಲನ ಪತ್ನಿಯಾದ ಕೊಮಾಲೆಯನ್ನು ಅಪಹರಿಸುತ್ತಾನೆ. ಈ ಕೇಂದ್ರ ವಿಚಾರದ ಸುತ್ತಲೆ ಮೈಲಾರ ಜಾತ್ರೆಯ ವಿಧಿಗಳು ನಡೆಯುತ್ತವೆ. ಆಚರಣೆ ಮತ್ತು ನಂಬುಗೆಗಳಲ್ಲಿ ಕಂಡು ಬರುವಂತೆ ಮಣಿ, ಮಲ್ಲರು ಕೃಷಿಕರು. ಈ ಸ್ಥಳೀಯ ಬೇಸಾಯಗಾರರನ್ನು ಬಗ್ಗು ಬಡಿದು ದಾಳಿಕೋರ ಮೈಲಾರ ತಳವೂರುತ್ತಾನೆ. ಮಣಿ–ಮಲ್ಲರು 'ತಮ್ಮವರು' ಎಂದು ಈ ಪ್ರದೇಶದ ಮಾದಿಗ ಕಂಚಾವೀರರ ನಂಬುಗೆ. ಇದೆಲ್ಲವೂ ಒಟ್ಟಾರೆ, ಹೊಲೆಯ–ಮಾದಿಗ ಬೇಸಾಯಗಾರರನ್ನು, ಪಶುಪಾಲಕ ಕುರುಬರು ಸೋಲಿಸಿ ನೆಲೆಗೊಂಡುದನ್ನು ನಿರೂಪಿಸುವುದು.

ಮೈಲಾರ ಸಂಹರಿಸಿದ ಮಣಿಮಲ್ಲರ ದೇಹಭಾಗಗಳೇ ಗೊರವಪ್ಪಗಳ ವಸ್ತ್ರಾಭರಣಗಳಾಗುತ್ತವೆ. ಮಲ್ಲಾಸುರನ ತಲೆ ಬುರುಡೆಯೇ 'ಡೋಣಿ', ಹಲ್ಲುಗಳೇ ಕವಡಿಗಳಾದುವಂತೆ. ಮಣಿಕಾಸುರನೇ ಮೈಲಾರನಿಗೆ ಕುದುರೆಯಾದನಂತೆ. (ಜಾತ್ರೆಯಲ್ಲಿ ಮಣಿಮಲ್ಲರ ಪಾತ್ರವನ್ನು ಕತ್ತೆಬೋಳಪ್ಪಗಳು (ಬ್ರಾಹ್ಮಣರು!) ನಿರ್ವಹಿಸುತ್ತಾರೆ.) ಇದು ದಲಿತರು ಮೈಲಾರ ಪಂಥದಲ್ಲಿ ಬೆರೆತುಹೋದರೆಂಬುದನ್ನಲ್ಲದೆ ಬೇರೆನನ್ನು ಸೂಚಿಸುತ್ತದೆ? ಆದರೆ ದಲಿತರು ಇಲ್ಲಿ ಗೆದ್ದು ಬೆರೆಯಲಿಲ್ಲ, ಸೋತು ಬೆರೆತರು. ಈಗಲೂ ಇತರೆಲ್ಲ ಜಾತಿಯವರಂತೆ ಹೊಲೆಯರು, ಮಾದಿಗರೂ ಮೈಲಾರನ ಗ್ವಾರಪ್ಪ, ಗ್ವಾರಮ್ಮಗಳಾಗುತ್ತಾರೆ.

ಸಮನ್ವಯ ನೆಲೆಯ ಇನ್ನೊಂದು ಮುಖ್ಯ ಆಧಾರ ಕಂಚಾವೀರರ ಆಚರಣೆ. ಇವರು ಮೈಲಾರ ಜಾತ್ರೆ ಮತ್ತು ಪ್ರಮುಖ ಆಚರಣೆಗಳಲ್ಲಿ ಒಡಬು ಹೇಳುವ, 'ಕಾಲು ಪವಾಡ', 'ಕೈಪವಾಡ' ಮಾಡುವ ದೇವರ ಹೊರೆ ಹೊತ್ತ ಮಾದಿಗರು. ಜಾತ್ರೆಯಲ್ಲಿ ಕಾಲದಲ್ಲಿ ಉಗನಿಗೂಟ ಹೊಡೆದುಕೊಳ್ಳುವ ಭೀಕರ ಆಚರಣೆ ಇನ್ನೂ ಇದೆ. ಮಣ್ಣು ಮೈಲಾರದ ಗುಡಿಯ ಹಿಂದೆ ಕಂಚಾವೀರರ ಗುಡಿ ಇದೆ. ಹಿಂದೆ ತಮ್ಮ ರುಂಡಗಳನ್ನೇ ಅರ್ಪಿಸಿದ ಐದು ಕಂಚಾವೀರರ ಕಲ್ಲು ಸ್ಮಾರಕಗಳು ಇಲ್ಲಿವೆ.

ಆಶ್ಚರ್ಯವೆಂದರೆ ಇಂಥ ವೀರರೇ ಶ್ರೀಶೈಲದಲ್ಲೂ (ಮಲ್ಲಿಕಾರ್ಜುನ ಹಿಂದೆ ಮೈಲಾರನೇ. ಈತನಿಗೂ ಗ್ವಾರಪ್ಪಗಳಿದ್ದಾರೆ) ತಮ್ಮ ರುಂಡ ಮತ್ತು ಬೀಜಗಳನ್ನು ಬಲಿಕೊಡುತ್ತಿದ್ದರಂತೆ. ಇವರಿಗೆ ಅಲ್ಲಿ 'ವೀರಭದ್ರರು' ಎನ್ನುತ್ತಾರೆ.

ಈ ಬಗೆಯ 'ವೀರ'ರಾದ ಮಾದರಚನ್ನಯ್ಯ, ಡೋಹರ ಕಕ್ಕಯ್ಯ 'ವೀರ' ಶೈವ ಹುಟ್ಟಲು ಮೂಲ ಕಾರಣರಾಗಿದ್ದಾರೆ ಎಂಬ ಅಂಶವನ್ನು ಇಲ್ಲಿ ನೆನಪಿಸಬಹುದು.

ಆಂಧ್ರ ಪ್ರದೇಶದ ಕರಾವಳಿಯಲ್ಲಿ ಅಕಾಲಿಕ ಮರಣ ಹೊಂದಿದ ಮದುವೆ ಆಗದ ಹುಡುಗ–ಹುಡುಗಿಯರು 'ವೀರಭದ್ರ', 'ವೀರಕನ್ಯಕ' ಅಥವಾ 'ಭವಾನಿ'ಯರಾಗಿ ಪೀಡಿಸುತ್ತಾರೆಂದು ಭಾವಿಸಲಾಗುತ್ತದೆ. (ಡೆವಿಡ್. ಎಂ. ನೈಪ್ ಇದರ ಕುರಿತು ಬರೆದ ಲೇಖನವಿದೆ) 'ವೀರಭದ್ರುಡಿ ಸಂಬರಂ' ಎಂಬ ವಿಧಿಯಾಚರಣೆಯಲ್ಲಿ ಅಸ್ಪೃಶ್ಯ ವೀರ ಮುಷ್ಠಿಗಳು ನರ್ತಕರಾಗಿರುತ್ತಾರೆ. ಇಲ್ಲಿ. 'ಪೊಲ್ಲಾ' ಎಂಬುದಕ್ಕೆ 'ಮಡಿ' ಎಂಬರ್ಥ. ಸತ್ತವನ (ಳ) ಸಂಕೇತವಾದ ವಿಭೂತಿ ಉಂಡಿಗೆ 'ಹಣ್ಣು' ಎನ್ನುತ್ತಾರೆ. ('ವಿಭೂತಿ–ಪಂಡು') ಇದು ಪೂಜೆಗೊಳ್ಳುತ್ತ ಬೆಳೆಯುತ್ತದಂತೆ. ಈ ಆಚರಣೆಯಲ್ಲಿ ಎಲ್ಲ ಜಾತಿಯವರೂ ಭಾಗಿಯಾಗುತ್ತಾರೆ. ಹಾವಿನ ಹುತ್ತ ವೀರಭದ್ರ ಪಂಥದ ಕೇಂದ್ರ. ವಿಭೂತಿ ಪಂಡುವಿಗೇ ಲಿಂಗವೆನ್ನುತ್ತಾರೆ. ಹರಪ್ಪದಲ್ಲೂ ವಿಭೂತಿ ಹಣ್ಣಿನಂಥ ಕಲ್ಲು ಪ್ರತಿಮೆ ಸಿಕ್ಕಿವೆ. ಇದುವೆ ವೀರಗಲ್ಲು ಪರಂಪರೆಗೆ ಕಾರಣವಾಗಿರಬಹುದು, ಆದಿಮ ಪಶುಪಾಲಕರ ಸಗಣಿ ಸುಟ್ಟ ಬೂದಿಗುಡ್ಡಕ್ಕೂ ಕಾರಣವಿರಬಹುದೆಂದು ನೈಪ್ ಬರೆಯುತ್ತಾರೆ.

**ಎಲ್ಲಮ್ಮ ಪಂಥ :**

ದೇವದಾಸಿ, ವೇಶ್ಯಾಗಾರಿಕೆಯ ಭೀಕರ ಮತ್ತು ವಿಕೃತ ಸಮಸ್ಯೆಯಿಂದಾಗಿ ಎಲ್ಲಮ್ಮನ ಪಂಥದ ಅಧ್ಯಯನ ವೈಜ್ಞಾನಿಕವಾಗಿ ನಡೆಯಲಿಲ್ಲ. ಇದು (ವೇಶ್ಯಾಗಾರಿಕೆ) ಈ ಪಂಥದ ತೀರ ಕೆಟ್ಟ ಪರಿಣಾಮಗಳಲ್ಲಿ ಒಂದು ಎಂಬುದು ಖಂಡಿತ. ಆದರೆ ವಿಚಿತ್ರವೆಂದರೆ ಇಡಿ ದಕ್ಷಿಣ ಭಾರತದ ತಾಯಿಪಂಥಕ್ಕೆ ಒಂದು ರೀತಿಯಿಂದ ಕೇಂದ್ರನೆಲೆಯಂತೆ ತೋರುವ ಎಲ್ಲಮ್ಮ ದಲಿತ ಸಂಸ್ಕೃತಿಯ ಪ್ರಪ್ರಮುಖ ಆಶಯವಾಗಿರುವುದು. ಈ ಪಂಥದ ಅಧ್ಯಯನ ಪ್ರತ್ಯೇಕವಾಗಿ ನಡೆಯಬೇಕಷ್ಟು ವಿಸ್ತಾರವೂ, ಗಹನವೂ, ಗಂಭೀರವೂ ಆಗಿದೆ. ಇದರ ಕುರಿತು ನಡೆದಿರುವ ಅಧ್ಯಯನಗಳೂ ಕಡಿಮೆ. ("ಜಾನಪದ ಸಾಹಿತ್ಯ ದರ್ಶನ"–೧೧. ಸಂ: ಎಂ–ಎಂ. ಕಲಬುರ್ಗಿ. ಕ.ವಿ.ವಿ. ೧೯೮೭. ಸವದತ್ತಿ ಎಲ್ಲಮ್ಮನಿಗೆ ಮೀಸಲಿದೆ.)

ಅಧ್ಯಯನದ ಫಲಿತವೆಂಬಂತೆ ನನಗೆ ತೋರುವ ಕೆಲವು ವಿಚಾರಗಳನ್ನಷ್ಟೇ ಇಲ್ಲಿ ಪ್ರಸ್ತಾಪಿಸಬಹುದು.

ಸವದತ್ತಿ ಎಲ್ಲಮ್ಮ ಕರ್ನಾಟಕದ ಎಲ್ಲಮ್ಮನ ಸ್ಥಾನಗಳಲ್ಲೇ ಪ್ರಖ್ಯಾತವಾದುದು. ಅದರ ಭೌಗೋಲಿಕ. ಪ್ರಾಕೃತಿಕ ವಿವರಗಳು, ವಾರ್ಷಿಕ ಆಚರಣೆಗಳು, ನಂಬುಗೆಗಳು, ಜೋಗಪ್ಪ, ಜೋಗಮ್ಮಗಳು, ಪೂಜೆಯ ಮತ್ತು ಜಾತ್ರೆಯ ಸಂಪ್ರದಾಯಿಕ ವಿಧಿಗಳು, ಜನಪದ ಸಾಹಿತ್ಯ ಪಂಥದ ವ್ಯಾಪಕತೆ ಎಲ್ಲವನ್ನು ಒಟ್ಟಾಗಿಸಿಕೊಂಡು ಗ್ರಹಿಸಿಕೊಂಡಾಗ–

ಎಲ್ಲಮ್ಮ ಆದಿಮ ಕೃಷಿಕ ಹೊಲೆಯರ ಮಾದಿಗರ ದೈವ. ವರ್ಗ ವರ್ಣ ವ್ಯತ್ಯಾಸಗಳ ಸಮಾಜ ಹುಟ್ಟುವ ಮೊದಲೆ ದಲಿತರ ಬುಡಕಟ್ಟು ಜೀವನ ಸಂಸ್ಕೃತಿಯಲ್ಲಿ ಹುಟ್ಟಿದವಳು. ಮಾತೃಪ್ರಧಾನ ಸಮಾಜಗಳು ಅಸ್ತಿತ್ವದಲ್ಲಿದ್ದ ಜಗತ್ತಿನ ಎಲ್ಲ ನಾಗರಿಕತೆಗಳಲ್ಲಿ ಕಂಡುಬರುವ ಸ್ತ್ರೀದೈವಪಂಥೀ ಆಚರಣೆ ನಂಬಿಕೆಗಳು ಎಲ್ಲಮ್ಮ ಪಂಥದಲ್ಲೂ ಇವೆ. ಶಾಕ್ತಪಂಥದ, ವಾಮಾಚಾರದ, ಪ್ರಭಾವಶಾಲಿ ನೆಲೆಯಾಗಿದ್ದವು, ಎಲ್ಲಮ್ಮನ ಸ್ಥಾನಗಳು. ಮಾತೃಪ್ರಧಾನ ಸಮಾಜದ ಸಾಂಸ್ಕೃತಿಕ ಪಳೆಯುಳಿಕೆ, ಎಲ್ಲಮ್ಮ ಪಂಥ. ಆ ಕಾಲದ ನಿತ್ಯ ಸುಮಂಗಲಿಯರು 'ಜೋಗಮ್ಮ'ಗಳು. ಪುರುಷ ಸ್ತ್ರೀಯಗುವ ಪರಿಕಲ್ಪನೆ ಯೋಗಸಿದ್ಧಾಂತವಾಗಿ ಅದ್ಭುತವಾಗಿ ಬೆಳೆಯಿತು. ಕಾಲಾಂತರದಲ್ಲಿ ವರ್ಗ–ಜಾತಿ ಹುಟ್ಟಿದ ನಂತರ ಫ್ಯೂಡಲ್ ಕಾಲದಲ್ಲಿ ಎಲ್ಲಮ್ಮ ಪಂಥದಲ್ಲಿ ಅನೇಕ ವಿಕೃತಿಗಳು ಸೇರಿಹೋದವು. ಇದರಲ್ಲಿ ಸವದತ್ತಿ ರಟ್ಟರ, ವೈದಿಕ ಬ್ರಾಹ್ಮಣರ ಕೈವಾಡಗಳಿವೆ. ಅನ್ಯ ಪಂಥೀಯರ ಸಾಂಸ್ಕೃತಿಕ ಪ್ರಭಾವಗಳು ಈ ಪಂಥವನ್ನು ಗಬ್ಬೆಸಿದವು. ಮಾತೃದೇವಿಯರಾಗುತ್ತಿದ್ದ ಮಹಿಳೆಯರು ಈಗ ಬಸವಿಯರು, ವೇಶ್ಯೆಯರು ಆಗಬೇಕಾದ ದುರಂತ ಪ್ರಾಪ್ತವಾಯಿತು. ವೈದಿಕ ಶಾಹಿಯ ವಿಕೃತ ಪ್ರಭಾವದ ಪರಿಣಾಮವೇ ಎಲ್ಲಮ್ಮನಲ್ಲಿ ರೇಣುಕೆ ಜಮದಗ್ನಿ ಕತೆಯ ಸೇರ್ಪಡೆ.

ಫಲದಾಯಿತ್ವದ ಆಶಯ ಹೊತ್ತು ಕೃಷಿ ನೈಸರ್ಗಿಕತೆಗೆ ಸಂಬಂಧಿಸಿದ್ದ ಸುಗ್ಗಿಕಾಲ, ಬರಡುಕಾಲಗಳು ಎಲ್ಲಮ್ಮ ಮುತ್ತೈದೆ, ರಂಡೆಯಾಗುವ ಆಚರಣೆಗೆ ದಾರಿ ಮಾಡಿತು. ಜಮದಗ್ನಿ ಪರಶುರಾಮರು ವೈದಿಕಶಾಹಿ ಪುರುಷ ಪ್ರಧಾನ ಮೌಲ್ಯಗಳ ಸಂಕೇತವಾಗಿ ಮೂಲ ತಾಯಿ ಪಂಥದ ಮೌಲ್ಯ, ಆಶಯಗಳೇ ವಿಕೃತಗೊಳ್ಳಲು ಕಾರಣರಾದರು.

ದಲಿತರ ಎಲ್ಲಮ್ಮನನ್ನು (ಎಲ್ಲದರ ಅಮ್ಮ ಅಥವಾ ಎಲ್ಲೆಯ ಅಮ್ಮ) ದಲಿತರಿಂದ ಪ್ರತ್ಯೇಕಿಸಿ ಇತರ ಸಂಸ್ಕೃತಿಗಳು ಸ್ವಾಹಾ ಮಾಡಿದಾಗಲೂ ದಲಿತ ಸಂಸ್ಕೃತಿ ತನ್ನ ಜೀವಗುಣಕ್ಕನುಗುಣವಾಗಿ 'ಮಾತಂಗಿ'ಯ ಮೂಲಕ ಎಲ್ಲಮ್ಮ ಪಂಥಕ್ಕೆ ಕಚ್ಚಿಕೊಂಡೇ ಉಳಿಯಿತು.

ಮೊಟ್ಟಮೊದಲ ಎಲ್ಲಮ್ಮ ಪಂಥ ದ್ರಾವಿಡ ಪಶುಪಾಲಕರ ಹಟ್ಟಿ ಸಂಸ್ಕೃತಿಗೆ ಹೊಂದಿಕೊಳ್ಳುವುದಿಲ್ಲ; ಆರ್ಯವೈದಿಕರ ಪಶುಪಾಲಕ ಸಂಸ್ಕೃತಿಗಂತೂ ದೂರವೇ ಉಳಿಯಿತು, ಎಂಬುದನ್ನು ಮನಗಾಣಬೇಕು.

ಎಲ್ಲಮ್ಮ ಪಂಥದಲ್ಲಿ ಇಂದು ಉಳಿದಿರುವ ದಲಿತ ಸಂಸ್ಕೃತಿ–ಆಶಯಗಳನ್ನು ಹೀಗೆ ಪಟ್ಟಿ ಮಾಡಬಹುದು :–

೧) ಸವದತ್ತಿಯ ಜೋಗುಳಬಾವಿಯ ಸತ್ಯವ್ವ ಎಲ್ಲಮ್ಮನ ತಾಯಿ, ಮಾತಂಗಿ ತಂಗಿ ಎಂದು ಜನಪದರ ಹಾಡುಗಳಲ್ಲಿರುವುದರಿಂದ, ಎಲ್ಲಮ್ಮ ಹೊಲೆಯ ಮಾದಿಗರವಳೆಂಬುದು ಸ್ಪಷ್ಟ.

೨) ಜೋಗತಿ–ದೀಕ್ಷೆ ಪಡೆದವಳು ಸವದತ್ತಿಯಿಂದ ತನ್ನ ಗ್ರಾಮಕ್ಕೆ ಹೋದ ನಂತರ ೫ ದಿನ ಚರ್ಮಕಾರರ ಮನೆಯಲ್ಲಿ ಮಾತಂಗಿ ಕಟ್ಟೆಯ ನೀರಿನಿಂದ (ಕರಿಬಾನಿ ನೀರು) ಶುದ್ಧಳಾಗಿ ಮಾತಂಗಿಯನ್ನು ಪೂಜಿಸಬೇಕು ಮತ್ತು ಬಡವರಿಗೆ ಊಟ ಹಾಕಬೇಕು. (ಜಾ.ಸಾ.ದ.೧೧.ಎಸ್.ಕೆ. ಕಡೇತೋಟದ ಅವರ ಲೇಖನ)

೩) ವಿಧಿಯಾಚರಣೆಯಲ್ಲಿ ಬತ್ತಲೆಯಾಗುವಾಗ, ಉಟಗಿತೊಡುವಾಗ, ಬೇವಿನ ತಟ್ಟು ಬಿಚ್ಚುವಾಗ ಮಾತಂಗಿಯರು ಕಡ್ಡಾಯವಾಗಿ ಇರಬೇಕು. ಉಟಗಿ ಉಡಿಸುವ ಮುನ್ನ ಮಾತಂಗಿಯರೇ ಉಡುವವರ ಮುಖ ತೊಳೆದು ಭಂಡಾರ ಹಚ್ಚುತ್ತಾರೆ. (ಅದೇ ಪು. ೧೦೩)

೪) ಜೋಗಪ್ಪ ಜೋಗಮ್ಮ ಆಗುವವರು ಜೋಗುಳಬಾವಿ ಹತ್ತಿರ ಸ್ನಾನ ಮಾಡಿ ಎಲ್ಲಮ್ಮನ ಗುಡಿಯವರೆಗೆ ನಗ್ನರಾಗೆ ಬರುವರು.

೫) ಗೌರಿಹುಣ್ಣಿವೆಯ ಹಿಂದಿನ ರಾತ್ರಿ ಎಲ್ಲಮ್ಮನ ಪೂಜಾರಿಗಳು ಎಣ್ಣೆ ಹೊಂಡದಲ್ಲಿ ಸ್ನಾನ ಮಾಡಿ ಬತ್ತಲೆಯಾಗೇ ಗುಡಿಗೆ ಬಂದು ದೇವಿಗೆ ನಮಿಸುವರು.

೬) ಎಲ್ಲಮ್ಮ ರಂಡಿ ಹುಣ್ಣಿವೆಗೆ (ಹೊಸ್ತಿಲು ಹುಣ್ಣಿವೆ) ವಿಧವೆಯಾಗುವ, ಮುತ್ತೈದೆ ಹುಣ್ಣಿವೆಗೆ (ದವನದ ಹುಣ್ಣಿವೆ) ಮತ್ತೆ ಮುತ್ತೈದೆಯಾಗುವ ವಿಧಿಗಳನ್ನು ಆಚರಿಸುತ್ತಾರೆ. ರಂಡಿ ಹುಣ್ಣಿವೆಗೆ ಪೂಜೆಯಲ್ಲಿ ಅರಿಶಿಣ ಮಾತ್ರ ಬಳಸುತ್ತಾರೆ. ಉಳಿದ ದಿನಗಳಲ್ಲಿ ಕುಂಕುಮದ ಬಳಕೆಯಿದೆ. (ಪು. ೯೭) ಹಳದಿ ಕೃಷಿ ಬದುಕಿನ ಬರಡು ಕಾಲವನ್ನು, ಕುಂಕುಮ ಮಳೆಗಾಲದ ಬೆಳೆ ಸಮೃದ್ಧಿಯನ್ನು ಸೂಚಿಸುತ್ತವೆನ್ನಬಹುದು.

೭) ಪ್ರತಿದಿವಸ ದೇವಿಗೆ ರಾತ್ರಿ ಹಾಸಿಗೆ ಸೇವೆಗೆ ಮಂಚ ಸಿದ್ಧಗೊಳಿಸಲಾಗುತ್ತದೆ. ಹುಣ್ಣಿವೆಗಳಲ್ಲಿ ಪಲ್ಲಕ್ಕಿ ಸೇವೆ, ವಿವಿಧ ಪಕ್ವಾನ್ನಗಳ ಎಡೆ ಅರ್ಪಣೆ ಇವಾವೂ ವೈದಿಕ ಪೂಜಾಪದ್ಧತಿಯಂತೆ ನಡೆಯಲಾರವು.

೮) ಎಲ್ಲಮ್ಮನ ಹಾಡುಗಳಲ್ಲಿ ಪದೆ ಪದೆ ಎಲ್ಲಮ್ಮ ಸಿದ್ಧರನ್ನು ಸದೆ ಬಡಿದ ಪ್ರಸ್ತಾಪಗಳು ಬರುತ್ತವೆ. ಪಶುಪಾಲಕ ದ್ರಾವಿಡರ ಸಿದ್ಧಪಂಥಕ್ಕೆ ಈ ತಾಯಿಪಂಥ ವಿರೋಧವಿದ್ದುದೇ ಇದರ ಸೂಚನೆ.

೯) ಜೋಗಪ್ಪ (ಮ್ಮ)ಗಳಿಗೆ ಸ್ಥಾನಿಕನು ಮುತ್ತು ಕಟ್ಟುವ ದೀಕ್ಷಾ ವಿಧಿಯಲ್ಲಿ ಚರ್ಮದಿಂದ ಮಾಡಿದ ಅರಸನ ಪಾದವನ್ನು ದಾರದಲ್ಲಿ ಪೋಣಿಸಿ ಕಟ್ಟುತ್ತಾನೆ.

೧೦) ಚಂಡಾಳಿಕೆ (ಚಾಂಡಾಲಿಕೆ)ಯಿಂದ ಎಲ್ಲಮ್ಮ ಪಂಥದ ಪ್ರಧಾನ ವಾದ್ಯವಾದ ಚೌಡಿಕೆ ಹುಟ್ಟಿದ್ದೆಂದು ಕಿಟೆಲ್‌ರ ಮಾತು. (೧೧೯). ಚಾಂಡಾಲ (ಳ) ವಲ್ಲಕಿ (ತಂತಿವಾದ್ಯ) > ಚಾಂಡಾಲಿ(ಳಿ)ಕೆ, ಚಾಂಡಾಲಿ–ಳಿ–ಕೆ>ಚೌಡಿಕೆ ಆಗಿದೆ ಎಂದು ವೀರಣ್ಣ ದಂಡೆಯವರ ವಾದ. 'ಚೌಡಿ' ಎಂಬ ದೈವವೇ ಇರುವುದರಿಂದ ಈ ಪದವು 'ಚೌಡಿಕೆ' ಗೆ ಕಾರಣವಿದೆಯೊ ನೋಡಬೇಕು.

೧೧) ಹರಿಜನ ಹೆಂಗಸರೇ ಹೆಚ್ಚಾಗಿ ಕೆಲವು ಸಲ ಕಡ್ಡಾಯವಾಗಿ ಜೋಗತಿಯರಾಗುತ್ತಾರೆ.(೧೪೨) ಜೋಗತಿಯರೆಲ್ಲ ವೇಶ್ಯೆಯರಲ್ಲ. ಗರತಿ ಮುತ್ತು, ಸೂಳೆ

ಮುತ್ತು, ಜೋಗತಿಮುತ್ತು ಧರಿಸುವ ಬೇರೆ ಬೇರೆ ಜೋಗಮ್ಮಗಳಿದ್ದು, ಮದುವೆಯಾದ ಸ್ತ್ರೀಯರು ಬಿಳಿಬಣ್ಣದ ಮುತ್ತು ಧರಿಸಿ (ಗರತಿ ಮುತ್ತು) ಸಂಸಾರಸ್ಥರಾಗಿರುತ್ತಾರೆ.

೧೨) ಭಾರತ ಹುಣ್ಣಿಮೆಯಂದು ಗ್ರಾಮೀಣರು ಜೋಗಮ್ಮರನ್ನು ಮನೆಗೆ ಕರೆಸಿ ಪಡ್ಡಲಿಗೆ ತುಂಬುವುದು ಕಡ್ಡಾಯ ವಿಧಿ.

೧೩) ಜಾತಿ, ಲಿಂಗ, ವರ್ಗ ಭೇದವಿಲ್ಲದಂತೆ ಎಲ್ಲಮ್ಮ ಪಂಥದ ಪ್ರಭಾವವಿದೆ.

ಉತ್ತರ ಕರ್ನಾಟಕದಲ್ಲಿ 'ಎಲ್ಲಮ್ಮ' ದಲಿತರತ ತಾಯಿ ಪಂಥದ ಪ್ರಧಾನ ನೆಲೆಯಾಗಿ ತುಂಬ ವ್ಯಾಪಕವಾದ ಪ್ರಭಾವ ಬೀರುವ ದೈವವಾಗುಳಿದರೆ, ಪಶುಪಾಲಕರ 'ಮೈಲಾರ' ಹೀಗೆ ಪುರುಷ ಪಂಥದ ಪ್ರಧಾನ ನೆಲೆಯಾಯಿತು. ಕನ್ನಡ ಜನಕುಲಗಳು ಒಂದೆಡೆ ಎಲ್ಲಮ್ಮನಿಗೆ, ಇನ್ನೊಂದೆಡೆ ಮೈಲಾರನಿಗೆ ನಡಕೊಳ್ಳುವ ಮೂಲಕ ದ್ರಾವಿಡ ಸಂಸ್ಕೃತಿಯ ಪ್ರಧಾನ ಆಶಯಗಳನ್ನು ಪ್ರತಿನಿಧಿಸಿದರು. ಒಂದು ಬಗೆಯ ಸಾಂಸ್ಕೃತಿಕ ಸಮತೋಲನದ ಸೃಷ್ಟಿಗೆ ಕಾರಣರಾದವರು. ಎರಡೂ ದೈವಗಳಿಗೆ ಎಲ್ಲರೂ ಒಕ್ಕಲಾದರು. ಜನಪದ ಗುರು ವರ್ಗವೂ ಆದರು.

**ಇನ್ನೊಂದೆರಡು ನಿದರ್ಶನಗಳು :**

ಕೊಪ್ಪಳ ಜಿಲ್ಲೆಯಲ್ಲಿ ತುಂಗಭದ್ರೆಯ ದಂಡೆಯಲ್ಲಿರುವ ಹುಲಿಗಿ ಗ್ರಾಮದ 'ಹುಲಿಗೆಮ್ಮ' ಈ ಭಾಗದ ರೇಣುಕ ಎಂದೇ ಖ್ಯಾತಳು. ಗಂಗಾಮತದವರು ಪೂಜಾರಿಗಳು. ಆದರೆ ಈಗ ಬ್ರಾಹ್ಮಣರ ಹಿಡಿತ ಹೆಚ್ಚಿದೆ. ಹುಲಿಗೆಮ್ಮನ ಗುಡಿಯ ಅಂಗಳದಲ್ಲಿ ದೇವಿಗೆ ಮುಖಾಮುಖಿಯಾಗಿ ಮಾತಂಗಿಯ ಗುಡಿಯಿದೆ. ಮಾದಿಗ ಹೆಂಗಸು ಪೂಜಾರಿಣಿ. ಹುಲಿಗೆಮ್ಮನ ಜೋಗಪ್ಪ–ಜೋಗಮ್ಮಗಳು ಹುಲಿಗೆಮ್ಮ ಎಲ್ಲಮ್ಮನೆಂದೂ, ಆಕೆಯ ಸೋದರಿ ಎಂದೂ ಭಾವಿಸುತ್ತಾರೆ.

ಬಳ್ಳಾರಿ ಜಿಲ್ಲೆಯ ಉಚ್ಚಂಗಿದುರ್ಗ ಚಾರಿತ್ರಿಕವಾಗಿ ಪ್ರಸಿದ್ಧಿ ಪಡೆದಿರುವ ಸ್ಥಳ. ಕಲ್ಲು ಗುಡ್ಡದ ಮೇಲಿರುವ ಉಚ್ಚಂಗೆಮ್ಮನನ್ನು ಎಲ್ಲಮ್ಮನೆಂದೇ ಇಲ್ಲಿಯ ಜನ ಭಾವಿಸಿದ್ದಾರೆ. ಉಚ್ಚಂಗೆಮ್ಮನ ಗುಡಿಯ ಮುಂದೆ ಮಾತಂಗಿಯ ಚಿಕ್ಕ ಗುಡಿಯಿದೆ. ಹುಲಿಗಿ, ಉಚ್ಚಂಗಿ ದುರ್ಗ, ಸವದತ್ತಿಗಳ ದೈವಗಳ ಆರಾಧನಾವಿಧಿಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ.

ಮೆಡಲೆನ್ ಬೈರದೇವು ಅವರ ಅಧ್ಯಯನದ ಪ್ರಕಾರ ತಮಿಳುನಾಡಿನ ಮಾರಿಯಮ್ಮನೇ ರೇಣುಕೆ. ಮಹಿಷಾಸುರನನ್ನು ಮೂರುದಿನ ಮಾತ್ರ ಮದುವೆಯಾಗಿ ವರ್ಷದ ಉಳಿದ ದಿನಗಳಿಗೆಲ್ಲ ಜಮದಗ್ನಿಗೆ ಆಕೆ ಹೆಂಡತಿಯಾಗುವಳು.

ಮಾರಿಯೆ ರೇಣುಕೆ ಎಂಬ ಅಂಶವನ್ನು ಗಮನಿಸಿ. ಮಾರಿ ವಲಸೆಗಾರ ಪಶುಪಾಲಕರ ಸಣ್ಣ ಸ್ತ್ರೀ ದೈವ. ರೇಣುಕೆ ಪಶುಪಾಲಕ ವೈದಿಕರ ಸೃಷ್ಟಿ. ದ್ರಾವಿಡ ಕೃಷಿಕರ ಜತೆ ಇವರಿಬ್ಬರ ಸಂಪರ್ಕ ಗಾಢವಾದಾಗ ಇವರು ಪಶುಪಾಲನೆಯ ಜತೆ ಕೃಷಿಕರೂ ಆದರು. ಆದಿಮ ಕೃಷಿಕರ ಮಾತೃದೈವಗಳ ಪ್ರಾಬಲ್ಯದಿಂದ ಈ ಪಶುಪಾಲಕರ ಮಾರಿ, ರೇಣುಕೆಗಳೂ ವ್ಯಾಪಕವಾದ ಶಕ್ತಿ ಪ್ರಭಾವಗಳನ್ನು ಪಡೆದು ನಾಡಿನಲ್ಲೆಲ್ಲ ಹಬ್ಬುವಂತಾಯಿತು. ಹೊಸ ಪರಿಸ್ಥಿತಿಯಲ್ಲಿ ಎಲ್ಲಮ್ಮ ರೇಣುಕೆ, ಎಲ್ಲಮ್ಮ ಮಾತಂಗಿ ಸಮೀಕರಣ ನಡೆಯಿತು. ಕೆಲವು ಕಡೆ ಎಲ್ಲಮ್ಮ ಮಾರಿ ಸಮೀಕರಣವೂ ಕೂಡ. ಉತ್ತರ ಕರ್ನಾಟಕದಲ್ಲಿ ಎಲ್ಲಮ್ಮ, ಊರಮ್ಮ (ದ್ಯಾಮವ್ವ, ದುರುಗವ್ವ)ಗಳ ನಡುವೆ ವ್ಯತ್ಯಾಸ ಸ್ಪಷ್ಟವಾಗುಳಿಯಿತು. ಆದರೆ ದಕ್ಷಿಣ ಕರ್ನಾಟಕದಲ್ಲಿ ಮಾರೆಮ್ಮನಲ್ಲಿ ಊರಮ್ಮನ ಕಲಬೆರಕೆ ಹೆಚ್ಚಿತು.

**ತಮಿಳುನಾಡಿನ ಇನ್ನೊಂದು ಅನುಭವ :**

ತಮಿಳುನಾಡಿನಲ್ಲಿ ಕಾಟ್ಟವರಾಯ ಪಂಥವಿದೆ. ಈತನ ಬಗ್ಗೆ ಜನಪದ ಕಾವ್ಯಗಳಿವೆ. ಕೆಳಜಾತಿಯ ಕಾಟವರಾಯ ಮೇಲ್ಜಾತಿ ಹೆಂಗಸರನ್ನು ಬಯಸುವ ಕತೆ ಇದರಲ್ಲಿದೆ ಎಂದು ಡೆವಿಡ್ ಡೀನ್ ಶುಲ್‌ಮನ್ ಬರೆದಿದ್ದಾರೆ. ಕಂಚಿ ಕಾಮಾಕ್ಷಿಯ ಪ್ರಚೋದನೆಯಿಂದ ಕಾಟ್ಟವರಾಯ ೧೦೦೦ ಬ್ರಾಹ್ಮಣರನ್ನು ಹಿಂಸಿಸುವನು. ಒಂದು ರಾತ್ರಿ ೧೦೦೦ ಪರ್‍ಯೆಯ (ಹೊಲೆಯ) ಗಂಡಸರನ್ನು ೧೦೦೦ ಬ್ರಾಹ್ಮಣ ಹೆಂಗಸರ ಪಕ್ಕಕ್ಕೆ ಮಲಗಿಸುವನು. ೧೦೦೦ ಬ್ರಾಹ್ಮಣರನ್ನು ೧೦೦೦ ಪರ್‍ಯೆಯ ಹೆಂಗಸರ ಮಗ್ಗುಲಿಗೆ ಮಲಗಿಸುವನು. ಮರುದಿನ ಮೈಲಿಗೆ ಕಳೆಯಲು ಹೋಮ ಮಾಡಿಸಿ ಜುಟ್ಟು ಜನಿವಾರ ಪಂಚಾಗಗಳನ್ನು ಹೋಮದಲ್ಲಿ ಹಾಕಿಸಿ ರಾಕ್ಷಸರ ಮೂತ್ರವನ್ನು ಪವಿತ್ರ ಜಲದಂತೆ ಬಳಸುವನು. ಕೋಣನ ಕರುಳನ್ನು ಜನಿವಾರ ಮಾಡುವನು.

ಷಣ್ಮುಖನೇ ಕಾಟಮರಾಯನೆಂದು ಕೆಲವರು ಭಾವಿಸುತ್ತಾರೆ. ಈತನ ತಾಯಿ ಕಾಮಾಕ್ಷಿ. ಕತೆಯ ಕೊನೆಗೆ ಶಿವ ಕಂಬ ಏರುವ ಮಗನನ್ನು (ಕಾಟಮರಾಯ) 'ಓ ಪರ್‍ಯೆಯನ್ ಬಾ' ಎಂದು ಕರೆಯುವನು.

ಅದ್ಭುತವಾದ ಈ ಕತೆ ದಕ್ಷಿಣದ ತಮಿಳುನಾಡಿನ ದಲಿತರು, ಶೋಷಕ ಬ್ರಾಹ್ಮಣರ ವಿರುದ್ಧ ಹೂಡಿದ ಹೋರಾಟದ ದಾಖಲೆ. ಬ್ರಾಹ್ಮಣರು ದಲಿತರ ಹಿಂಸೆಗೆ ಕಾರಣರಾಗದೆ ಇದ್ದಿದ್ದರೆ ಈ ಬಗೆಯ ಕತೆ ಹುಟ್ಟುತ್ತಿರಲಿಲ್ಲ. ಹಾಗಾಗಿ ಇದೂ ಕೂಡ ದಲಿತರ ಅಸ್ಪೃಶ್ಯತೆಗೆ ಬ್ರಾಹ್ಮಣರೇ ಕಾರಣ ಎಂಬುದನ್ನು ಸೂಚಿಸುತ್ತದೆ.

ಇಂಥದೇ ಕತೆ 'ಮದುರೈವೀರನ್'ನದು. ಮೇಲ್ಜಾತಿಯವರ ದೃಷ್ಟಿಯಲ್ಲಿ ಕೀಳಾದುದೇ ನಿಜವಾಗಿ ಶಕ್ತಿಯುತವಾದುದು, ಚಲನಶೀಲವಾದುದು, ಪ್ರಬಲವಾದುದು ಎಂಬ ದಲಿತ ಸಂಸ್ಕೃತಿ ಸತ್ತ್ವವನ್ನು ಈ ಪಂಥಗಳು ಪ್ರತಿಪಾದಿಸುವವು.

ಕಾಟ್ಟಮರಾಯನ ಬಗ್ಗೆ ಮೂರು ಕೃತಿಗಳು ದೊರಕುತ್ತವೆ. ಈತ ಅನೇಕ ಕಡೆ ಕಾಮಾಕ್ಷಿ, ಮಾರಿ, ಅಂಕಾಲಮ್ಮರ ಪರಿವಾರದೇವತೆ. ವಾಟ್ಟಲೈನಲ್ಲಿ ಮಾತ್ರ ಸ್ವತಂತ್ರ ದೈವ. ಪಾಕ್ಕೂರಲ್ಲಿ ಈತನ ಜಾತ್ರೆಯನ್ನು ಮಾಡುತ್ತಾರೆ. (EM. ಮೇಯರ್)

ಕಾಮಾಕ್ಷಿ ದಲಿತರ ದೈವ. ಆಕೆಯ ಎಡಗೈ, ಬಲಗೈಗಳಿಂದ ಮಾದಿಗ ಹೊಲೆಯರು ಹುಟ್ಟಿದರೆಂಬ ಕತೆಯಿದೆ.

**ಆಂಧ್ರದ ಅನುಭವ :**

ಆಂಧ್ರದಲ್ಲಿ ಕಾಟಮರಾಜು ಕತೆಯನ್ನು ಮಾದಿಗರೂ ಕೂಡ ಹಾಡುತ್ತಾರೆ. ಇದರ ಪ್ರಕಾರ ಪೆದ್ದಿರಾಜು ಕಾಟಮರಾಜುವಿನ ತಂದೆ. ಗಂಗೆ ರಕ್ಷಕಿ. ಈಕೆಯ ಸೋದರ ಪೋತರಾಜು. ಈತನ ಬೆಂಬಲಿಗರು ಭೂತಗಳು. ಗಂಗೆ ಕಾಟಮರಾಜುವಿನ ಮನೆದೇವಿ. ಈತ ಪಶುಪಾಲಕ. ಗಂಗೆ ಎಷ್ಟು ಪೀಡಿಸಿದರೂ ಆಕೆಯನ್ನು ಪೂಜದೆ ಹಟ ಮಾಡುತ್ತಾನೆ. ಕೊನೆಗೆ ಸೋಲುತ್ತಾನೆ.

ಈತನನ್ನು ಅಲ್ಲಿ ಕೃಷ್ಣನ ಅವತಾರ ಎನ್ನಲಾಗಿದೆ. ಈ ಕತೆ ಮಾತೃಪ್ರಧಾನ ಸಮಾಜಕ್ಕೆ ಪಿತೃಪ್ರಧಾನ ದ್ರಾವಿಡ ಪಶುಪಾಲಕರು ತಲೆಬಾಗಿದ್ದನ್ನೆ ಸೂಚಿಸುತ್ತದೆ. ಸಾಂಸ್ಕೃತಿಕ ಸಮೀಕರಣಕ್ಕೊಳಗಾದರೆಂಬುದೆ ಕತೆಯ ಒಳವಿಚಾರ.

ವೆಲಮ, ರಡ್ಡಿ, ಕಮ್ಮ ಮುಂತಾದ ಬಲಗೈ ಜಾತಿಗಳ ಜನಪದ ಕಾವ್ಯಗಳಲ್ಲಿ ಪುರುಷ ದೈವಗಳ ಪ್ರಾಬಲ್ಯವಿದ್ದರೆ, ಎಡಗೈ ಜಾತಿಗಳ ಕಾವ್ಯಗಳಲ್ಲಿ ಸ್ತ್ರೀ ದೈವಗಳು ಪ್ರಬಲ. ಕಾಟಮರಾಜ ಆಂಧ್ರದಲ್ಲಿ ಗೊಲ್ಲರ ದೈವ. ಹಾಗಾಗಿ ಆತ ಅಲ್ಲಿ ಪಶುಪಾಲಕ. ಆದರೆ ಮಾದಿಗರು ಗೊಲ್ಲರ ಸಾಂಪ್ರದಾಯಿಕ ಪೂಜಾರಿಗಳು. ಬೋಯ ಬೇಟೆಗಾರರು ಕಾಟಮರಾಜುವಿನ ಆಕಳನ್ನು ಕೊಲ್ಲುವ ಪ್ರಸಂಗ ಕಾವ್ಯದಲ್ಲಿದೆ. ಇದು ಬೇಡರು ಗೊಲ್ಲರಿಗಿದ್ದ ವೈಷಮ್ಯವನ್ನು ಸೂಚಿಸುವುದು.

(ಮೇಲೆ ಸೂಚಿಸಿರುವ ಹಲವು ಲೇಖನಗಳು AIF Hiltebeitel ಅವರು ಸಂಪಾದಿಸಿರುವ **"**Criminal Gods and Demon Devotees**"** ಎಂಬ ಗ್ರಂಥದವು. ೧೯೮೯.)

ದೈವಾರಾಧನೆ (ಭೂತಾರಾಧನೆ) ಕರಾವಳಿ ದಲಿತರಲ್ಲಿ ತುಂಬ ಶಕ್ತಿಯುತವಾಗಿ ಉಳಿದಿದ್ದರೂ, ಇಡಿ ಭಾರತದಲ್ಲಿ ಈ ದಲಿತ ಸಂಸ್ಕೃತಿ ನಾನಾ ರೂಪಗಳಲ್ಲಿ ಪ್ರಚಲಿತವಿದೆ. ಉದಾ: ಬನಾರಸದ ಸುತ್ತಮುತ್ತಲ ಗ್ರಾಮಗಳಲ್ಲಿ **'**ಬ್ರಹ್ಮ ಬಾಬಾ**'**, **'**ಜೋಗಿ ಬೀರ**'** ಮೊದಲಾದ ಭೂತಗಳ ಗುಡಿಗಳಿವೆ. ಇದು ಮುಂದೆ ಸೂಫಿ ಪೀರರ ಪಂಥವಾಗಿ ಬೆಳೆದಿದೆ. ಮಾರಿ ಭವಾನಿಗಳು ರೋಗಗಳನ್ನು ತರುವ ದೈವಗಳೆಂದು ಇಲ್ಲಿಯವರ ನಂಬಿಕೆ.

ಅಕಾಲಿಕವಾಗಿ ಮರಣ ಹೊಂದಿದ ಕೆಳಜಾತಿಯವರು 'ಬೀರ'ರಾಗುತ್ತಾರೆಂದು ಅಲ್ಲಿಯ ಕುರುಬ ಗೊಲ್ಲರಾದ ಅಹಿರ, ಯಾದವರ ಭಾವನೆ. **'**ಲೊರಿಕಿ**'** ಎಂಬ ಹಿಂದಿ ಜನಪದ ಮಹಾಕಾವ್ಯ ಇವರ ಸಾಂಸ್ಕೃತಿಕ ಇತಿಹಾಸವನ್ನು ತಿಳಿಸುತ್ತದೆ. **'**ತೆಲಿ**'**, **'**ನಟ್**'** ಎಂಬ ಜಾತಿ ಜನ ಭೂತಾರಾಧಕರು, ಮಂತ್ರ ತಂತ್ರ, ಮಾಟ ಮದ್ದು ಪ್ರವೀಣರು. ಇಲ್ಲೆಲ್ಲ ತಾಂತ್ರಿಕ ಪದ್ಧತಿ ವಿಶೇಷ. (ಮೇಲೆ ಹೇಳಿದ ಗ್ರಂಥದ Diane.M.Coccari ಅವರ ಲೇಖನ)

ಉತ್ತರ ಭಾರತದಲ್ಲಿ ದ್ರಾವಿಡ (ಪಂಥಗಳ) ಮೂಲದ ಶೈವರು **'**ಭೋಲೆನಾಥ**'** (ಶಿವ), ಭೈರವ, ಕಾಪಾಲಿಕ, ತಾಂತ್ರಿಕ, ನಾಥ ಪಂಥಗಳ ರೂಪದಲ್ಲಿ ತಮ್ಮ ಸಂಸ್ಕೃತಿ ಪರಂಪರೆ ಉಳಿಸಿ ಕೊಂಡಿದ್ದಾರೆ. ನೇಪಾಳದಲ್ಲಿ ಭೈರವ ರಾಷ್ಟ್ರೀಯ ದೇವತೆ. ಕಾಟಮಾಂಡುವಿನಲ್ಲಿ ೧೨ ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಲ್ಲಿ ಪಚಲಿ ಭೈರವ ಅಸ್ಪೃಶ್ಯ ನರ್ತಕರಲ್ಲಿ ಅವತರಿಸುವೆನೆಂದು ಹೇಳುತ್ತಾರೆ. (ಎಲಿಜಬೆತ್ c. v. ಅವರ ಲೇಖನ) ಕುಸಲೆ ಎಂಬ ಅರೆ ಅಸ್ಪೃಶ್ಯ ಜಾತಿಯವರು ಇದರ ಪೂಜಾರಿಗಳು

ದೇವದಾಸಿ ರೂಪದ ಭೈರವಿಯನ್ನು ಪುರಿಯ ಜಗನ್ನಾಥ ಭರವನಾಗಿ ಸೇರುವನೆಂಬ ಹೇಳಿಕೆಯಿದೆ. ಮೈಲಾರನೂ **'**ಮಾರ್ತಾಂಡ ಭೈರವ**'**ನೇ. ಕಾಶಿಯಲ್ಲಿ ಭೈರವ ಕ್ಷೇತ್ರಪಾಲ. ಇಲ್ಲಿ ಒಟ್ಟು ೮

ಭೈರವ ಗುಡಿಗಳಿವೆ. ಕಾಂಚಿ ಮಹಾತ್ಮ್ಯದ ಪ್ರಕಾರ ಭೈರವ 'ಆತಂಕ'ನೆಂಬ. ರಾಕ್ಷಸ. ಬ್ರಹ್ಮನ ತಲೆ ಚಿವುಟಿದ ಭೈರವ ಬ್ರಾಹ್ಮಣರನ್ನು ಗೆದ್ದ ದ್ರಾವಿಡರ ಸಂಕೇತವೇ. ಬ್ರಹ್ಮನ ತಲೆ ಬುರುಡೆ ಹಿಡಿದು ೧೨ ವರ್ಷ ಭಿಕ್ಷೆ ಬೇಡಿದ. ಕಾಪಾಲಿಕರು ಇವನ ಅನುಯಾಯಿಗಳು. ಆಂಧ್ರದಲ್ಲಿ ಪೋತರಾಜನಿಗೆ (ಕೋಣ ದೈವ. ಮಹಿಷಾಸುರ) ಭೈರವ ಎನ್ನುತ್ತಾರೆ.

ಭೈರವ ಸ್ಮಶಾನ ದೇವತೆ. ಪಶುಪಾಲಕ ವಲಸೆಗಾರರ ಸಂಸ್ಕೃತಿಗೆ ಈತ ಬಲಗೈ ಹೊಲೆಯರಿಂದ ಪ್ರವೇಶ ಪಡೆದಿರಬೇಕೆಂದು ತೋರುತ್ತದೆ. ಬಲಗೈ ಹೊಲೆಯರು ಸ್ಮಶಾನ ಸಂಬಂಧಿ ವಿಧಿಗಳ ಕರ್ತರು. ದಕ್ಷಿಣಚಾರಿಗಳು. ಶವದಿಂದ ಶಿವ ಹುಟ್ಟಿದೆ ಎಂದು ಗರುಡಪುರಾಣ ಹೇಳುತ್ತದೆ. (ವೀಣಾದಾಸ್ ಪು. ೫೬) ಭೈರವ, ಶಿವ, ಕಾಪಾಲಿಕ ಇವೆಲ್ಲ ಹೊಲೆಯ ಸಂಸ್ಕೃತಿಯ ಅಂಶಗಳು.

ಭೈರವ ಪಂಥವೂ ಬ್ರಾಹ್ಮಣೀಕರಣಕ್ಕೆ ಒಳಗಾಗಿ ಹೋಯಿತು. ಕಾಲಭೈರವ, ಕಪಾಲ ಭೈರವ, ಬಾಲ ಭೈರವ, ಭೂತ ಭೈರವ, ಬಟುಕ ಭೈರವ, ಆನಂದ ಭೈರವ, ವಿಕ್ರಾಂತ ಭೈರವ, ಮುಂತಾದ ನಾನಾ ರೂಪಗಳು ಉತ್ತರ ಭಾರತದಲ್ಲಿವೆ. ಕೇರಳದಲ್ಲಿವೆ. ಕೇರಳದಲ್ಲಿ 'ಭಗವತಿ' ಹೀಗೆ ವಿವಿಧ ಆಕಾರ ಪಡೆದಿರುವ ಸ್ತ್ರೀದೈವ. ಮಾರೆಮ್ಮನೂ ಹೀಗೇ ಅಲ್ಲವೇ?



## ಅಧ್ಯಾಯ : ೪

**ಕರ್ನಾಟಕ ರಾಜವಂಶಗಳ ಇತಿಹಾಸ ಮತ್ತು ದಲಿತರು :**

ನಮ್ಮ ದೇಶದ ಹಲವಾರು ರಾಜವಂಶಗಳಂತೆ ಕರ್ನಾಟಕದ ಅರಸು ಮನೆತನಗಳೂ ಬ್ರಾಹ್ಮಣರು ಹೇಳಿದ್ದ 'ಕ್ಷತ್ರಿಯ ವರ್ಣ'ಕ್ಕೆ ಸೇರಿದುವಲ್ಲ. ಕೆಳಜಾತಿ ಅಥವಾ ಬುಡಕಟ್ಟು ರಾಜ್ಯಗಳು ಪ್ರಬಲಗೊಂಡಾಗ ಬ್ರಾಹ್ಮಣರು ಶ್ರೀಮಂತ ಯಜ್ಞಗಳನ್ನು ಮಾಡಿಸುವ ಮೂಲಕ ಅವರನ್ನು 'ಕ್ಷತ್ರಿಯ ವರ್ಣ'ಕ್ಕೆ ಸೇರಿಸುತ್ತಿದ್ದರು.

ಕರ್ನಾಟಕದ ಪ್ರಥಮ ಸಾಮ್ರಾಜ್ಯ ಚಾಲುಕ್ಯರದು. ದ್ರಾವಿಡ ಜನಕುಲಗಳಲ್ಲಿ ಚಾಲುಕ್ಯರು ಯಾರು?

ಕ್ರಿ.ಶ. ೬೧೦ ರ ಬಾದಾಮಿ ಶಾಸನದಲ್ಲಿ (K.I.I.) ಪೊಲೆಕೇಸಿ ವಲ್ಲಭನ ಉಲ್ಲೇಖವಿದೆ. ಪುಲಿಕೇಸಿ ಎಂದು ಹೇಳುತ್ತ ಬಂದ ಬಾದಾಮಿ ಚಾಲುಕ್ಯ ವಂಶದ ಪ್ರಖ್ಯಾತ ಅರಸ 'ಪೊಲೆ'ಕೇಸಿ. ಇಲ್ಲಿರುವ ಪೊಲೆ–'ಪೊಲೆಯ' ದ (ಹೊಲೆಯ) ಸವೆದ ರೂಪ. ಪ್ರಸ್ತುತ ಶಾಸನ ಬಾದಾಮಿ ಚಾಲುಕ್ಯರು ಹೊಲೆಯರೆಂಬುದನ್ನು ಸಾಬಿತು ಮಾಡುವ ಇನ್ನೂ ಕೆಲವು ಅಂಶಗಳನ್ನು ಒಳಗೊಂಡಿದೆ. ಇದು ಸಂಸ್ಕೃತದಲ್ಲಿರುವ ಚಿಕ್ಕ ಶಾಸನ. ಅದು–

"ಸ್ವಸ್ತಿ ಶ್ರೀ ಮದ್ವಿಜಯ ವಾತಾಪ್ಯ........
ನೇ ಪರಮ ಭಾಗವತಾನಾಂ ಸ್ವಾಮಿ.......
ನ ಮಾತೃಗಣ ಪಾದಾನುದ್ಧ್ಯಾತಾನಾಂ...
ತ್ರಾಣಾಂ ಹಾರೀತಿಪುತ್ರಾಣಾಂ ಚಲುಕ್ಯಾ...
ಲಂ ಕರಿಷ್ಣೋಃ ಅಶ್ವಮೇಧಾವ ಭೃಥ ಸ್ನಾನ ಪ...
......ಶ್ರೀ ಪೊಲೆಕೇಸಿ ವಲ್ಲಭ ಮ......"

ಮಾತೃ ಮೂಲೀಯ ಕುಲದವರಾದ ಚಾಲುಕ್ಯರು ಹಾರೀತಿ ಎಂಬವಳ ಪುತ್ರರೆಂದೂ, ಸಪ್ತ ಮಾತೃಕೆಯರಿಂದ ಪೋಷಿಸಲ್ಪಟ್ಟವರೆಂದೂ ಹೇಳಿಕೊಳ್ಳುತ್ತಾರೆ. ಕಾರ್ತಿಕೇಯ ಸ್ವಾಮಿ ಕೃಪೆಗೆ ಪಾತ್ರರಾದವರೆಂದೂ, ಹಂದಿ ಗುರುತಿನವರೆಂದೂ ತಿಳಿದಿದೆ.

ಏಳು ತಾಯಂದಿರ ಪಂಥ, ಆರುತಾಯಂದಿರ ಮಗ ಷಣ್ಮುಖ ಇವು ತಾಯಿಪಂಥದ ಸೂಚನೆಗಳೇ. ಆದಿವಾಸಿಗಳ ದೈವಗಳಿವು. ಇವನ್ನು ಆರಾಧಿಸುತ್ತಿದ್ದವರು ಸಾಮ್ರಾಟರ ಹಂತಕ್ಕೇರಿದಾಗ ಸಹಜವಾಗಿ ಇವೂ ಕೂಡ ರಾಷ್ಟ್ರೀಯ ದೈವಗಳಾಗುತ್ತವೆ. ಹಂದಿ ಗುರುತು ಟೋಟೆ (ಕುಲಲಾಂಛನ) ಆಗಿದ್ದಿರಬೇಕು. ಅದುವೇ ಈಗ ರಾಜಲಾಂಛನವಾಗಿ ಮಾರ್ಪಟ್ಟಿತು.

ಚಕ್ರವರ್ತಿಗಳಾಗಿ ಬೆಳೆದ ಚಾಲುಕ್ಯರು ಬ್ರಾಹ್ಮಣರಿಂದ ಕ್ಷತ್ರಿಯ ವರ್ಣಕ್ಕೆ ಸೇರಿದರು. ಇದಕ್ಕಾಗಿ ಅಶ್ವಮೇಧದಂಥ ವೈದಿಕ ಯಜ್ಞವನ್ನು ಮಾಡಿ, ದಾನದತ್ತಿಗಳನ್ನು ವಿಫುಲವಾಗಿ ನೀಡಿ ಬ್ರಾಹ್ಮಣರನ್ನು ಒಲಿಸಿಕೊಂಡರು. ಬ್ರಾಹ್ಮಣರು ಅಂತಿಮವಾಗಿ ಇವರನ್ನು 'ಪರಮ ಭಾಗವತ' ಮತದವರೆಂದು ಕರೆದರು.

'ಭಾಗವತ'ವು ವೈದಿಕರಲ್ಲೇ ಅತ್ಯಂತ ಜನಪರವಾದ ಮತವೆಂದು ಪ್ರಸಿದ್ಧವಿದೆ. ಕೀಳು ಕುಲದವರನ್ನು ವೈದಿಕಶಾಹಿಯ ಸಮೀಪಕ್ಕೆ ತರಲು ಮಾಡಿ ಮಾರ್ಗ "ಭಾಗವತ". ಇದರ ಮೂಲಕ ಕೆಳಜಾತಿ ಅರಸರು ಕ್ಷತ್ರಿಯ ವರ್ಣ ಸೇರುವುದಕ್ಕೆ (ಅಂದರೆ ವೈದಿಕೀರಣಕ್ಕೆ) ಅವಕಾಶವಾಗುತ್ತಿತ್ತು.

ಬುಡಕಟ್ಟು ಸ್ಥಿತಿಯಲ್ಲಿ ರಾಜರಾಗಿದ್ದ ಬೇಸಾಯಗಾರ ಚಾಲುಕ್ಯರೆಂಬ (ಸಲಿಕೆಯವರು) ಕುಲದ ದಲಿತರು ಮಾತೃಪ್ರಧಾನ ಸಮಾಜ ವ್ಯವಸ್ಥೆಯನ್ನು ಕೈಬಿಟ್ಟು ವರ್ಗ ಸಮಾಜಕ್ಕೆ ಅಂದರೆ ಪಿತೃಪ್ರಧಾನ ಸಮಾಜಕ್ಕೆ ಪರಿವರ್ತನೆಗೊಂಡರು. ಪರಿವರ್ತಿತರಾದ ನಂತರವೂ ತಮ್ಮ ಮೂಲದ ಸಂಸ್ಕೃತಿಯನ್ನು ಸಂಪೂರ್ಣ ಕೈ ಬಿಟ್ಟಿಲ್ಲ ಎಂಬುದಕ್ಕೆ 'ಮಾತೃಗಣ', 'ಹಾರೀತಿ ಪುತ್ರ', 'ಪೊಲೆ' ಪದಗಳೇ ಸಾಕ್ಷಿ.

ಬಾದಾಮಿ ಚಾಲುಕ್ಯರ ಕೆಲವು ಶಾಸನಗಳು ರಾಣಿಯರ ಪ್ರಾಬಲ್ಯವನ್ನು ತಿಳಿಸುವುದು ಚಾಲುಕ್ಯರ ಮಾತೃಪ್ರಧಾನ ಸಮಾಜ ಮೂಲದ ಪಳೆಯುಳಿಕೆಯೇ. ಉದಾ: ಸತ್ಯಾಶ್ರಯ ಅರಸನ ತಾಯಿ ವಿನಯವತಿ ವಾತಾಪ್ಯಧಿಷ್ಠಾನದಲ್ಲಿ (ಬಾದಾಮಿ) ಬ್ರಹ್ಮ, ವಿಷ್ಣು, ಮಹೇಶ್ವರರ (ತ್ರಿಕೂಟ) ಪ್ರತಿಷ್ಠಾಪನೆ ಮಾಡುತ್ತಾಳೆ. (ಬಾದಾಮಿ ಶಾಸನ ಕ್ರಿ.ಶ. ೬೯೯ ಸಂಸ್ಕೃತ) ಬಾದಾಮಿ ಆಗ ವೇದಶಾಸ್ತ್ರವಿದರಾದ ಬ್ರಾಹ್ಮಣರ ಅಗ್ರಹಾರವಾಗಿತ್ತು. ವೈದಿಕ ಸಂಸ್ಕೃತಿಯ ಪ್ರಭಾವ ಎಷ್ಟೊಂದು ಗಾಢವಾಗಿತ್ತು ಎಂಬ ಅಂಶವೇ ಇದು. ಸಂಸ್ಕೃತದಲ್ಲಿ ದೇಗುಲ ನಿರ್ಮಿಸಿದ್ದನ್ನು ಹೇಳುವ ಶಾಸನ ಕನ್ನಡವನ್ನು ಪ್ರಾಕೃತಭಾಷೆ ಎನ್ನುತ್ತದೆ. ಸುಂಕ, ದತ್ತಿ, ವಿವರಗಳು ಮಾತ್ರ ಕನ್ನಡದಲ್ಲಿವೆ. ಪ್ರತಿಷ್ಠೆಗೆ ಸಂಸ್ಕೃತವಿತ್ತು, ವ್ಯವಹಾರಕ್ಕೆ ಕನ್ನಡ ಬಳಕೆಯಾಗುತ್ತಿತ್ತು.

ಬಾದಾಮಿ ಸುಪ್ರಸಿದ್ಧ ನಗರ, ರಾಜಧಾನಿ, ವ್ಯಾಪಾರಿಕೇಂದ್ರ, ವಿದ್ಯಾಸ್ಥಾನ, ದೇಗುಲ ಸಂಕೀರ್ಣಗಳ ಆವಾಸವಾಗಿತ್ತು. ಸ್ಥಳೀಯ ನೆಲೆಯ ದಲಿತ ಚಾಲುಕ್ಯರು ಅಗ್ರಹಾರ ಬ್ರಾಹಣರ ಹಿಡಿತಕ್ಕೆ ಬಲವಾಗಿ ಸಿಕ್ಕಿ ಹೋಗಲು ಅವರು ಸುಲಿಗೆ ಮಾಡಿದ ಸಂಪತ್ತೇ ಕಾರಣ.

ಚಾಲುಕ್ಯರು ಬೇಸಾಯಗಾರ ಮೂಲದವರೆನ್ನಲು ಚಾಲುಕ್ಯಕ್ಕೆ 'ಸಲಿಕೆ' ಎಂಬ ಕೃಷಿ ಉಪಕರಣದ ಅರ್ಥವಿದೆ ಎಂದು ಹೇಳುವುದೂ ಒಂದು ನಿದರ್ಶನವೇ. ಇವರು ತಮ್ಮ ಶಾಸನಗಳಲ್ಲಿ ತಮ್ಮ ವಂಶದ ಹೆಸರನ್ನು 'ಚಲ್ಕ್ಯ', 'ಚಲಿಕ್ಯ', 'ಚಳ್ಕ್ಯ', 'ಚಳಿಕ್ಯ', 'ಚಳುಕ್ಯ' ಎಂದು ಹೇಳಿಕೊಂಡಿದ್ದಾರೆ. ಸಲಿಕೆಯ ಸಂಸ್ಕೃತೀಕರಣಗೊಳ್ಳಲು ಹೋಗಿ ಈ ವಿಕಾರ ರೂಪಗಳನ್ನು ಪಡೆದಿರಬೇಕು.

ಕ್ರಿ.ಶ. ೬೦೦ ರಿಂದ ಮುಂದಿನ ಅನೇಕ ಶತಮಾನಗಳವರೆಗೆ ಭಾರತದ ಹಲವಾರು ಭಾಗಗಳನ್ನು ಆಳಿದ ಚಲುಕ್ಯ ವಂಶ ಪೂರ್ವ ಚಾಲುಕ್ಯ, ವೇಮುಲವಾಡದ ಚಾಲುಕ್ಯ, ಕಲ್ಯಾಣಿ ಚಾಲುಕ್ಯ ಮೊದಲಾದ ಹೆಸರು ಪಡೆಯಿತು.

ತೀರ ನಂತರದ ಚಾಲುಕ್ಯ ಅರಸರ ಶಾಸನಗಳಲ್ಲಿ ಮಾತ್ರ ಚಾಲುಕ್ಯ ವಂಶವನ್ನು ವೈದಿಕ ಪುರಾಣಗಳ ಆಧಾರದಲ್ಲಿ ನಿರ್ವಚಿಸಲು ಬ್ರಾಹ್ಮಣರು ಯತ್ನಿಸಿದ್ದಾರೆ. "ಹಾರೀತಿ ಪಂಚಶಿಖ ಎಂಬ ಋಷಿ ದೇವತೆಗಳಿಗೆ ತರ್ಪಣ ಬಿಡುತ್ತಿದ್ದಾಗ ಅವನ ಚುಲ್ಕ (ಬೊಗಸೆ)ದಿಂದ ಹುಟ್ಟಿದ ವೀರಪುರುಷನೇ ಚಾಲುಕ್ಯರ ಮೂಲಪುರುಷ' ಎಂದು ಆರನೇ ವಿಕ್ರಮಾದಿತ್ಯನ ಹಂದಾರಿಕೆ ಶಾಸನದಲ್ಲಿದೆ. ವಿಕ್ರಮಾದಿತ್ಯನ ಆಸ್ಥಾನ ಕವಿ ಬಿಲ್ಹಣ ತನ್ನ 'ವಿಕ್ರಮಾಂಕದೇವ ಚರಿತ'ದಲ್ಲಿ ಬ್ರಹ್ಮನ ಚಲುಕದಿಂದ ಚಾಲುಕ್ಯರ ಮೂಲಪುರುಷ ಹುಟ್ಟಿದವನೆಂದು ಹೇಳುತ್ತಾನೆ. ಇವೆಲ್ಲ ಕಾಲ್ಪನಿಕ ಸೃಷ್ಟಿಗಳೆಂದು ಬೇರೆ ಹೇಳಬೇಕಿಲ್ಲ. ಚಕ್ರವರ್ತಿಗಳ ಘನತೆಗೆ ತಕ್ಕಂತೆ ಬ್ರಾಹ್ಮಣರು ಈ ಬಗೆಯ ಪುರುಷ ಮೌಲ್ಯ ಕೇಂದ್ರಿತ ಕಲ್ಪನೆಗಳನ್ನು ಸೃಷ್ಟಿಸಲೆ ಬೇಕಿತ್ತು. ಇದು ಚಾಲುಕ್ಯರ ಕೀಳುಕುಲವನ್ನು ಮರೆಯಿಸಲು ಅಗತ್ಯವಿತ್ತು. ಆದರೂ ಗುರುತುಗಳನ್ನು ಸಂಪೂರ್ಣ ಅಳಿಸಿ ಹಾಕಲು ಸಾಧ್ಯವಾಗಲಿಲ್ಲ.

ಚಾಲುಕ್ಯರ ರಾಜ್ಯ ಎಂದಿನಿಂದ ಪ್ರಾರಂಭವಾಯಿತೆಂದು ಹೇಳುವ ಆಧಾರಗಳಿಲ್ಲ. ಜಯಸಿಂಹ, ಇವನ ಮಗ ರಣರಾಗರ ಹೆಸರುಗಳಂತೂ ಇವೆ. ಆದರೆ ಜಯಸಿಂಹನ ಹಿಂದೆ ಅನೇಕ ರಾಜರಿದ್ದರೆಂದು ಶಾಸನಗಳು ಹೇಳುತ್ತವೆ. ರಣರಾಗನ ಮಗ ೧ನೇ ಪೊಲೆಕೇಶಿ (ಕ್ರಿ.ಶ. ೫೩೫–೫೬೬) ಸಾಮ್ರಾಟನಾದುದರಿಂದ ಇವನ ಕಾಲದ ವಿಷಯಗಳು ಸಾಕಷ್ಟು ದೊರಕುತ್ತವೆ. ಇವನ ತಂದೆ ಮತ್ತು ಅಜ್ಜಂದಿರ ಹೆಸರು ಮಾತ್ರ ಉಳಿದಿರುವುದು ತರ್ಕಬದ್ಧವೇ. ಅಂದರೆ ಪೊಲೆಕೇಸಿಗೂ ತನ್ನ ಅಜ್ಜನ ತಂದೆಯ ಹೆಸರು ಕೂಡ ತಿಳಿದಿರಲಿಲ್ಲ. ಈತ ಹಿರಣ್ಯ ಗರ್ಭ, ಅಶ್ವಮೇಧ, ಅಗ್ನಿಸ್ತೋಮ, ಅಗ್ನಿಚಯನ, ವಾಜಪೇಯ, ಬಹುಸುವರ್ಣ, ಪೌಂಡರೀಕ ಯಾಗಗಳನ್ನು ಮಾಡಿಸಿದ ನಂತರವೇ ಬ್ರಾಹ್ಮಣರು ಇವನನ್ನು ಕ್ಷತ್ರಿಯ ವರ್ಣಕ್ಕೆ ಸೇರಿಸಿರಬೇಕು. ಇವೆಲ್ಲವೂ ಬ್ರಾಹ್ಮಣರ ಕೊಬ್ಬು ಬೆಳೆಸುವ ತುಂಬ ವೆಚ್ಚದ ಯಜ್ಞಗಳು.

ಬರಿ ಚಾಲುಕ್ಯರಷ್ಟೇ ಅಲ್ಲ ನಾಡಿನ ಎಲ್ಲ ಅರಸು ಮನೆತನಗಳ ಚರಿತ್ರೆಯನ್ನು ದಲಿತ ದೃಷ್ಟಿಕೋನದಿಂದ ಪುನರ್‌ನಿರ್ಮಿಸಬೇಕಿದೆ. ಲೂಯಿಸ್ ಡ್ಯೂಮಾಂಟ್ (ಹೊಮೊಹೈರಾರ್ಕಿಕಸ್) ದಕ್ಷಿಣ ಭಾರತದಲ್ಲಿದ್ದ ರಾಜರು ಕ್ಷತ್ರಿಯ ವರ್ಣೀಯರಾಗಿರಲಿಲ್ಲ ಎಂದು ಸರಿಯಾಗೇ ಹೇಳಿದ್ದಾನೆ. ಜಾತಿಯಂತೆ ವರ್ಣ ಅನುವಂಶಿಕವಲ್ಲ, ರಕ್ತ ಸಂಬಂಧಿಯೂ ಅಲ್ಲ. ಬ್ರಾಹ್ಮಣನಾಗುವುದು ಕಷ್ಟವಿದ್ದರೂ ಕ್ಷತ್ರಿಯನಾಗುವುದು ಸುಲಭವಿತ್ತು ಎನ್ನುವವನು ಆತ. ಕೊನೆಯ ಮಾತನ್ನು ಒಪ್ಪಲಾಗದು. ಏಕೆಂದರೆ ದ್ರಾವಿಡ ಬ್ರಾಹ್ಮಣರು ಆರ್ಯ ವೈದಿಕರಾಗಿರಲಿಲ್ಲ.

ಶಾಸನಗಳನ್ನು ವಿದ್ವಾಂಸರು ಅನೇಕ ಸಲ ಅಪಾರ್ಥ ಮಾಡುತ್ತ ಬಂದಿದ್ದಾರೆ. ಅವರ ದೃಷ್ಟಿಕೋನಗಳು ಅವರನ್ನು ನಿಯಂತ್ರಿಸುತ್ತವೆ.

ಬಾದಾಮಿಯ ೮ನೇ ಶತಮಾನದ ಒಂದು ಶಾಸನ ಚರ್ಚೆಯ ದೃಷ್ಟಿಯಿಂದ ವಿಶೇಷವಾದುದು, (K. I. I ಸಂ. ೪) ಅದು–

"ಸ್ವಸ್ತಿ ವಿಜಯವಾತಾಪ್ಯಧಿಷ್ಠಾನದಾ....ಶ್ರೀಮಹಾಚಾ

ತುರ್ವಿದ್ಯ ಸಮುದಯಮಿರ್ಚ್ಛಾಸಿರ್ವ್ವರುಂ ಈ ಊರ

ಸಮ್ಮಗಾಱರಾ ಕವಟ್ತೆಯಾನ್ವಿಟ್ಟಾರ್ ದೋಷಂಗೆ

ಯ್ದೊನ್ಗೆ ದಣ್ಣಂ ನಾಡೊಳ್ಕವಟ್ತೆ ಆದೊಡಂ ಇಲ್ಲಿ ಇಲ್ಲೆ

ಉಣ್ಕು ಕೊಳಿಂಮೆನ್ದೊನ್ಪಞ್ಚ ಮಹಾಪಾತಕನಕ್ಕುಂ

ನಿಡಿಯಮಾರಂ ಪಡೆದೊನ್"

ಇದಕ್ಕೆ ಸಂಪಾದಕರು (R. S. ಪಂಚಮುಖಿ) ಹೇಳಿದ ಅರ್ಥ "ವಾತಾಪಿಯ "ಮಹಾಚಾತುರ್ವಿದ್ಯ ಸಮುದಾಯ"ದ ೨೦೦೦ ಸದಸ್ಯರು ಈ ಊರಿನ ಸಮಗಾರರ ಕವಳ್ತೆಯನ್ನು (Spoils) ಬಿಟ್ಟರು. (remitted the spoils of the cobblers of the place in favour of ನಿಡಿಯಮಸರ who probably represented the cobblers. ದೋಷ ಮಾಡಿದವನಿಗೆ ದಂಡ A person saying 'here', 'there' or giving an evasive reply whenever there was a spoil (of raid) will incure the five great sins'.

'ಕವರ್ತೆ' (ಕವತೆ)ಗೆ ಕಿಟೆಲ್ ಬಲತ್ಕಾರವಾಗಿ ಪಡೆ ಸೂರೆಗೊಳ್ಳು ಎಂಬರ್ಥ ಹೇಳಿದ್ದಾರೆ. ಅವರಲ್ಲಿ ಕವಟ್ಟೆ ಪದದ ಅರ್ಥವಿಲ್ಲ. ಸಂಪಾದಕರು ಕವರ್ತೆಗೆ ಮೂಲಾಜಿಲ್ಲದಂತೆ Spoils ಅರ್ಥ ಆರೋಪಿಸಿಬಿಟ್ಟಿದ್ದಾರೆ.

ಕವಟ್ಟೆ ಸಮಗಾರರ ತೊಗಲಿನ ವಸ್ತುಗಳ ಮೇಲೆ ಹಾಕುತ್ತಿದ್ದ ಸುಂಕವಿರಬಹುದು. "ಕವಟ್ಟೆ ಅಥವಾ ಕವರ್ತೆ ಎಂದರೆ ಒಂದು ಬಗೆಯ ತೆರಿಗೆ ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು (2)ವಿನಲ್ಲಿದೆ. ಇದೂ ಹೊಲೆಯದೆರೆಯೂ ಒಂದೇ ಇರಬಹುದೆಂದು" ಎಂ.ಚಿದಾನಂದಮೂರ್ತಿಯವರು ಊಹಿಸಿದ್ದಾರೆ. (ಪೂರ್ವೋಕ್ತ ಪು ೩೬) ತೆರಿಗೆ ನಿಜ, ಆದರೆ ಹೊಲೆದೆರೆಯಿರಲಾರದು. ಹೊಲೆಯ ಮಾದಿಗರ ವೃತ್ತಿಗಳು ಬೇರೆ ಬೇರೆ ಇದ್ದಾಗ ತೆರಿಗೆ ಒಂದೇ ಆಗಿರಲಾರದು.

'ಸಮಯ ಪರೀಕ್ಷೆ'ಯಲ್ಲಿ (11–12ನೇ ಶ. ಬ್ರಹ್ಮಶಿವ) ಕರವತಿಗೆ ಎಂಬ ಪದ ಇದೆ. ಈ ಪದವೂ ಕಿಟೆಲ್‌ಕೋಶದಲ್ಲಿಲ್ಲ. ಸಮಯ ಪರೀಕ್ಷೆ ಹೇಳುವ ಸಂದರ್ಭವನ್ನು ನೋಡಿದರೆ ನೀರು ಹಾಕುವ ಚರ್ಮದ ಚೀಲ ಎಂಬರ್ಥ ಹೊರಡುತ್ತದೆ. ಈ ನೀರನ್ನು ಬ್ರಾಹ್ಮಣ ರಾದಿಯಾಗಿ ಎಲ್ಲರೂ ಸಾಂದರ್ಭಿಕವಾಗಿ (ಪ್ರಯಾಣ ಇತ್ಯಾದಿಗಳಲ್ಲಿ) ಬಳಸುತ್ತಿದ್ದರೆಂದು ಅಲ್ಲಿ ಹೇಳಿದೆ.

ಅಗ್ರಹಾರವಾಗಿ ಬಾದಾಮಿ ಆಳುತ್ತಿದ್ದ ೨೦೦೦ ಬ್ರಾಹ್ಮಣರು ಈ ಊರ ಸಮಗಾರರ ಕವಳ್ತೆಯನ್ನು (ಸುಂಕ) ಬಿಟ್ಟಿದ್ದಾರೆ. ಇದನ್ನು ಆಕರಿಸುವವನಿಗೆ ದಂಡವಿದೆ. ಇಡಿ ರಾಜ್ಯದಲ್ಲಿ (ಚಾಲುಕ್ಯರ ಸಾಮ್ರಾಜ್ಯದಲ್ಲೆಲ್ಲ) ಕವಳ್ತೆ ಪ್ರಸಂಗವಿದ್ದಾಗ ಯಾರಾದರೂ 'ಇಲ್ಲಿ ಆ ಕಾಯಿದೆ ಇಲ್ಲ, ಕೊಡಲೆಬೇಕು' ಎಂದು ಬಲತ್ಕಾರದಿಂದ ಸಂಗ್ರಹಿಸಿದರೆ ಪಂಚಮಹಾಪಾತಕಕ್ಕೆ ಹೋಗುವನು. ನಿಡಿಯಮಾರನು ಪಡೆದನು.

ಶಾಸನಕ್ಕೆ ಬಹುಶಃ ಇದು ಅರ್ಥ. ಚಾಲುಕ್ಯರು ದಲಿತರಾದುದರಿಂದಲೆ ಸಮಗಾರರ ಸುಂಕ ಬಿಡಿಸಲು ಕಾರಣರಾಗಿರಬಹುದು ಎಂಬ ಅನುಮಾನ ಉಂಟಾಗುತ್ತದೆ.

ಹರಿಹರನ ಸೇದಿರಾಜನ ರಗಳೆಯಲ್ಲಿ 'ಕವಳಿಗೆ' ಎಂಬ ಪದ ಆರು ಸಲ ಬರುತ್ತದೆ. ಸೇದಿರಾಜನೆಂಬ ಶಿವಭಕ್ತನನ್ನು ಅವನ ದಾಯಾದಿ ಕೊಲ್ಲುವುದಕ್ಕೆ ಮಾರುವೇಷದಿಂದ ಕವಳಿಗೆಯಲ್ಲಿ ಅಲಗ ಇಟ್ಟುಕೊಂಡು ಬರುತ್ತಾನೆ. 'ಹುಲಿ ತೊಗಲನ್ನು ಉಟ್ಟು ಕವಳಿಗೆ ಹಿಡಿದುಕೊಂಡು' ಬಂದಿದ್ದಾನೆ. ಈ ಕವಳಿಗೆಯಲ್ಲಿ ದಿವ್ಯ ಆಗಮವಿದೆ ರಹಸ್ಯದಲ್ಲಿ ಕೇಳಬೇಕೆಂದು ಸೇದಿರಾಜನನ್ನು ಒಪ್ಪಿಸಿ ರಾತ್ರಿ ಏಕಾಂತದಲ್ಲಿ ಕವಳಿಗೆಗೆ ಮೈಯ್ಯಿಕ್ಕು ಎಂದು ಹೇಳಿ ಅದರಿಂದ ತೆಗೆದ ಅಲಗಿನಿಂದ ಸೇದಿರಾಜನ ಬೆನ್ನಿಗೆ ಇರಿಯುತ್ತಾನೆ. ಆದರೆ ಅರಸ ಮರುದಿನ ಅಪಾರ ನೋವಿನಲ್ಲಿಯೂ ಭಂಡಾರಿಯನ್ನು ಕರೆಸಿ ಹೊಸ ಹೊನ್ನುಗಳನ್ನು ಅದೇ ಕವಳಿಗೆಯೊಳಗೆ ಸುರಿದು ಕಳಿಸಿಕೊಡುತ್ತಾನೆ.

ದಲಿತರ ಪರ ದೃಷ್ಟಿಯುಳ್ಳ ಹರಿಹರ 'ಕವಳಿಗೆ'ಯನ್ನು ಅದ್ಭುತವಾದ ಪ್ರತಿಮೆಯನ್ನಾಗಿ ಮಾಡುತ್ತಿರುವ ಪರಿಯನ್ನಿಲ್ಲಿ ಗಮನಿಸಬಹುದು. ಹರಿಹರನ ಕೃತಿಗಳ 'ಪದಕೋಶ' ರಚಿಸಿರುವ ಡಾ. ಮಲಶೆಟ್ಟಿಯವರು (೧೯೯೧) 'ಕಂಕುಳಲ್ಲಿರುವ ಚೀಲ'ವೆಂದು ಕವಳಿಗೆಗೆ ಅರ್ಥ ಬರೆದಿದ್ದಾರೆ. 'ಕಂಕುಳಲ್ಲಿರುವ' ಎಂಬ ಅರ್ಥ ಅನಪೇಕ್ಷಣೀಯ. ಚೀಲ ನಿಜ. ಆದರೆ ಯಾತರ ಚೀಲ? ಪುಲಿದೊವಲನುಟ್ಟ ಮಾರುವೇಷದ ಈ ಜಂಗಮ ತೊಗಲ ಚೀಲ (ಕವಳಿಗೆ)ವನ್ನೇ ಹಿಡಿದಿರಬೇಕು. ಹಳಗನ್ನಡದ ಕವಟ್ಟೆ ನಡುಗನ್ನಡದಲ್ಲಿ ಕರವತಿಗೆ, ಕವಳಿಗೆಯಾಗಿರಬಹುದು. ಆದರೆ ಇದು ದುರ್ಬಲ ಊಹೆ.

"ಸಮಯ ಪರೀಕ್ಷೆ"ಯ ಆರನೇ ಅಧಿಕಾರದಲ್ಲಿ ೧೨, ೧೩, ೧೪, ೧೬, ೧೮, ೨೨ ಈ ಪದ್ಯಗಳಲ್ಲಿ ಕರವತಿಗೆ ಬರುತ್ತದೆ. 'ಕರವತಿಗೆಯ ನೀರು', 'ಕರವತಿಗೆಯ ಕೊಳೆನೀರು', 'ಕರವತಿಗೆ ತೊಗಲುಚೀಲ', ಕರವತ್ತಿಗೆ, ಸಿದ್ದಗೆಗಳ ಪ್ರಸ್ತಾಪ ಇಲ್ಲಿವೆ. ಸಿದ್ದಿಗೆ ಬುದ್ದಿಗೆಗಳು ತುಪ್ಪ, ಎಣ್ಣೆ, ಮತ್ತು ನೀರು ಹಾಕುವ ಚರ್ಮದ ಚೀಲಗಳು. ಡೋಹರು ತುಪ್ಪ ಹಾಕುವ ಸಿದ್ದಿಗೆ ಮಾಡುತ್ತಿದ್ದರೆಂದು ಬಸವಣ್ಣನವರ ವಚನಗಳಿಗೆ ಟೀಕು ಬರೆದ ವಿದ್ವಾಂಸ ಹೇಳುತ್ತಾನೆ.

೧ನೇ ಪೊಲಿಕೇಸಿಯ ಎರಡನೆಯ ಮಗ ಮಂಗಳೀಶ ಕ್ರಿ.ಶ. ೫೯೭ ರಿಂದ ೬೦೯ರವರೆಗೆ ಆಳಿದ. ಫ್ಲೀಟರು ಹೇಳುವಂತೆ ಮಾತಂಗರು ಕಟಚೂರಿಗಳು ಮಂಗಲೀಶನ ಜತೆ ಸಂಬಂಧಿಗಳು. (ಥರ್‌ಸ್ಟನ್ IV ಪು. ೩೧೬) ಕನ್ನಡ ನಾಡಿನಲ್ಲಿ ಮಾತಂಗ ವಂಶದ ರಾಜ್ಯವಿತ್ತು, ಈ ವಂಶದವರೇ ಮಾದಿಗರು ಎಂದು ಥರ್‌ಸ್ಟನ್ ಬರೆಯುತ್ತಾರೆ. (ಅದೇ)

ಈ ಕಾಲದ ಅಯ್ಯಾವೊಳೆ ಅಯ್ನೂರ್ವರು ಪ್ರಸಿದ್ಧ ವ್ಯಾಪಾರಿ ಸಂಘ. ದೇಶ ವಿದೇಶಗಳಲ್ಲಿ ವ್ಯಾಪಾರ ನಡೆಸುತ್ತಿದ್ದ ಈ ಸಂಘ ಶಾಸನ ಪ್ರಶಸ್ತಿಯಲ್ಲಿ ತಾವು ಬಳರಿಯ ಮಕ್ಕಳು, ಭಗವತಿ ಲಬ್ಧವರ ಪ್ರಸಾದರು, ಎಂದು ಹೇಳಿಕೊಳ್ಳುತ್ತದೆ. ಇದರಿಂದ ಅವರು ತಾಯಾಳಿಕೆಯ ಸಮಾಜದವರೆಂದೇ ಊಹಿಸಬೇಕಾಗುತ್ತದೆ.

ಕದಂಬರು ಕನ್ನಡನಾಡಿನ ಮೊದಲ ಎರಡು ಪ್ರಮುಖ ರಾಜವಂಶಗಳಲ್ಲೊಂದು. ಇನ್ನೊಂದು ಗಂಗರ ವಂಶ. ಬನವಾಸಿಯ ಕದಂಬರೂ ಚಾಲುಕ್ಯರಂತೆ ಹಾರೀತಿಪುತ್ರರು, ಮಾನವ್ಯಗೋತ್ರರು. ಸಪ್ತ ಮಾತೃಕೆರ, ಕುಮಾರಸ್ವಾಮಿಯ ಆಶೀರ್ವಾದ ಬಯಸುವವರು. ಇವರ ಲಾಂಛನ ಸಿಂಹ. ಧ್ವಜದಲ್ಲಿ ಮಂಗವಿದೆ.

ಬನವಾಸಿ ತುಂಬ ಹಿಂದಿನಿಂದಲೇ ಪ್ರಸಿದ್ಧ ವ್ಯಾಪಾರಿ ಸ್ಥಳ. ಅಶೋಕ ಬೌದ್ಧಮತ ಪ್ರಚಾರಕ್ಕೆ ಇಲ್ಲಿ ಸನ್ಯಾಸಿಗಳನ್ನು ಕಳಿಸಿದ್ದ. ಕ್ರಿ.ಶ. ೭೦೦ ರ ಟಾಲೆಮಿ ಈ ನಗರದ ಉಲ್ಲೇಖ ಮಾಡಿದ್ದಾನೆ. ಸಾತವಾಹನರ ವಂಶದ ಚುಟು ಕುಲದವರಿಗೆ ಸೇರಿದ್ದ ಬನವಾಸಿಯನ್ನು ಕದಂಬರು ಗೆದ್ದರೆಂದು ಹೇಳಲಾಗಿದೆ. ಕದಂಬ ವೃಕ್ಷಕ್ಕೂ ಕದಂಬ ವಂಶಕ್ಕೂ ಸಂಬಂಧ ಹೇಳುವ ಕತೆಗಳಿಂದ ಕದಂಬ ಈ ವಂಶದ ಟೋಟೆಂ (ಕುಲದೇವತೆ) ಆಗಿರಬಹುದು. ಪುರಾಣ ಕತೆಗಳಲ್ಲಿ ಈ ವಂಶದ ಮೂಲವನ್ನು ಸಿಕ್ಕಿಸಿರುವುದರಿಂದ ಚರಿತ್ರೆ ಮರೆಯಾಗಿದೆ. ಆದರೂ ಮೇಲೆ ಹೇಳಿದ ಎಲ್ಲ ಸಂಗತಿಗಳಿಂದ ಇವರೂ ಕೂಡ ಮಾತೃಮೂಲೀಯ ಸಮಾಜದವರೇ. 'ನಾಗರು' ಇವರ ಕಡುವೈರಿಗಳಾಗಿದ್ದರೆಂದು ಇತಿಹಾಸಕಾರರ ಹೇಳಿಕೆ. 'ನಾಗರು' ದಲಿತರೆಂದು ಡಾ। ಬಾಬಾ ಸಾಹೇಬ ತರ್ಕಿಸಿದ್ದಾರೆ. ದಲಿತರಲ್ಲೇ ಕದಂಬರು, ನಾಗರು ಎರಡು ಒಳಪಂಗಡಗಳಿರಬಹುದು. ಕಾವೇರಿ ಪುರಾಣ ಮತ್ತು ಜನಪದ ಕತೆಗಳಲ್ಲಿ ಹಾವು ಮತ್ತು ಮಯೂರ ವರ್ಮನ ತಂದೆ ಚಂದ್ರವರ್ಮನ ಸಂಬಂಧದ ಘಟನೆಗಳನ್ನು ವಿವರಿಸುವವು. ಇದರ ಆಧಾರದಲ್ಲೇ ನಾಗರು ಮತ್ತು ಕದಂಬರು ವೈರಿಗಳೆಂದು ಎಂ.ವಿ.ಕೃಷ್ಣರಾವ್, ಎಂ.ಕೇಶವಭಟ್ಟರು ಹೇಳುವುದು ("ಕರ್ನಾಟಕದ ಇತಿಹಾಸ ದರ್ಶನ" ೧೯೭೦) ಆದರೆ ನಿರೂಪಿತವಾಗಿರುವ ಕತೆಯಲ್ಲಿ ವೈರತ್ವದ ಸೂಚನೆ ಇಲ್ಲ.

ಎರಡನೇ ಚಂದ್ರವರ್ಮ ಕಾಳ್ಗಿಚ್ಚಿನಲ್ಲಿ ಸಿಕ್ಕು ಒದ್ದಾಡುತ್ತಿದ್ದ ಮಂಜಿಷ್ಠಾ ಎಂಬ ಸರ್ಪವನ್ನು ರಕ್ಷಿಸುತ್ತಾನೆ. ಅದು ಅವನ ಹೊಟ್ಟೆಯಲ್ಲಿ ರಕ್ಷಣೆ ಪಡೆಯಿತು. ಅದು ಹೊರಬರಲಿಲ್ಲ. ವಲಭಿಯ ಪರಿಚಾರಿಕೆಯೊಬ್ಬಳಿಂದ ತಿಳಿದು ಕಾಳಿಕಾದೇವಿ ಮತ್ತು ನಾಗಶಿಲಾ ಆರಾಧನಾ ಮಾಡಿ ವಿವಿದ ಮೂಲಿಕೆಗಳ ರಸ ಕುಡಿದು ವಾಂತಿ ಮಾಡಿಕೊಳ್ಳುತ್ತಾನೆ. ಹಾವು ಹೊರಬಂದು ಸಾಯುತ್ತದೆ. ರಾಜ ಕೊಟ್ಟ

ಮಾತಿನಂತೆ ಗರ್ಭಿಣಿ ಧರ್ಮಪತ್ನಿಯನ್ನು ತ್ಯಜಿಸಿ ಪರಿಚಾರಿಕೆಯನ್ನು ಮದುವೆಯಾಗುತ್ತಾನೆ. ಧರ್ಮಪತ್ನಿಯ ಮಗನೇ ಮಯೂರವರ್ಮ.

ಈ ಕತೆ ಚಂದ್ರವರ್ಮ ನಾಗರನ್ನು ರಕ್ಷಿಸಿ ಅವರಿಗೆ ಆಶ್ರಯ ನೀಡಿದ್ದನ್ನು, ಅವರು ಅವನನ್ನೇ ಮೀರಿ ಬೆಳೆದುದನ್ನು ಸೂಚಿಸುತ್ತದೆ. ಪರಿಚಾರಿಕೆಯ ಜಾತಿ ಕುಲ ಇಲ್ಲಿ ನಿರ್ದೇಶಿತವಾಗಿಲ್ಲ. ಆದರೆ ಆಕೆ ತಾಯಿ ಆರಾಧಕಳು. ಕಾಳಿ ದುರ್ಗೆ, ಮಾತಂಗಿಯೇ, ಕಾಳಿ ನಾಗಗಳ ಆರಾಧಕರು ಮಾತಂಗರು, ಮಾದಿಗರು. ಆಕೆಯ ನೆರವಿನಿಂದ ನಾಗರ ಕಂಟಕ ಹೋಯಿತು. ಹಾಗಾಗಿ ಆಕೆಯನ್ನು ಚಂದ್ರವರ್ಮ ಮದುವೆಯಾದ. ಧರ್ಮಪತ್ನಿಯನ್ನೇ ಬಿಟ್ಟು ಈಕೆಯನ್ನು ಮದುವೆಯಾಗಬೇಕಾದರೆ ಈಕೆ ಸಾಮಾನ್ಯ 'ಪರಿಚಾರಿಕೆ'ಯಾಗಿರಲು ಸಾಧ್ಯವಿಲ್ಲ. ಆಕೆ ಸ್ತ್ರೀ ರಾಜ್ಯದ ಅರಸಿಯಾಗಿರಬೇಕು. ಕರಾರು ಹಾಕಿಯೆ ಸಹಾಯ ಮಾಡಿರಬೇಕು. ಚಂದ್ರವರ್ಮ ಅಳಿಯ ಸಂತಾನ ಪದ್ಧತಿಗೆ 'ಬಲಿ'ಯಾಗಿರಬೇಕು. ಇತ್ತ ಹೇಗೋ ಆತನ ಧರ್ಮಪತ್ನಿಯ ಮಗ ಮಯೂರವರ್ಮ ಅವನ ವಂಶವನ್ನು ಮುಂದುವರೆಸಿದ.

ಕಾವೇರಿ ಪುರಾಣದ ಕತೆಯೂ ಕೂಡ ಚಂದ್ರವರ್ಮ ಪಾರ್ವತಿಯಿಂದ ಶೂದ್ರಪತ್ನಿಯನ್ನು, ರಾಜ್ಯವನ್ನು ಪಡೆದನೆಂದು ಹೇಳುತ್ತದೆ. ಅವನ ಮಕ್ಕಳು 'ಉಗ್ರಕುಲ'ದವರಾದರು. ವಿದರ್ಭರಾಜನ ಶೂದ್ರ ಸ್ತ್ರೀಯ ಹೆಣ್ಣು ಮಕ್ಕಳನ್ನು ಇವರು ಮದುವೆಯಾದರು.

'ಕೀಳುಕುಲದ' ಸಂಬಂಧವನ್ನು ಈ ಕತೆಯೂ ಕೂಡ ಹೇಳುತ್ತಿದೆ. ಮಯೂರವರ್ಮನ ಬಗ್ಗೆ ಇರುವ ನವಿಲಿನ ಕತೆಯಲ್ಲಿ ಈತ ಪರಿಚಾರಿಕೆಯ ಮಗನೆಂದೂ ನವಿಲಿನ ತಲೆತಿಂದುದರಿಂದ ರಾಜನಾದನೆಂದೂ ಬರುತ್ತದೆ. ಪರಿಚಾರಿಕೆ, ನವಿಲು ಟೋಟೆಂ (ಮಯೂರ) ಇವು ಕದಂಬ ವಂಶದ ಮೊದಲ ಸ್ಥಿತಿಯನ್ನು ಸೂಚಿಸುವವು.

ಮತ್ತೊಂದು ಕತೆಯ ಪ್ರಕಾರ ಹಬಾಸಿಕ ಎಂಬ (ಕೊರಗ) ಹೊಲೆಯ ಕುಲದ ಅರಸ ಮಯೂರವರ್ಮನನ್ನು ಓಡಿಸಿದ. ಮಯೂರವರ್ಮನ ಅಳಿಯ ಲೋಕಾದಿತ್ಯ ಅವರನ್ನು ಸೋಲಿಸಿ ೩೨ ಹಳ್ಳಿಗಳಲ್ಲಿ ಅಹಿಚ್ಛತ್ರದ (ಅಹಿ=ಹಾವು) ಬ್ರಾಹ್ಮಣರನ್ನು ನೆಲೆಗೊಳಿಸಿದ.

ಇನ್ನೊಂದು ಕತೆಯ ಪ್ರಕಾರ ಹೊಲೆಯ ಅರಸರ ವಶದಲ್ಲಿದ್ದ ಪ್ರದೇಶವನ್ನು ಮಯೂರವರ್ಮ ಗೆದ್ದುಕೊಂಡ. ಇವನೇ ಅಹುಚ್ಛತ್ರದ ಬ್ರಾಹ್ಮಣರನ್ನು ನೆಲೆಗೊಳಿಸಿದ. ಇವರನ್ನು ನಂದ ಎಂಬ ಹೊಲೆಯ ಮುಖಂಡ ಓಡಿಸಿದ. ಆದರೆ ದೇಗುಲ ನರ್ತಕಿಯಾದ ತನ್ನ ತಾಯಿಯ ಮಾತು ಕೇಳಿ ನಂದನಮಗ ಚಂದ್ರಸಾಯಣ ಬ್ರಾಹ್ಮಣರಿಗೆ ಗೌರವ ಕೊಟ್ಟು ತನ್ನ ಜನರನ್ನು ಗುಲಾಮರನ್ನಾಗಿ ಮಾಡಿದ.

ಇಷ್ಟೆಲ್ಲ ಇದ್ದಾಗಲೂ ಬ್ರಾಹ್ಮಣ ಲೇಖಕರು ಮಯೂರವರ್ಮನನ್ನು, 'ಕಂದಬಕುಲವೆಂಬ ನೈಷ್ಠಿಕ ಬ್ರಾಹ್ಮಣವಂಶ' (ಪೂರ್ವೋಕ್ತ ಪು.೨೯) ದವನೆಂದು ಹೇಳುತ್ತಾರೆ. ಇವನು ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ಕರೆತಂದು ತನ್ನ ನಾಡಿನಲ್ಲಿ ನೆಲೆಗೊಳಿಸಿದುದು, ಅಶ್ವಮೇಧ ಯಾಗ ಮಾಡಿದುದು, ಕಂಚಿಯಲ್ಲಿ ಪಲ್ಲವ ಅರಸರಿಂದ ಬ್ರಾಹ್ಮಣರಿಗೆ ಆದ ಅಪಮಾನವನ್ನು ಸಹಿಸದಾದನೆಂದು ಹೇಳುವುದು ಇವೆಲ್ಲ ಇವನ ಬ್ರಾಹ್ಮಣಪರ ಧೋರಣೆಯನ್ನು ನಿರೂಪಿಸುವವು.

ಈ ವಂಶದ ಕಾಕುಸ್ಥವರ್ಮನ (ಕ್ರಿ.ಶ. ೪೨೫-೪೫೦) ಕಾಲದಲ್ಲೇ ಮೊಟ್ಟ ಮೊದಲ ಕನ್ನಡ ಶಾಸನ ಲಭ್ಯವಾದುದು. ಇದರಲ್ಲಿ 'ಬಟಾರಿ ಕುಲ'ದ ಪ್ರಸ್ತಾಪವಿದೆ. ದಶಮಂಡಳಿಕರ ನಾಯಕನಾಗಿದ್ದ 'ಪಶುಪತಿ' ಬಟಾರಿ ಕುಲದವ. ಈತ ಕಾಕುಸ್ಥವರ್ಮನ ಅಳಿಯ. ಬಳರಿಯ ಬಗ್ಗೆ ನಂತರ ಚರ್ಚೆ

ಮಾಡುವಾ. ಬಳರಿಯ ಕುಲ ಮಾತೃ ಮೂಲೀಯ ಕುಟುಂಬವನ್ನು ಅಥವಾ ಕುಲವನ್ನು ಹೇಳುತ್ತದೆ. ಚಿದಾನಂದಮೂರ್ತಿಯವರ ಪ್ರಕಾರ 'ಬಳಾರಿ' ದಲಿತರ ದೈವ.

'ಗಂಗ'ರ ಹೆಸರೇ ಹೇಳುವಂತೆ ವೈದಿಕ ಕ್ಷತ್ರಿಯರಲ್ಲ. ಇವರು ತಮ್ಮನ್ನು ಗಂಗೆ (ಜಾಹ್ನವೇಯ) ಕುಲದವರೆಂದೇ ಹೇಳಿಕೊಂಡಿದ್ದಾರೆ. ಗಂಗಾ ನದಿಯಿಂದ 'ಗಂಗ' ಹೆಸರು ಬಂದಿರಬೇಕೆನ್ನುತ್ತಾರೆ. ಗಂಗವ್ವ, ಗಂಗಪ್ಪ ನಮ್ಮಲ್ಲಿ ಪ್ರಚಲಿತ ಅಂಕಿತನಾಮಗಳು. ನೀರು ದೈವವನ್ನು ಗಂಗೆ ಎಂದೇ ಭಾವಿಸಿಕೊಂಡು ಬರಲಾಗಿದೆ. ಗಂಗೆಗೆ ಅಂದರೆ ನೀರಿಗೆ ಸಂಬಂಧಪಟ್ಟ ಕುಲ ಮೀನುಗಾರರು, ಗಂಗಾಮತಸ್ಥರು (ಬಾರಿಕರು, ಬೆಸ್ತರು). ಶಿವನ ತಲೆಯಲ್ಲೇ ಗಂಗೆಯನ್ನು ಶೈವ ಪರಂಪರೆ ಪ್ರತಿಷ್ಠಾಪಿಸಿದೆ. ಮಹಾಭಾರತ ಭೀಷ್ಮ ಗಾಂಗೇಯನೆಂದೇ ಪ್ರಖ್ಯಾತನು. ಪಾಂಡವ, ಕೌರವರ ಹುಟ್ಟಿಗೆ ಕಾರಣಳಾದ ಮತ್ಸ್ಯಗಂಧಿ ಬೆಸ್ತರಾಕೆ. ಗಂಗಡಿಕಾರ ಒಕ್ಕಲಿಗರು ಗಂಗರು ಆಳಿದ್ದ ಪ್ರದೇಶದಲ್ಲಿ ದೊಡ್ಡ ಸಂಖ್ಯೆಯಲ್ಲಿರುವ ಗೌಡರ (ಒಕ್ಕಲಿಗರ) ಒಳ ಪಂಗಡ. ಇವರ ಗುರುತು ಆನೆ. (ಮತಂಗ) ಜೈನಯತಿ ಸಿಂಹನಂದಿ ಪದ್ಮಾವತಿಯ ವರಪ್ರಸಾದ ಕೊಡಿಸಿ ಗಂಗರನ್ನು ರಾಜರನ್ನಾಗಿ ಮಾಡಿದನಂತೆ. ಇದು ಕೂಡ ಗಂಗರ ಅವೈದಿಕ ಮೂಲವನ್ನೇ ಪ್ರತಿಪಾದಿಸುವುದು. ಧಾರ್ಮಿಕವಾಗಿ ಜೈನರ ಬೆಂಬಲ ಇಂಥ ಅವೈದಿಕ ಮೇಲ್ವರ್ಗಕ್ಕೆ ಆಗ ಅನಿವಾರ್ಯವಿತ್ತು. 'ಪದ್ಮಾವತಿ' ಎಂಬ ಸ್ತ್ರೀ ದೈವದ ವರ (ಜೈನೀಕರಿಸಲ್ಪಟ್ಟ ಸ್ಥಳೀಯ ಮಾತೃ ದೈವ) ಎಂಬುದು ಮಾತೃ ಅಧಿಕಾರದ ಮೂಲವನ್ನೇ ನಿರೂಪಿಸುವುದು. ಆನೆ, ಮಾತೃ ದೈವದ ವರ, ಗಂಗಾ ಮತ ಇವೆಲ್ಲ ಗಂಗವಂಶವನ್ನು ದಲಿತ ಸಂಸ್ಕೃತಿಯ ಗರ್ಭದಲ್ಲೇ ಹುಡುಕುವಂತಾಗಿಸುತ್ತವೆ.

ಕರ್ನಾಟಕವನ್ನಾಳಿದ ಎಲ್ಲ ರಾಜವಂಶಗಳು ತಮ್ಮ ರಾಜಕೀಯ ಉದ್ದೇಶ ಸಾಧನೆಗಾಗಿ ಮೇಲ್ಜಾತಿಗಳಾಗಿದ್ದ ಬ್ರಾಹ್ಮಣ, ಜೈನ, ಶೈವ, ಬೌದ್ಧ ಸಮಾಜಗಳಿಗೆ ಬಹುವಾಗಿ ಬೆಂಬಲ ನೀಡಿದವು. ಇವರೆಲ್ಲ ರಾಜಾಶ್ರಯವನ್ನು ತಮಗೆ ಬಳಸಿಕೊಂಡು ದಾನದತ್ತಿ ಪಡೆದರು. ಕಲೆ, ಸಾಹಿತ್ಯ, ಶಿಲ್ಪ, ಮೊದಲಾದ ಸಾಂಸ್ಕೃತಿಕಾಂಶಗಳು ಬೆಳೆದವು. ಸಂಸ್ಕೃತಿ ಎಂದರೆ ಇವೇ ಬೇರಿಲ್ಲ ಎಂಬ ವಾತವರಣ ನಿರ್ಮಾಣವಾಯಿತು

ಕರ್ನಾಟಕವನ್ನಾಳಿದ ಅರಸು ಮನೆತನಗಳು ದಲಿತ ಅಥವಾ ಕೆಳ ಜಾತಿ ಮೂಲದವು ಎಂದು ಪ್ರತಿಪಾದಿಸಿ ಸಾಧಿಸುವಂತಹದೇನಿಲ್ಲ ಎಂಬ ವಿಕ್ಷಿಪ್ತ ದೃಷ್ಟಿ ಸರಿಯಲ್ಲ. ಈ ಅರಸರಿಂದ ದಲಿತರಿಗೆ, ಕೆಳಜಾತಿ–ಜನಸಮುದಾಯಕ್ಕೆ ಏನೊಂದೂ ಪ್ರಯೋಜನವಾಗಲಿಲ್ಲ ಎಂಬುದು ನಿಜವೇ. ಆದರೆ ನಿಜ ಸಂಗತಿಗಳ ಶೋಧನೆಯಿಂದ ಒಂದು ನಾಡಿನ ಸಂಸ್ಕೃತಿ ನಿರ್ಮಾಣ ಕಾರ್ಯ ಮಾನವೀಯ ಐಳಹದಿಯ ಮೇಲೆ ನಿರ್ಮಾಣಗೊಳ್ಳಲು ಸಾಧ್ಯ.

ಕರ್ನಾಟಕವನ್ನಾಳಿದ ಮೊದಲ ಅರಸುಮನೆತನಗಳು 'ಸಣ್ಣವು'. ಸ್ಥಳೀಯ ಬುಡಕಟ್ಟುಗಳು ತಮ್ಮ ನಾಡುಗಳಲ್ಲಿ ಈ ರಾಜ್ಯಗಳನ್ನು ಸ್ಥಾಪಿಸಿಕೊಂಡಿದ್ದವು. ಮೌರ್ಯ ಮತ್ತು ಸಾತವಾಹನರ ಸಾಮ್ರಾಜ್ಯದಡಿಯಲ್ಲಿ ಇವು ಸಾಮಂತ ಕುಲವಾದವು. ವರ್ಗ ವರ್ಣ ವ್ಯವಸ್ಥೆ ಸ್ಥಾಪಿತವಾದುದರ ಪರಿಣಾಮವೇ ಈ ರಾಜ್ಯಗಳು.

"ಅತಿ ಪುರಾತನ" ಆಂಧ್ರ ವಂಶವಾದ ಸಾತವಾಹನ ಅರಸರು ಕರ್ನಾಟಕದ ಭಾಗವನ್ನೂ ಆಳಿದವರು. ಈ ಅರಸರ ಕೆಲವು ಹೆಸರುಗಳಲ್ಲಿ ಅವರ ತಾಯಂದಿರ ಹೆಸರು ಸೇರಿರುವ ಸ್ವಾರಸ್ಯಕರ ಅಂಶವೂ ಮಾತೃಮೂಲೀಯತೆಯನ್ನು ತಿಳಿಸುವುದು. "ಗೋತಮೀ ಸಾತಕರ್ಣಿ", "ವಾಸಿಸ್ಠಿ ಪುತ್ರ ಪುಳುಮಾಯಿ", "ಹಾರಿತಿ ಪುತ್ರ ಶಾತಕರ್ಣಿ" ಇಂಥ ಹೆಸರುಗಳು. ಗೋದಾವರಿಯ ಎರಡು ಉಪನದಿಗಳ ಮುಖಜ ಪ್ರದೇಶಗಳಿಗೆ 'ಗೋತಮೀ' 'ವಾಸಿಸ್ಠಿ' ಎಂಬ ಶಾತವಾಹನ ರಾಣಿಯರ ಹೆಸರಿವೆ. (ಪೂರ್ವೋಕ್ತ ಪು. ೨೦) ಈ ಹೆಸರು ಇಂದಿಗೂ ಉಳಿದು ಬಂದಿವೆ. ಇದು ಉತ್ತಮವಾದ ಕೃಷಿ

ಪ್ರದೇಶ. ಶಾತವಾಹನರ ಕಾಲದಲ್ಲಿ ಆಸ್ತಿಯಲ್ಲಿ ಸ್ತ್ರೀಯರಿಗೆ ಹಕ್ಕಿದ್ದುದು, ಸಾರ್ವಜನಿಕ ಕೆಲಸಗಳಲ್ಲಿ ಸ್ತ್ರೀಯರೂ ಪಾಲ್ಗೊಳ್ಳುತ್ತಿದುದು, ಮಹಿಳಾ ಪ್ರಾಬಲ್ಯದ ಪಳೆಯುಳಿಕೆಗಳಾಗಿದ್ದವು.

ಅನೇಕಾನೇಕ ನಗರಗಳು, ರೋಮನ್ ಸಾಮ್ರಾಜ್ಯದ ಜತೆ ವ್ಯಾಪಾರ, ಪ್ರಬಲ ಸೇನೆ, ಆಡಳಿತ ವ್ಯವಸ್ಥೆಗಳಿಂದ ಈ ಅರಸರ ಕಾಲದ ದಕ್ಷಿಣ ಭಾರತದ ಸ್ಥೂಲ ಚಿತ್ರ ಸಿಕ್ಕುತ್ತದೆ.

ಈ ವಂಶದ ೧ನೇ ಶತಮಾನದ ಹಾಲರಾಜನ 'ಗಾಥಾಸಪ್ತಸತಿ' ಎಂಬ ಪ್ರಾಕೃತ ಗ್ರಂಥದಲ್ಲಿ ಕನ್ನಡ ಪದಗಳಿರುವ ಬಗ್ಗೆ ತಿಳಿದಿದೆ. ಸಾತವಾಹನರು ಸ್ಥಳೀಯ ಅವೈದಿಕ ನೆಲೆಯವರಾದರೂ ತಾವು ಬ್ರಾಹ್ಮಣರೆಂದು ತಮ್ಮ ಶಾಸನಗಳಲ್ಲಿ ಹೇಳಿಕೊಳ್ಳುತ್ತಾರೆ. ಇದು ದಕ್ಷಿಣದ ಮೇಲ್ವರ್ಗಗಳ ಮೇಲೆ ಆದ ವೈದಿಕ ಶಾಹಿಯ ಗಾಢ ಪ್ರಭಾವವೇ. ಉತ್ತರ ಮತ್ತು ದಕ್ಷಿಣದ ನಡುವೆ ಸಾತವಾಹನರ ಅಧಿಕಾರ ಸಂಪರ್ಕ ಕಲ್ಪಿಸಿತೆಂದು ರೋಮಿಲಾಥಾಪರ್ ಬರೆಯುತ್ತಾರೆ. ('ಭಾರತದ ಇತಿಹಾಸ' ಪು. ೧೦೫)

ಈ ವಂಶವೂ ವೈದಿಕೀಕರಣ ಅಥವಾ ಬೌದ್ಧೀಕರಣಗೊಳ್ಳಲು ಯತ್ನಿಸಿದುದರ ಹಿನ್ನೆಲೆಯಲ್ಲೇ ಸಂಸ್ಕೃತ ಪ್ರಾಕೃತಾದಿ ಭಾಷೆಗಳ ಒಡನಾಟ ದಕ್ಷಿಣದಲ್ಲಿ ಹೆಚ್ಚಿತು, ಉತ್ತರ ಭಾರತದ ವೈದಿಕ ಅವೈದಿಕ ಸಂಸ್ಕೃತಿಗಳು ದಕ್ಷಿಣದ ಮೇಲೆ ದಾಳಿ ಮಾಡಿದವು, ಎಂದೇ ಅದರ ಅರ್ಥ.

ಈ ಅರಸರ ಕಾಲದ ಶಿವಸ್ಕಂದ ನಾಗಶ್ರೀ ಬನವಾಸಿಯಲ್ಲಿ ನಾಗಪ್ರತಿಮೆ ಮತ್ತು ಕೆರೆ ನಿರ್ಮಿಸಿದ ಸಂಗತಿಯೂ ಇಲ್ಲಿ ನೆನಪಾಗುತ್ತದೆ.

ತೀರ ದಕ್ಷಿಣದಲ್ಲಿ ಚೋಳ, ಪಲ್ಲವ, ಚೇರ, ಪಾಂಡ್ಯ ರಾಜ್ಯಗಳಿದ್ದವು. ಇವರಲ್ಲಿ ಚೇರರು ಚೆರುಮಾನ್ ಅಂದರೆ ಹೊಲೆಯರು, ಪಲ್ಲವರು ಕುರುಬರು ಎಂದು ಹೇಳಲಾಗುತ್ತದೆ. ಪಾಂಡ್ಯರು ಮೆಗೆಸ್ತಾನಿಸನ ಪ್ರಕಾರ ತಾಯಿಕಟ್ಟಿಗೆ ಸೇರಿದವರು. ರೋಮನ್ ಸಾಮ್ರಾಜ್ಯದ ಜೊತೆ ವ್ಯಾಪಾರ ಸಂಬಂಧ ಕುದುರಿಸಿಕೊಂಡಿದ್ದರು. ಪಾಂಡ್ಯರ ರಾಣಿ ೫೦೦ ಆನೆ, ೪೦೦೦ ಕುದುರೆ, ೧೩೦೦೦ ಕಾಲಾಳು ಸೈನ್ಯ ಹೊಂದಿದ್ದಳೆಂದು ಮೆಗೆಸ್ಥನಿಸ್ ಹೇಳುತ್ತಾನೆ.

ರಾಷ್ಟ್ರಕೂಟರ ಮೂಲವೂ ಬೇಸಾಯ ಸಂಸ್ಕೃತಿಗೆ ಸಂಬಂಧಿಸಿದೆ. ಇವರ ಲಾಂಛನ ನೇಗಿಲು ಮತ್ತು ಗರುಡ. ನೇಗಿಲು ಇವರ ರೈತ ಮೂಲವನ್ನು, ಗರುಡವೂ ನಾಗಕುಲಗಳ ವೈರಿಗಳೆಂಬುದನ್ನು ನಿರೂಪಿಸುತ್ತವೆ. ರಾಷ್ಟ್ರಕೂಟರೇ ಇಂದಿನ ರಾಠೋಡ(ರ), ರಡ್ಡಿ, ರಟ್ಟರೆಂದು ಹೇಳುತ್ತಾರೆ. ಇವರೇ ಅಶೋಕನ ಕಾಲದ ರಠಿಕರು ಎಂಬ ವಾದವೂ ಇದೆ. ರಾಷ್ಟ್ರಕೂಟಕ್ಕೆ 'ನಾಡುಗಳ ಅಧಿಪತಿ' ಎಂಬ ಅರ್ಥವೂ ಇದೆ. ಗೌಡರಂತೆ ಅಧಿಕಾರ ಸೂಚಕವಾದ ಈ ಪದ ಅರಸರು ದಾನಕೊಟ್ಟ ಭೂಮಿಗಳನ್ನು ದಾನ ಪಡೆದವರು ನಿರಾತಂಕವಾಗಿ ಅನುಭವಿಸಿಕೊಂಡು ಬರುವಂತೆ ನಿಯಂತ್ರಿಸುವವ ಎಂಬ ಅರ್ಥವನ್ನು ಹೇಳಲಾಗಿದೆ. ಇದು ತುಂಬ ಮುಖ್ಯವಾದ ಅರ್ಥ. ಇದೇ ನಮಗೆ ದಲಿತರ ವಿರುದ್ಧ ಜಮೀನುದಾರರಾದ ಜನಕುಲಗಳನ್ನು ರಕ್ಷಿಸುವ ಸಾಧನವಾಗಿ ರಾಜ್ಯ ಹುಟ್ಟಿತೆಂಬುದನ್ನು ಖಚಿತಪಡಿಸುವುದು. ಎಲ್ಲ ರಾಜ್ಯಗಳೂ ಅದೇ ಕೆಲಸ ಮಾಡುತ್ತ ಬಂದಿವೆ. ದಲಿತ ಮೂಲದಿಂದ ಬಂದಿರುವ ರಾಜವಂಶಗಳೇ ಒಂದು ವಿಧದಿಂದ ವೈದಿಕಶಾಹಿಯಾಗಿ 'ದಲಿತದ್ರೋಹಿ'ಯಾಗುತ್ತಿದ್ದವು. ಇನ್ನು ದಲಿತೇತರ ರಾಜವಂಶಗಳ ಬಗ್ಗೆ ಹೇಳುವುದೇನು?

ರಾಷ್ಟ್ರಕೂಟ ವಂಶ ಮಹಾರಾಜ್ಯವಾಗಿ ಸ್ಥಾಪನೆಗೊಳ್ಳಲು ಕಾರಣನಾದವ ಎಂದು ಭಾವಿಸಲಾಗುವ ೧ನೇ ಇಂದ್ರ ಬಹುಶಃ ಚಾಲುಕ್ಯ ಪೊಲೆಕೇಸಿಯ ಮಗಳು ಭವನಾಗಳನ್ನು ರಾಕ್ಷಸವಿವಾಹವಾದನೆಂಬ ಸ್ವಾರಸ್ಯಕರ ಅಂಶವನ್ನು ಇಲ್ಲಿ ಅವಶ್ಯಕವಾಗಿ ಗಮನಿಸಬೇಕಿದೆ. ದಲಿತ ಚಾಲುಕ್ಯರಲ್ಲಿ 'ನಾಗ' ಎಂಬ ದಲಿತ

ಹೆಸರು, 'ರಾಕ್ಷಸವಿವಾಹ' ಎಂಬ ವೈದಿಕರ ಮಾತು ದಲಿತ ಸಂಸ್ಕೃತಿಗೆ ಸೇರಿವೆ. ಇಂಥ ಇಂದ್ರನ ಮಗನೇ ರಾಷ್ಟ್ರಕೂಟ ಸಾಮ್ರಾಜ್ಯ ಸ್ಥಾಪಕ ದಂತಿದುರ್ಗ. (ಕ್ರಿ.ಶ. ೭೩೫–೭೫೫)



## ಅಧ್ಯಾಯ : ೫

---

**ದಲಿತ ಸಂಸ್ಕೃತಿಯ ವಿರಾಟ್ ಸ್ವರೂಪ :**

ದಲಿತ ಸಂಸ್ಕೃತಿಯ ವಿರಾಟ್ ಸ್ವರೂಪವನ್ನು ತಿಳಿಸುವ ಮಾಹಿತಿಗಳು ಸಮೃದ್ಧವಾಗಿದ್ದು, ಅವನು ವೈಜ್ಞಾನಿಕವಾಗಿ, ವಸ್ತುನಿಷ್ಠವಾಗಿ ವಿವೇಚಿಸುವ, ಅರ್ಥೈಸುವ ಕೆಲಸವಾಗಿಲ್ಲ. ಈ ಮಾಹಿತಿಗಳು ಹೆಚ್ಚಾಗಿ ಸ್ಥಳೀಯವಾಗಿದ್ದರೂ ಅಂತರ್‌ಸಂಬಂಧಿತವಾದ ಒಂದು ವ್ಯಾಪಕ ನೆಲೆಗೆ ಅಂಟಿಕೊಂಡಿವೆ. ಅವು ವಿಭಿನ್ನ ಸಂಸ್ಕೃತಿ ಜನಕುಲಗಳು ಸಂಘರ್ಷಿಸುವ, ಸಮನ್ವಯಗೊಳ್ಳುವ ಲಕ್ಷಣಗಳನ್ನು ಹೊಂದಿವೆ. ಪಶುಪಾಲಕ ವಲಸೆಗಾರ ಜನಕುಲಗಳ ಬಹುದೂರದವರೆಗಿನ ಹರಡುವಿಕೆ ನೆಲೆಗೊಳ್ಳುವಿಕೆಗಳು ತುಂಬ ಹಿಂದಿನಿಂದಲೆ ನಡೆದು ಬಂದಿವೆ.

ಇವರಲ್ಲಿ ದಲಿತರು ಯಾರು? ಇವರು ಬೇಟೆಗಾರಿಕೆಯಿಂದ ಕೃಷಿಗೆ ನೇರವಾಗಿ ಬೆಳೆದು ಬಂದರೇ? ಪಶುಪಾಲನೆ ಇವರ ವೃತ್ತಿಯೇ ಆಗಿರಲಿಲ್ಲವೇ? ಇತರೆಲ್ಲ ಜನಕುಲಗಳಲ್ಲಿ ಇವರೇ ಏಕೆ ಅಂತಿಮವಾಗಿ ಅಸ್ಪೃಶ್ಯರಾಗಬೇಕಾಯಿತು?

ಪ್ರತ್ಯಕ್ಷ ಮಾಹಿತಿಗಳ ಕೊರತೆಯಿದ್ದಾಗ ಅಥವಾ ಅವು ಏಕಪಕ್ಷಿಯ ಸ್ವರೂಪವಿದ್ದಾಗ, ಇತರೇತರ, ಅಪ್ರತ್ಯಕ್ಷ ಮೂಲಗಳಲ್ಲಿ ಸಿಗುವ ಬಿಡಿ ಬಿಡಿ ಆಕರಗಳನ್ನು ಬಳಸಿಕೊಂಡು ಒಂದು ಚಿಂತನೆಯನ್ನು ಬೆಳೆಸಬೇಕಾಗುತ್ತದೆ.

ಇದಕ್ಕೆ, ಪೂರ್ವಭಾವಿಯಾಗಿ ಕೆಲವು ನಿರ್ಧಾರಗಳಿಗೆ ಬರಲೇಬೇಕಾಗುತ್ತದೆ. ಆದರೆ ಇವೂ ಕೂಡ ಅಂತರ್‌ಶಿಸ್ತೀಯ ಅಧ್ಯಯನದ ಫಲವಾಗಿ ರೂಪುಗೊಂಡಿರಬೇಕಾಗುತ್ತದೆ.

ಅಂಥ ಕೆಲವು ಗ್ರಹಿಕೆಗಳೆಂದರೆ–

೧) ತಾಯಿಪಂಥ ಮತ್ತು ಮಾತೃದೈವಗಳಿಗೂ ದಲಿತರಿಗೂ ನಿಕಟ ಸಂಬಂಧವಿದೆ.
೨) ಕೃಷಿಕ ಸಂಸ್ಕೃತಿಯ ಜನ ಮಾತ್ರ ಮಾತೃ ಆರಾಧಕರು.
೩) ದೇವಿಪ್ರಸಾದ ಚಟೋಪಾಧ್ಯಾಯರ ಪ್ರಕಾರ ('ಲೋಕಾಯತ') ಭಾರತದಲ್ಲಿ ತಾಂತ್ರಿಕ ಪಂಥ, ಯೋಗ, ಸಾಂಖ್ಯ, ವೈಶೇಷಿಕ, ನ್ಯಾಯ, ಲೋಕಾಯತ, ಕೃಷಿ, ಮಾತೃ ಪಂಥ ಇವೆಲ್ಲಕ್ಕೂ ಒಳಸಂಬಂಧವಿದ್ದು, ಇವಾವೂ ಆರ್ಯ ವೈದಿಕ ಸಂಸ್ಕೃತಿಯಲ್ಲ.
೪) ಹಾಗಿದ್ದರೆ ಇವೆಲ್ಲಕ್ಕೂ ದಲಿತರಿಗೂ ಗಾಢವಾದ ಸಂಬಂಧವಿರುವುದನ್ನು ನಮ್ಮ ಅಧ್ಯಯನಗಳು ಸಾಬೀತು ಮಾಡುತ್ತವೆ.

ಇದರ ಚಿತ್ರ ಸ್ಪಷ್ಟವಾಗಬೇಕಾದರೆ ಹಲವು ಶೀರ್ಷಿಕೆಗಳಡಿಯಲ್ಲಿ ವಿವರಗಳನ್ನು ಕಲೆ ಹಾಕಿಕೊಂಡು ವಿವೇಚಿಸಬೇಕು. ಅವನ್ನು ಹೀಗೆ ವಿಂಗಡಿಸಿಕೊಳ್ಳಬಹುದು.

೧) ಬೇಸಾಯ ಮತ್ತು ದಲಿತರು.
೨) ದಲಿತರು ಮತ್ತು ಗ್ರಾಮಗಳು
೩) ಬೇಸಾಯ ಮತ್ತು ತಾಯಿಪಂಥ
೪) ತಾಯಿಪಂಥ, ದಲಿತರು

೫) ತಾಯಿಪಂಥ ಮತ್ತು ತಾಂತ್ರಿಕರು
೬) ದಲಿತರ ಸಾಧನೆಗಳು: ಕಲೆ, ವಿಜ್ಞಾನ
೭) ಬ್ರಾಹ್ಮಣರು ಮತ್ತು ದಲಿತ ಸಂಸ್ಕೃತಿ

**ಬೇಸಾಯ ಮತ್ತು ದಲಿತರು :**

ಆದಿಮಾನವ ಮೊದಲು ಆಹಾರ 'ಸಂಗ್ರಹಿಸು'ತ್ತಿದ್ದ. ನಂತರ ಬೇಟೆ, ಮೀನುಗಾರಿಕೆಗಳನ್ನು ಕಲಿತ. ಪಶುಪಾಲನೆ ಮತ್ತು ಕೃಷಿ ಆನಂತರದ ವೃತ್ತಿಗಳು. ಪಶುಸಂಗೋಪನೆ, ಕೃಷಿಹಂತಗಳಲ್ಲಿ ಗುಡಿಕೈಗಾರಿಕೆ, ಹಳ್ಳಿಗಳಲ್ಲಿ ನೆಲೆಸುವಿಕೆ, ಬುಡಕಟ್ಟುಗಳ ನಡುವೆ ಕೊಳುಕೊಡೆ, ಗಣಿಗಾರಿಕೆ, ಪ್ರಾರಂಭವಾದವು. (ದೇ.ಪ್ರ.ಚ) ಸ್ಥಳೀಯ ಪ್ರಾಕೃತಿಕ ಪರಿಸ್ಥಿತಿಯನ್ನು ಅನುಸರಿಸಿ ಬೇಟೆಯ ನಂತರ ಕೆಲವು ಜನಾಂಗಗಳು ಪಶುಪಾಲನೆಗೂ, ಕೆಲವು ಕೃಷಿಯನ್ನು ಅವಲಂಬಿಸಿದವು. (ಅದೇ)

ದಕ್ಷಿಣದ ದ್ರಾವಿಡ ಜನಕುಲಗಳ ಅನುಭವದಿಂದ ಹೇಳುವುದಾದರೆ ದಲಿತರು ಬೇಟೆಗಾರಿಕೆಯಿಂದ ನೇರವಾಗಿ ಬೇಸಾಯಕ್ಕೆ ಪದಾರ್ಪಣ ಮಾಡಿರಬೇಕು. ಅವರು ಕೋಣವನ್ನು ಬೇಸಾಯಕ್ಕೆ ಬಳಸುತ್ತಿದ್ದರೆಂದು ತೋರುತ್ತದೆ.

ಆದರೆ ಬೇಟೆಗಾರಿಕೆಯಿಂದ ಪಶುಪಾಲನೆಗೆ ಬೆಳೆದು ನಿಂತ ದ್ರಾವಿಡ ಜನಕುಲಗಳೇ ನಮ್ಮಲ್ಲಿ ಅಧಿಕ ಪ್ರಮಾಣದಲ್ಲಿವೆ. ಅವು ಇಂದಿಗೂ ತಮ್ಮ ಈ ಮೂಲ ಸ್ವರೂಪವನ್ನು ಅಲ್ಲಲ್ಲಿ ಸ್ವಲ್ಪ ಮಟ್ಟಿಗೆ ಉಳಿಸಿಕೊಂಡಿವೆ. (ಉದಾ: ತೋಡರು, ಕಾಡುಗೊಲ್ಲರು, ಮ್ಯಾಸನಾಯಕರು) ಪಶುಪಾಲಕರ ಈ ಹಟ್ಟಿ ಸಂಸ್ಕೃತಿಗೂ, ದಲಿತರ ಹಳ್ಳಿ ಸಂಸ್ಕೃತಿಗೂ ಸ್ಪಷ್ಟವಾದ ವ್ಯತ್ಯಾಸಗಳು ಉಳಿದುಕೊಂಡಿರುವುದರಿಂದ, ದಲಿತರ ಕೃಷಿ ಸಂಸ್ಕೃತಿಯ ಬಗ್ಗೆ ಖಚಿತವಾಗಿ ಪ್ರತಿಪಾದಿಸಲು ಸಾಧ್ಯವಾಗುತ್ತದೆ.

ಬಯಲು ಸೀಮೆಗಿಂತ ಕರಾವಳಿ ಪ್ರದೇಶದ ಅನುಭವಗಳು ಹೆಚ್ಚು ವಿಶ್ವಾಸನೀಯ ಮತ್ತು ಆದಿಮ ಸ್ವರೂಪದವು. ಇದಕ್ಕೆ ಭೌಗೋಳಿಕ ಕಾರಣವಿದೆ. ಬಯಲು ಸೀಮೆಗಳಲ್ಲಿ ವಿವಿಧ ಜನಕುಲಗಳ ಸಂಪರ್ಕ, ಒಡನಾಟ, ಕೊಳುಕೊಡೆ ಹೆಚ್ಚು. ಹಾಗಾಗಿ ಸಂಸ್ಕೃತಿಗಳಲ್ಲೂ ಪರಿವರ್ತನೆಗಳೂ ಹೆಚ್ಚು. ಸಹ್ಯಾದ್ರಿ ಬೆಟ್ಟ ಮತ್ತು ಕರಾವಳಿ ಭಾಗದ ಜನ ಸಮುದಾಯಗಳು, ಸಂಪರ್ಕಗಳಿಗೆ ಕಾಲ ಕಾಲಕ್ಕೆ ಉಂಟಾದ ಇತರ ಪ್ರಭಾವಗಳಿಗೆ ಒಳಗಾಗಿಯೂ ಆದಿಮ ಪದ್ಧತಿ ಪರಂಪರೆಗಳನ್ನು ಹೆಚ್ಚು ಉಳಿಸಿಕೊಂಡು ಬಂದಿದೆ.

ಇಲ್ಲಿ ನಡೆಯುವ ಪ್ರಸಿದ್ಧ ಕಂಬುಲದ ಉದಾಹರಣೆಯೊಂದೇ ಸಾಕು ಕೃಷಿಗೆ ದಲಿತರೇ ಹೇಗೆ ಮೂಲ ಕಾರಣರೆಂಬುದು ತಿಳಿಯುತ್ತದೆ.

**ಕಂಬುಲ :**

ದಕ್ಷಿಣ ಕರ್ನಾಟಕದ ಓಟದ ಕೋಣಗಳ ಸ್ಪರ್ಧೆಗೆ ಈಗ ಕಂಬುಲವೆಂದು ಹೇಳುತ್ತಿದ್ದರೂ, ಪೂರ್ವದಲ್ಲಿ ಇದು ಕೃಷಿ ಮಾಟಕ್ಕೆ ಸಂಬಂಧಿಸಿದ್ದು. ಮುನ್ನೂರಕ್ಕಿಂತ ಹೆಚ್ಚಿನ ಸ್ಥಳಗಳಲ್ಲಿ ನಡೆಯುವ ಈ ಪದ್ಧತಿಯಲ್ಲಿ ಕೃಷಿ ಮಾಟದ ಅವಶೇಷಗಳಿವೆ. ಡಾ. ಬಿಳಿಮಲೆಯವರು ಇದರ ಯಥಾವತ್ತಾ ಚಿತ್ರ ಕೊಟ್ಟಿದ್ದಾರೆ. ("ಕರಾವಳಿ ಜಾನಪದ")

ಅಸ್ಪೃಶ್ಯರಾದ ಕೊರಗರು ಕಂಬುಲದಲ್ಲಿ ನಿರ್ವಹಿಸುವ ಕೆಲಸಗಳು ಕೃಷಿ ಮಾಟದ, ಒಟ್ಟಾರೆ ದಲಿತ ಸಂಸ್ಕೃತಿಯ ಕೆಲವು ಮುಖ್ಯ ತಿರುಳನ್ನು ನಿರೂಪಿಸುತ್ತೇವೆ.

ಮೊದಲು ಅವರು ಕಂಬುಲ ನಡೆವ ಹಿಂದಿನ ದಿನ ಡೋಲು ಬಾರಿಸುತ್ತ ಊರಿಡೀ ಸುತ್ತಿ ಕಂಬುಲದ ಸುದ್ದಿ ಮುಟ್ಟಿಸುತ್ತಾರೆ. ಅಂದರೆ ಕಂಬುಲದ ಪ್ರಾರಂಭ ಕೊರಗರಿಂದ. ಅಂದು ಸಂಜೆ ಮುಕಾರಿಯ ನೇತೃತ್ವದಲ್ಲಿ ಕೊರಗರು ಗದ್ದೆಯ ಹತ್ತಿರ ನೆರೆದು ಬೆಂಕಿಯ ಸುತ್ತ ಡೋಲು ಬಾರಿಸುತ್ತ ಕುಣಿಯ ತೊಡಗುತ್ತಾರೆ. ಕಳ್ಳು ಕುಡಿದು ಕುಣಿಯುತ್ತ ರಾತ್ರಿಯಾದಂತೆ ಲೈಂಗಿಕ ಚಟುವಟಿಕೆಗೆ ತೊಡಗುತ್ತಾರೆ. ಸಲಿಂಗರತಿ, ಮುಷ್ಠಿ ಮೈಥುನಗಳಲ್ಲಿ ನಿರತರಾಗುತ್ತಾರೆ. ಕೊರಗ ಹೆಂಗಸರು, ಮಕ್ಕಳು, ಈ ದೃಶ್ಯ ನೋಡುತ್ತಿರುತ್ತಾರೆ. ವೀರ್ಯವನ್ನು ಕಂಬುಲ ಗದ್ದೆ ನೀರಿನಿಂದ ತೊಳೆಯುತ್ತಾರೆ. ಬೆಳಗಿನವರೆಗೂ ಈ ಹಾಡು, ನೃತ್ಯ, ಸಂಭೋಗಕ್ರಿಯೆ ಜರುಗುತ್ತವೆ. ಮರುದಿನ ಬೆಳಿಗ್ಗೆ ಇವರಲ್ಲಿ ಕೆಲವರು ಕೋಣಗಳಾಗಿ ಅಣಕು ಕಂಬುಲ ನಡೆಸುತ್ತಾರೆ. ಈ ಇಡೀ ಕೃತ್ಯಕ್ಕೆ "ಪನಿಕುಲ್ಲುನೆ" (ಹನಿಯಲ್ಲಿ ಕುಳಿತುಕೊಳ್ಳುವುದು) ಎಂದು ಕರೆಯುತ್ತಾರೆ. ಆನಂತರ ಸ್ನಾನ ಮಾಡಿ ಕಂಬುಲ ಮುಗಿಯುವವರೆಗೆ ಡೋಲು ಬಾರಿಸುತ್ತಿರುತ್ತಾರೆ.

ಕಂಬುಲಕ್ಕೆ ಕೋಣಗಳನ್ನು 'ಮದು ಮಗನಂತೆ' ಸಿಂಗರಿಸುತ್ತಾರೆ. ಕಾಲುಗಳಿಗೆ ಮಂತ್ರಿಸಿದ ನೂಲು ಇಲ್ಲವೇ ತಾಯಿತ ಕಟ್ಟಿರುತ್ತಾರೆ. ಇಡೀ ವರ್ಷ ಲಕ್ಷಾಂತರ ರೂಪಾಯಿ ವೆಚ್ಚ ಮಾಡಿ ಅವನ್ನು ಕೊಬ್ಬಿಸಿರುತ್ತಾರೆ. ಕಂಬುಲ ಗದ್ದೆ ಯಜಮಾನ ನಾಗನಬನಕ್ಕೆ ಹೋಗಿ ಕಂಬುಲದ ಯಶಸ್ವಿಗೆ ಪ್ರಾರ್ಥಿಸಿ ಬರುತ್ತಾನೆ. ಅಲ್ಲಿಯ ಪಿಂಗಾರದ ಎಸಳನ್ನು ತಂದು ಕೋಣಗಳ ಹಣೆಗೆ ಕಟ್ಟಲಾಗುತ್ತದೆ. ಇದನ್ನು ಕಟ್ಟದೇ ಕೋಣ ಗದ್ದೆಗೆ ಇಳಿಯುವಂತಿಲ್ಲ. ಯಜಮಾನನ ಮನೆಗೆ ಸೇರಿದ 'ಭೂತ'ವು ತನ್ನ ಸಾಂಪ್ರದಾಯಿಕ ವೇಷ ಭೂಷಣಗಳೊಂದಿಗೆ ಕೋಣನ ಜತೆ ಗದ್ದೆಗೆ ಬರುತ್ತದೆ. ಗಂತ್‌ನಲ್ಲಿ ನಿಲ್ಲಿಸಿ ಕೋಣಗಳನ್ನು ಓಡಿಸುವುದಕ್ಕೆ ಕರೆ ಬಿಡಿಸುವುದು ಎನ್ನುತ್ತಾರೆ. (ಇಡೀ ಕುಂಬಲದ ಮುಖ್ಯ ಆಶಯವೇ ಇದು–ಲೇಖಕ) ಇವು ಸ್ಪರ್ಧೆಯಲ್ಲಿ ಭಾಗಿಯಾಗದ 'ಮೂರ್ತದ ಎರು'ಗಳು. ಇವನ್ನು 'ದರಿಗುಂಟ'ಕ್ಕೆ ಕಟ್ಟಿರುತ್ತಾರೆ.

ಕೋಣಗಳಿಗೆ ನೊಗಕಟ್ಟಿ ಹಗ್ಗ ಹಿಡಿದುಕೊಂಡೋ, ಗೋರು ಹಲಗೆ ಕಟ್ಟಿಯೋ, ನೇಗಿಲು ಕಟ್ಟಿಯೋ 'ಕಣೆಪಲಾಯಿ' ಬಿಗಿದೊ ಓಟದ ಸ್ಪರ್ಧೆ ಏರ್ಪಡಿಸುತ್ತಾರೆ. ಗೆದ್ದ ಕೋಣಗಳ ಮೆರವಣಿಗೆಯನ್ನು ರಾಜವೈಭವದಿಂದ ಮಾಡಲಾಗುತ್ತದೆ. ಕೋಣಗಳೆಲ್ಲ ಹೋದ ನಂತರ 'ಕಂಬುಲದ ಗದ್ದೆ'ಯ ನಡುವೆ ಹಾಲೆರೆದು ಅರಿಶಿಣ ಬಣ್ಣದ ಹೂವಿನಿಂದ ಅಲಂಕಾರವಾದ 'ಪೂಕರೆ ಕಂಬ' (ನಾಗಧ್ವಜ) ನೆಡುತ್ತಾರೆ. ಇದಕ್ಕೆ ನಿಂಬೆಹಣ್ಣು ಕಟ್ಟಿರುತ್ತಾರೆ. ಮರುದಿನ ಊರ ಜನರೆಲ್ಲ ಸೇರಿ ಗದ್ದೆಗೆ ಬತ್ತದ ಸಸಿ ನೆಡುತ್ತಾರೆ. ಇಲ್ಲಿಗೆ ಕಂಬುಲ ಮುಕ್ತಾಯವಾಗುತ್ತದೆ.

ಕಂಬುಲವನ್ನು ಬಿಳಿಮಲೆಯವರು ಕಂಪ–ಪುಲ ('ಕೆಸರು ಹೊಲ') ಎಂದು ವಿಗ್ರಹಿಸುತ್ತಾರೆ.

ಉತ್ತರ ಮತ್ತು ಮಧ್ಯ ಕರ್ನಾಟಕದಲ್ಲಿ ಜೂನ್ ಜುಲೈನಲ್ಲಿ ಬರುವ ಜೇಷ್ಠ ಮಾಸದ ಹುಣ್ಣಿವೆಗೆ 'ಕಾರಹುಣ್ಣಿವೆ' ಎನ್ನುತ್ತಾರೆ. ಅಂದೇ ಕರಿ ಹರಿಯುವ ಹಬ್ಬ. ಫಾಲ್ಗುಣಮಾಸ (ಮಾರ್ಚ್–ಏಪ್ರೀಲ್)ದಲ್ಲಿ ಕಾಮನನ್ನು ಸುಟ್ಟ ಬೂದಿಯಿಂದ ಊರ ಸುತ್ತಲೂ ಕಟ್ಟಿದ ಕರಿಯನ್ನು ಕಾರಹುಣ್ಣಿವೆಯಂದು ಹರಿಯುವ ವಿಧಿಯಾಚರಣೆ ಮಾಡುತ್ತಾರೆ. ಊರ ಅಗಸಿಯ ಹತ್ತಿರ ರಸ್ತೆಯ ಆಚೆ ಈಚೆ ಎರಡು ಕಂಬಗಳನ್ನು ನಿಲ್ಲಿಸಿ ಅಡ್ಡಲಾಗಿ ಅದಕ್ಕೆ ಬೇವು, ಮಾವು, ತಳಿರು, ಹಣ್ಣು, ಕಾಯಿಕಟ್ಟಿದ ಮೆದೆ ಹುಲ್ಲಿನ ಹಗ್ಗವನನು (ದ.ಕ. ದಲ್ಲಿ 'ದರಿಗುಂಟ') ಕಟ್ಟುತ್ತಾರೆ. ಹಿಂದಿನಿಂದ ಬಂದ ಪರಂಪರೆಯ ಮನೆಯವರ ಎತ್ತುಗಳನ್ನು ಸಿಂಗರಿಸಿ ಹಗ್ಗ ಹರಿಯುವಂತೆ ಓಡಿಸುತ್ತಾರೆ. ಊರ ರೈತರು, ತಮ್ಮ ಸಿಂಗರಿಸಿದ ಎತ್ತುಗಳನ್ನೂ ಹಿಂದೆ ಓಡಿಸುತ್ತಾರೆ. ಹಿಂದಿನ ದಿನ 'ಹೊನ್ನುಗ್ಗಿ'ಯಂದು ಎತ್ತುಗಳ ಮೈತೊಳೆದು ಬಣ್ಣ ಹೂಗಳಿಂದ ಅಲಂಕರಿಸಿ ಪೂಜಿಸಿ ಎಡೆ ತಿನ್ನಿಸಿರುತ್ತಾರೆ. ಇದೇ ತಿಂಗಳ ಒಂದು ಮಂಗಳವಾರ ಅಥವಾ ಶುಕ್ರವಾರ ರೈತರು ತಮ್ಮ ಮನೆಗಳಲ್ಲಿ 'ಕೂರಿಗೆ' ಅಮ್ಮನ ಪೂಜೆ ಮಾಡುತ್ತಾರೆ. (ಮುಂದೆ ನೋಡಿ) ಕರಿಹರಿದ ನಂತರವೇ ಮನೆಯಲ್ಲಿರುವ ಕಾಳನ್ನು ಭೂಮಿಗೆ ಬಿತ್ತಲು (ಊರಹೊರಗೆ) ತೆಗೆದುಕೊಂಡು ಹೋಗಬೇಕೆಂಬ ನಂಬಿಕೆ ಇದೆ. 'ಕಂಬುಲ' ಕರಿ ಹರಿಯುವ ಪದ್ಧತಿಯ ಆದಿಮ ರೂಪವಾಗಿದೆ. ದಲಿತರ ಪಾತ್ರವೂ ಅಬಾಧಿತವಾಗಿ ಉಳಿದಿದೆ. ಆದಿಮ ಕಾಲದಲ್ಲಿ ಕೊರಗರು ಭೂಮಿಯ ನಿಜವಾದ ಒಡೆಯರಾಗಿದ್ದಾಗ ವಾರ್ಷಿಕ ಬೇಸಾಯ ಆರಂಭಿಸುವ ಮೊದಲು ಮಾಡಬೇಕಿದ್ದ ಕಡ್ಡಾಯ ವಿಧಿಯಾಚರಣೆಯೆ 'ಕಂಬುಲ' ವೆಂದು ನನಗೆ ತೋರುತ್ತದೆ. ಆಗ ಕೊರಗ ಗಂಡಸರಲ್ಲ, ಹೆಂಗಸರು ಈ ವಿಧಿಯಾಚರಣೆ ಮಾಡುತ್ತಿರಬೇಕು. ಆಗ ಭೂಮಿ ಕುಲದ ಸಾಮೂಹಿಕ ಒಡೆತನಕ್ಕೆ ಸೇರಿತ್ತೆಂಬುದು ಬಿಳಿ ಮಲೆಯವರ ಲೇಖನದಲ್ಲಿ ಒಂದೆಡೆ ಸೂಚನೆಯಿದೆ.

"ಕಂಬುಲದ ಗದ್ದೆಯ ಒಡೆತನ ಗುತ್ತಿನವರಿಗೆ ಸೇರಿದ್ದರೂ ಕಂಬುಲದ ದಿನ" "ಸಾರ್ವಜನಿಕರ ಒಡೆತನ, ಇರುತ್ತದೆ.." ಆಶ್ಚರ್ಯವೆಂದರೆ ಈ ಸಾಮೂಹಿಕ ಒಡೆತನ ಸ್ಪರ್ಧೆಗೆ ಬಿಳಿಮಲೆ 'ಜಮೀನುದಾರಿ ಪದ್ಧತಿಯೆ ಬೇಕಾಗುತ್ತದೆ' ಎಂದು ಅರ್ಥೈಸುತ್ತಾರೆ. ಇದು ಸರಿಯಲ್ಲ. ಊಳಿಗಮಾನ್ಯ ಕಾಲದಲ್ಲಿ ಕೊರಗರಿಂದ ಭೂಮಿ ಇತರರ ಪಾಲಾದಾಗ ಕಂಬುಲಕ್ಕೆ ಬೇರೆ ಬೇರೆ ಆಯಾಮ ಬಂದಿತು. ಮೂಲ ಆಶಯಗಳೇ ಮರೆಗೆ ಸರಿದು ಅಪ್ರಧಾನವಾದ ಸ್ಪರ್ಧೆ ಎದ್ದು ಕಾಣುವಂತಾಯಿತು. ಕೊರಗರ ಡೋಲಿನ ನಿಯತ ಬಡಿತ 'ಪ್ರಕೃತಿಯ ಅವ್ಯವಸ್ಥೆಯನ್ನು ವ್ಯವಸ್ಥಿತವಾಗಿ ಮಾರ್ಪಡಿಸುತ್ತದೆ" (ಅದೇ) ಹೀಗೆ ಸಾಂಕೇತಿಕವಾಗಿ ವ್ಯವಸ್ಥೆಗೊಳಿಸದೇ 'ಕಂಬುಲ ನಡೆಸಲು ಸಾಧ್ಯವಿಲ್ಲ'. ಲೈಂಗಿಕ ಕ್ರಿಯೆಯಲ್ಲಿ ಗದ್ದೆಯಲ್ಲಿ ಬೀಜ ಬಿತ್ತುವುದು ಮತ್ತು ಫಲವಂತಿಕೆಗಳು ಸಮನ್ವಯಗೊಂಡಿವೆ. ಕೊರಗರು ಭೂಮಿಯ ಬೀಜ ಬಿತ್ತುವುದು ಮತ್ತು ಫಲವಂತಿಕೆಗಳು ಸಮನ್ವಯಗೊಂಡಿವೆ. ಕೊರಗರು ಭೂಮಿಯ ಜೊತೆ ಸಂಬಂಧ ಹೊಂದಿರುವುದರಿಂದ ಕಂಬುಲದಲ್ಲಿ ಅವರ ಪಾತ್ರ ಮುಖ್ಯವಾಗಿದೆ. ಲಿಂಬೆಹಣ್ಣು, ಹಿಂಗಾರ (ಅಡಿಕೆಯ ಚಿಕ್ಕಕಾಯಿಗಳ ಗೊಂಚಲು)ಗಳು ಸಂತಾನವನ್ನು ಸಂಕೇತಿಸುವುದು, ನಾಗಪೂಜೆ, ಕಂಬುಲ ನಡೆವ ಮುನ್ನ ಮದುವೆಯಾದ ಹೆಣ್ಣು ಗಂಡು ಕೊಡಬಾರದೆಂಬ ನಿಷೇಧ, ಬೀಜ ಒಡೆಯದಿರುವ ಕೋಣಗಳನ್ನು ಮಾತ್ರ ಕಂಬುಲಕ್ಕೆ ಇಳಿಸುವುದು ಇವೆಲ್ಲಾ ಆದಿಮ ಕೃಷಿ ಮಾಟದ ಅಂಶಗಳೇ. ಈಗ ಕಂಬುಲ ಗದ್ದೆಗಳ ಯಜಮಾನರಾದ ಬಂಟರೂ ಮಾತೃಮೂಲೀಯ ಕುಟುಂಬ ವ್ಯವಸ್ಥೆಗೆ ಸೇರಿದವರೆಂಬ ಅಂಶವೂ ಗಮನಾರ್ಹವೇ. 'ಕಂಬಳಿತ್ತಾಯ' ಎಂಬ ಭೂತವನ್ನು ಕಂಬುಲದ ಅಂಗವಾಗಿ ಹೇಗೆ ಆರಾಧಿಸಲಾಗುತ್ತದೆಯೋ ತಿಳಿಯದು. ಈ ಭೂತ ಬೆಳೆಯನ್ನು ರಕ್ಷಿಸುವುದಂತೆ.

ಕಂಬುಲದ ಈ ಎಲ್ಲ ವಿವರಗಳು ದಲಿತ ಸಂಸ್ಕೃತಿಯಿಂದ ಸಮೃದ್ಧವಾಗಿದೆ. ದಲಿತರನ್ನು ಪ್ರತ್ಯೇಕಿಸಿ ಈ 'ಆಚರಣೆ'ಯನ್ನು ಊಹಿಸಲೂ ಆಗಲಾರದು.

"ಮೇರರು ಹಾಡುವ ಹಾಡುಗಳಲ್ಲಿ ಕೊರಗರು ಮಾನವಕುಲದ ಮೂಲಪುರುಷರು" ಕೊರಗ–ಕೊರತಿಯರಿಂದ ೧೦೧ ಕುಲಗಳು ಹುಟ್ಟಿದವು ಎಂಬ ಸಂಗತಿಯನ್ನು ನಾವಡಾ ದಂಪತಿಗಳು ಗಮನಿಸಿದ್ದಾರೆ. ('ಕಾಡ್ಯಾನಾಟ')

'ಕರ್ಂಗೋಲು' ಕೃಷಿ ಚಟುವಟಿಕೆಗೆ ಸಂಬಂಧಿಸಿದ ದಕ್ಷಿಣ ಕನ್ನಡ ಜಿಲ್ಲೆಯ ದಲಿತರ "ಕಲೆ". ಪರವ, ಪಂಬದ, ನಲಿಕೆ, ಮೇರ, ಮನ್ಸ, ಕೊರಗ ಈ ದಲಿತ ಜಾತಿಗಳು ಮಾತ್ರ ಒಂದಿಲ್ಲೊಂದು ಕೃಷಿ ಸಂಬಂಧಿ ಆಚರಣೆಗಳನ್ನು ಮಾಡುತ್ತಾರೆ ಮತ್ತು ಭೂತಗಳಾಗುತ್ತಾರೆ."

ಸುಗ್ಗಿಯ ಕಾಲದಲ್ಲಿ ಕರ್ಂಗೋಲು ಕುಣಿತದ ದಲಿತ ಹೆಂಗಸರು ಮತ್ತು ಗಂಡಸರು ವೇಷ ಹಾಕಿಕೊಂಡು ಮನೆಮನೆಗೆ ಹೋಗಿ, "ಮುಂದಿನ ಬಿತ್ತನೆಯ ಬೀಜ ಸಂಗ್ರಹಿಸುತ್ತಾರೆ." ಮೈಗೆ ಕರಿಬಣ್ಣ ಸವರಿಕೊಂಡು, ಸೊಪ್ಪು, ಅಡಿಕೆ, ಸಿಂಗಾರಗಳ ಅಲಂಕಾರ ಮಾಡಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ವಿಸ್ತಾರವಾಗಿ ಇವರು ಹಾಡುವ ಪದದ ಮೊದಲ ಸಾಲು "ಪೊಲಿ ಪೊಲಿ ಎಂದು ಕರೆವೆವು ಕರ್ಂಗೋಲ್ ಹುಟ್ಟಿದ." ಮೂರು ರಾತ್ರಿ ಐವರು ಮನ್ಸರು ಸೇರಿ ಪ್ರತಿ ಮನೆಯ ಮುಂದೆ ಮಾಡುವ ಈ ಕುಣಿತದ ಪ್ರಾರಂಭವಾಗುವುದೇ "ಪೊಲಿಯನ್ನು ಕರೆದುಕೊಂಡು ಬಂದಿದ್ದೇವೆ" ಎಂಬ ಮಾತಿನಿಂದ. ಹಾಡು, ಕುಣಿತದ ಮುಕ್ತಾಯದಲ್ಲಿ ತಂಡದ ಮುಖ್ಯಸ್ಥ "ಪೊಲಿ ಕರೆದು ತಂದು ಮನೆ ತುಂಬಿಸಿದೆವು" ಎಂದು ಹೇಳುತ್ತಾನೆ. "ಪೊಲಿ, ಪೊಲ್ಸು ಎಂದರೆ ಅದೃಷ್ಟವನ್ನು ತರುವ, ತೆನೆಯನ್ನು ತಂದು ಮನೆಯನ್ನು ತುಂಬಿಸುವ ಆಶಯವನ್ನು ಈ ಕುಣಿತವು ಪ್ರಾರಂಭವಾಗುವ ರೀತಿಯು ಧ್ವನಿಸುತ್ತದೆ." (ಡಾ.ಕೆ. ಚಿನ್ನಪ್ಪಗೌಡ: 'ಕರ್ಂಗೋಲು ಕುಣಿತ' ಪಠ್ಯ, ಪ್ರದರ್ಶನ ಮತ್ತು ಅರ್ಥ"–"ಸಿರಿ") ಈ ಅದೃಷ್ಟವನ್ನು ಕಾರಣಿಕ ಗುಣಗಳಿಂದ (ಮಾಂತ್ರಿಕ) ತರುವವರು ಕಾಣದ, ಕಾಟದ ಎಂಬ ಮನ್ಸರ ದೈವ (ಭೂತ)ಗಳು.

ಈ ಮನ್ಸ ಜನಾಂಗದವರು ತಮ್ಮನ್ನು "ಮೂಲೊದಕ್ಲು" ('ಮೂಲದವರು', 'ಮೂಲನಿವಾಸಿಗಳು', aboriginals) ಎಂದು ಕರೆದುಕೊಳ್ಳುತ್ತಾರೆ. ಇವರಿಗೂ ಬೇಸಾಯಕ್ಕೂ, ಗಾಢವಾದ ಸಂಬಂಧವಿದೆ. ಮನೆ ತುಂಬಿಸುವ ಕಣಜ ತುಂಬಿಸುವ ಬತ್ತದ ತೆನೆಯನ್ನು ತರುವ ಸಂದರ್ಭಗಳಲ್ಲಿ ಇವರಿಗೆ ನಿರ್ದಿಷ್ಟ ರೀತಿಯ ಕೆಲಸಗಳಿದ್ದವು. ಉದಾಹರಣೆಗೆ: ಬತ್ತದ ತೆನೆ ತಂದು ಮನೆ ತುಂಬಿಸುವ ಸಂದರ್ಭದಲ್ಲಿ ಮನೆಯ ಕೆಲಸದಾಳುವಾದ ಮನ್ಸ ಜನಾಂಗದ ವ್ಯಕ್ತಿಯೊಬ್ಬನು ಗದ್ದೆಗೆ ಹೋಗಿ ತೆನೆಯನ್ನು ತಂದು ಅಂಗಳದಲ್ಲಿ (ತುಳಸಿ ಕಟ್ಟೆಯಿದ್ದರೆ ಅದರ ಬಳಿ) ಇಡಬೇಕು. ಅಲ್ಲಿಂದ ಮತ್ತೆ ಮನೆಯ ಯಜಮಾನನು ತೆನೆಯನ್ನು ಪೂಜಿಸಿ ಮನೆಯೊಳಗೆ ತಂದು ಮನೆ ತುಂಬಿಸಿಕೊಳ್ಳುತ್ತಾನೆ.(ಅದೇ ಪು. ೩೯೮)

ಇಂಥದೇ ಕೃಷಿ ಸಂಬಂಧಿ ಆಚರಣೆಗಳು 'ಮಾದಿರ ನಲಿಕೆ', ಚೆನ್ನು ನಲಿಕೆ, ಕೊರಗ ತನಿಯ ಕುಣಿತ, ಆಟಿ ಕಳೆಂಜಗಳು.

ಕೊಡಗಿನಲ್ಲಿ ಕೆಂಬಟ್ಟೆ ಹೊಲೆಯರಿದ್ದಾರೆ. ಕೊಡಗಿನ ಗದ್ದೆಗಳಲ್ಲಿ ಕೆಂಪು ಬತ್ತವನ್ನು (ಕೆಂಬತ್ತಿ ಬತ್ತ) ಬೆಳೆಯುವುದರಲ್ಲಿ ಅವರು ಪಳಗಿದವರು. ಇದರಿಂದ ಅವರಿಗೆ ಈ ಹೆಸರು ಬಂದಿದೆ. ಕೆಂಬಟ್ಟೆ ಹೊಲೆಯರು ಕೊಡಗಿನ ಮೂಲನಿವಾಸಿಗಳೆಂದು ಮೂಗ್ಲಿಂಗ್ ಹೇಳುತ್ತಾನೆ. 'ಕಂಬಳ ನಾಟಿ'ಯ ಹಕ್ಕು ಇವರಿಗೇ ಮೀಸಲಾಗಿದೆ. "ಹೊಲೆಮಗನೇ ತಲೆಮಗ" ಎಂಬ ಗಾದೆ ಇಲ್ಲಿ ಪ್ರಚಾರವಿದ್ದು ಜಮ್ಮದಾಳು ಕೆಂಬಟ್ಟೆ ಹೊಲೆಯ ಈ ಪ್ರದೇಶದ ಮಗ ಎಂದಾಗುತ್ತದೆ. (ಎಂ.ಜಿ. ನಾಗರಾಜ: "ಕೆಂಬಟ್ಟೆ ಹೊಲೆಯರ ಸಂಸ್ಕೃತಿ") ಭದ್ರಕಾಳಿ, ಭಗವತಿ, ಪನ್ನಂಗಾಲತಮ್ಮೆ, ಬೀರೆದೇವರು, ವೀರಭದ್ರ, ಅಯ್ಯಪ್ಪ ಈ ಮೊದಲಾದ ದೈವಗಳಿರುವ ಕೊಡಗಿನ ೧೩ ಬಗೆಯ ದೇವರ ಕಾಡುಗಳಲ್ಲಿ ಕೆಂಬಟ್ಟೆಗಳಿಗೆ ಸಂಬಂಧಿಸಿದಂತೆ

ಹೊಲೆದೇವರ ಕಾಡುಗಳೂ ಇವೆ. (ಅದೇ ಪು. ೨೬೧) ಬೇಡು ಹಬ್ಬದಲ್ಲಿ ಹಿಂದೆ ಕೆಂಬಟ್ಟೆ ಮಹಿಳೆಯರು ರಾತ್ರಿ ಬತ್ತಲೆ ಕಳಿ ಸಲ್ಲಿಸುತ್ತಿದ್ದರು. (ಅದೇ ೨೬೨)

ಹರಿಜನರಿಗೆ, 'ಕುಳಪುಟ್ಟಿಗೆಯ ಆಯದಾಳು' ಎಂಬ ಹೆಸರಿದೆ. ಹಲ್ಮಿಡಿ ಶಾಸನದ 'ಕುಳಬ್ಬಿಡಿ' ಪದವೇ ಕಾಲಾಂತರದಲ್ಲಿ ಕುಳವಾಡಿ ಆಗಿದೆ. ಹೀಗೆ ಕನ್ನಡದ ಪ್ರಥಮ ಶಾಸನದಲ್ಲೇ ದಲಿತರ ಉಲ್ಲೇಖವಿದೆ. (ಅದೇ ಪು. ೨೩)

ದಕ್ಷಿಣ ಕನ್ನಡದ ಜೀತಪದ್ಧತಿಯಲ್ಲಿ "ಮೂಲದ ಹೊಲೆಯ" "ಸಾಲದ ಹೊಲೆಯ" ರೆಂದು ಇದ್ದಾರೆ. 'ಹುಟ್ಟಾಳು', 'ಮಣ್ಣಾಳು' ಎಂಬ ಹೆಸರುಗಳೂ ಇಲ್ಲಿ ಪ್ರಚಲಿತದಲ್ಲಿವೆ. ಇವೆಲ್ಲ ಹೊಲೆಯರು ಮಣ್ಣಿಗೆ ಸಂಬಂಧಿಸಿದವರೆಂಬುದನ್ನೇ ಹೇಳುತ್ತವೆ. ಜಾತಿಬದ್ಧ ಫ್ಯೂಡಲ್ ಸಮಾಜ ಮಾತ್ರ ಇವರನ್ನು ಅದೇ ಭೂಮಿಗೆ 'ಆಳು'ಗಳನ್ನಾಗಿ ಪರಿವರ್ತಿಸಿತು.

ವೇದಯುಗದ ಕೊನೆಗೆ ಬರುವ "ಶ್ರೌತಸೂತ್ರ"ಗಳಲ್ಲಿ ಭೂಮಿಯ ಕೆಲಸದ ಗುಲಾಮರ ಮೊದಲ ಪ್ರಸ್ತಾಪ ಬರುವುದನ್ನು ಶರ್ಮಾ ಗುರುತಿಸಿದ್ದಾರೆ. (ಪೂರ್ವೋಕ್ತ ಪು.೫೧) ಭೂಮಿಯ ಜತೆ ಅದರ ಜನರನ್ನು ನೀಡಲಾಗುತ್ತಿದ್ದ ಬಗ್ಗೆ ಸೂತ್ರವೊಂದಿದೆ. ಈ ಸೂತ್ರ ಕಾಲಕ್ಕಾಗಲೇ ಭಾರತದ ತುಂಬ ಹುಟ್ಟಾಳು ಪದ್ಧತಿ ಜಾರಿಯಲ್ಲಿದ್ದಿರಬಹುದೇ? ಭೂಮಿಯ ಜೊತೆ ನೇಗಿಲು, ಎತ್ತುಗಳಂತೆ ಆದಿಮ ಕೃಷಿಕ ದಲಿತರೂ ಅಂಟಿಕೊಂಡಿದ್ದರು. ಭೂಮಾಲಿಕತ್ವ ಬದಲಿದರೂ ಭೂಮಿಯ ಜತೆಯ ಅವರ ಸಂಬಂಧವನ್ನು ಬಿಡಿಸಲಾಗುತ್ತಿರಲಿಲ್ಲ. ಹಾಗಾಗಿ ಭುಮಿ ಮಾರಾಟವಾದಾಗ ಅವರ ಜೊತೆ ಈ ದಲಿತರೂ ಹೊಸ ಒಡೆಯನ ಪಾಲಾಗುತ್ತಿದ್ದರು. ಶ್ರೌತಸೂತ್ರದ ವ್ಯಾಖ್ಯಾನದಲ್ಲಿ ಇವರಿಗೆ 'ಗರ್ಭದಾಸ'ರೆನ್ನಲಾಗಿದೆ. ಇವರೇ 'ಹುಟ್ಟಾಳು'.

ಛಾಂದೋಗ್ಯ ಉಪನಿಷತ್ತಿನಲ್ಲಿ ಜನಶೃತಿ ಎಂಬ ರಾಜ ರೈತನಿಗೆ ಇಡಿ ಹಳ್ಳಿಯನ್ನು ಉಂಬಳಿ ಕೊಡುವನು. ಆದರೆ ಈ ಹಿಂದೇ ಭೂ ಒಡೆತನವೇ ಇಲ್ಲದಾಗ ಭೂದಾನವಿರಲಿಲ್ಲ. ಇದರರ್ಥ ಭೂಮಿಯ ಒಡೆಯರು ಆಗ ದಲಿತರಾಗಿದ್ದರು ಅಷ್ಟೇ. ದಲಿತರಿಂದ ಭೂಮಿಯನ್ನು ಕಸಿದು ಇತರರಿಗೆ ಒಡೆತನ ನೀಡುವ ಸಂದರ್ಭದ ಸಾಂಸ್ಕೃತಿಕ ಇಕ್ಕಟ್ಟು ಬ್ರಾಹ್ಮಣವೊಂದರಲ್ಲಿ ಹೀಗೆ ಸೂಚಿತವಾಗಿದೆ. "ಭೂಮಿಯನ್ನು ವಂಶ ಅಥವಾ ಬುಡಕಟ್ಟಿನ ಒಪ್ಪಿಗೆಯನ್ವಯ ಮಾತ್ರವೇ ದಾನವಾಗಿ ನೀಡಬೇಕು. ಹೀಗಿದ್ದರೂ ಭೂಮಿತಾಯಿ ವರ್ಗಾವಣೆಯಾಗಲು ನಿರಾಕರಿಸುತ್ತಾಳೆ" (ಶರ್ಮಾ ಪು. ೫೨). ಭೂಮಿಯ ಹಸ್ತಾಂತರ ಸುಲಭವಿರಲಿಲ್ಲ ಎಂಬುದನ್ನು ಈ ಸೂತ್ರ ಬೇರೆ ರೀತಿಯಿಂದ ಹೇಳುತ್ತಿದೆ. ಆದರೆ ರಾಜ್ಯಾಧಿಕಾರದ ಬಲದಿಂದ ಅಗ್ರಹಾರ ವ್ಯವಸ್ಥೆ ಮೌನ ಕ್ರಾಂತಿಯನ್ನೇ ಪೂರೈಸಿತು. ಕರ್ನಾಟಕದ ೩೦ ಸಾವಿರ ಶಾಸನಗಳಲ್ಲಿ ಶೇಕಡಾ ೯೦ಕ್ಕಿಂತ ಹೆಚ್ಚಿನವು ಬ್ರಾಹ್ಮಣರಿಗೆ ದೇಗುಲಗಳಿಗೆ ಭೂದಾನ ನೀಡಿದ್ದನ್ನು ಹೇಳುವವು. ಕರ್ನಾಟಕದ ಬಹುತೇಕ ಎಲ್ಲೆಡೆ ಭೂದಾನಗಳ ಮೂಲಕ ಅಗ್ರಹಾರ ಬ್ರಾಹ್ಮಣ ವ್ಯವಸ್ಥೆ ಪ್ರತಿಷ್ಠಾಪಿತವಾಯಿತು. ವಿರೋಧಿಸಿದ ದಲಿತರು ಅಸ್ಪೃಶ್ಯರಾಗಬೇಕಾಯಿತು.

ದೇಶಾದ್ಯಂತ ಭೂಮಿಯ ಗಡಿಗಳನ್ನು ಗುರುತಿಸುವ ಕೆಲಸ ಮಾತ್ರ ದಲಿತರಿಗುಳಿದುದು ಅವರು ಭೂಮಾಲಿಕರಾಗಿದ್ದುದರ ನಿಕಟ ಪರಿಚಯದ ಕಾರಣದಿಂದಲ್ಲವೇ? ಮನುಸ್ಮೃತಿ ಹೇಳುತ್ತದೆ. "ಗಡಿವಿವಾದವಿದ್ದಾಗ ಸಾಕ್ಷಿಗಳು ತಲೆಯ ಮೇಲೆ ಮಣ್ಣು ಹೊತ್ತುಕೊಂಡು, ಕೆಂಪು ಬಟ್ಟೆಯುಟ್ಟು, ಹೂ ಮುಡಿದುಕೊಂಡು ಸುಳ್ಳಾಡಿದರೆ ತಮ್ಮ ಪುಣ್ಯವು ನಾಶ ಹೊಂದುವುದೆಂದು ಪ್ರತಿಜ್ಞೆ ಮಾಡಿ ನಿರ್ಣಯ ಕೊಳ್ಳಬೇಕು". (ಪು. ೩೪೦) ಇಂಥದೇ ಪದ್ಧತಿ ಕರ್ನಾಟಕದಲ್ಲಿತ್ತು. ಹಾಸನ ಪ್ರದೇಶದಲ್ಲಿ ಹೊಲೆಯರಿಗೆ ಕುಳವಾಡಿಗಳೆನ್ನುತ್ತಾರೆ. ಕುಳವಾಡಿಯೇ ಹಳ್ಳಿಯ, ಆ ಹಳ್ಳಿಯ ಜಮೀನಿನ ನಿಜವಾದ ಒಡೆಯ ಎಂಬ

ಭಾವನೆ ಎಲ್ಲ ಜಾತಿಯವರಲ್ಲಿತ್ತು, ಎನ್ನುವ ಥರ್‌ಸ್ಟನ್ ಹಳ್ಳಿಯ  ಮತ್ತು ಹೊಲಗಳ ಮೇರೆಗಳ ಬಗ್ಗೆ ವಿವಾದವಿದ್ದರೆ, ಕುಳವಾಡಿಯೇ ಅಧಿಕೃತ ನಿರ್ಣಯಕನಾಗಿರುತ್ತಿದ್ದ ಎಂದು ದಾಖಲಿಸುತ್ತಾನೆ. ನಿರ್ಣಯ ಮಾಡುವ ಪದ್ಧತಿಯೆಂದರೆ ಮಣ್ಣಿನ ಉಂಡೆ ಮಾಡಿ ಮಧ್ಯದಲ್ಲಿ ನೀರು ಹಾಕಿ, ತಲೆಯ ಮೇಲೆ ಹೊತ್ತು ಗಡಿಯ ಗುಂಟ ಹೋಗುವುದು. ಸರಿಯಾದ ದಾರಿಯಲ್ಲಿದ್ದರೆ, ಮಣ್ಣಿನ ಉಂಡೆ ಒಡೆಯುತ್ತಿರಲಿಲ್ಲ. ದಾರಿ ತಪ್ಪಿದರೆ ತನ್ನಷ್ಟಕ್ಕೇ ಈ ಉಂಡೆ ಒಡೆದು ಚೂರಾಗುತ್ತಿತ್ತು. ಇದರಿಂದಾಗಿ ಮುಂದಿನ ೧೫ ದಿನಗಳಲ್ಲೇ ಕುಳವಾಡಿ ಸಾಯುವನೆಂದು ಪ್ರತೀತಿ. ಅಷ್ಟೇ ಅಲ್ಲ ಅವನ ಮನೆಯೇ ಸರ್ವನಾಶವಾಗುತ್ತಿತ್ತಂತೆ. (ಡಿ II–೩೪೦)

ಇಂಥ ಪದ್ಧತಿ ತಮಿಳುನಾಡಿನಲ್ಲೂ ಇರುವುದು ಇದರ ಸರ್ವವ್ಯಾಪಕತೆಗೆ ಸಾಕ್ಷಿ. ತಮಿಳುನಾಡಿನ ಪರ್ರೈಯನ್‌ರು ಅಲ್ಲಿಯ 'ಹೊಲೆಯರು'. ಹಳ್ಳಿಯ ಗಡಿಗಳನ್ನು ಇವರು ಬಹಳ ಚೆನ್ನಾಗಿ ಮತ್ತು ಅಧಿಕೃತವಾಗಿ ತಿಳಿದಿರುತ್ತಾರೆ. ವಿವಾದಗಳಿದ್ದರೆ ಇವರ ತೀರ್ಮಾನವೇ ಅಂತಿಮವಾಗುತ್ತದೆ. ತೀರ್ಮಾನವನ್ನು ಕೊಡಲು ಇವರು ಮಾಡಬೇಕಾದ ವಿಧಿಯಾಚರಣೆ ಎಂದರೆ ತಲೆಯ ಮೇಲೆ ನೀರ ಗಡಿಗೆ ಹೊತ್ತು ಗಡಿಯ ಗುಂಟ ಹೋಗುವುದು. ಅಮ್ಮನ ಸಾಕ್ಷಿಯಾಗಿ (ನೀರ ಗಡಿಗೆ) ತಾನು ಸತ್ಯವನ್ನೇ ನಡೆಯುತ್ತಿದ್ದೇನೆಂದು ದಲಿತ ಹೇಳುತ್ತಿರುವುದನ್ನು ಈ ರಿಚ್ಯುವಲ್ ಧ್ವನಿಸುವುದಿಲ್ಲವೇ? ಪರ್ರೈಯನ್‌ರೇ ತಮಿಳುನಾಡಿನ ಭೂಮಿಯ ಮೊದಲ ಮಾಲಿಕರು. ಈಗ ಅಲ್ಲಿ ಪ್ರಧಾನ ಬೇಸಾಯಗಾರರಾಗಿರುವ ವೆಲ್ಲಾಳರು ೮ನೇ ಶತಮಾನದಲ್ಲಿ ಬಂದು ವಸಾಹತು ಹೂಡಿದ್ದರಿಂದ ಪರ್ರೈಯನ್‌ರು ತಮ್ಮ ಭೂಮಿ, ಘನತೆ, ಎಲ್ಲವನ್ನೂ ಕಳೆದುಕೊಂಡರೆಂದು ಥರ್‌ಸ್ಟನ್ ದಾಖಲಿಸುತ್ತಾರೆ.

ತಮಿಳುನಾಡಿನಲ್ಲಿ ಅಸ್ಪೃಶ್ಯರಾದ ಪಲ್ಲನ್ನರು ನೀರಾವರಿ ಕೃಷಿಯಲ್ಲಿ ತುಂಬ ಪರಿಣತರೆಂದು ಖ್ಯಾತಿ. ಇವರ ಮಹಿಳೆಯರೂ ಕೃಷಿ ಕಾರ್ಯದಲ್ಲಿ ಹೆಸರಾದವರು ಇವರಲ್ಲಿರುವ ಉಪವಿಭಾಗಗಳೂ ಕುತೂಹಲಕಾರಿ. ಅವು 'ಅಯ್ಯ', 'ಅಮ್ಮ', 'ಅಜ್ಜ', 'ಅತ್ತೆ', ಇತ್ಯಾದಿ.

ಕೇರಳದಲ್ಲಿ ದಲಿತರಿಗೆ ಪುಲಯ, ಚೆರುಮನ್ ಎಂಬ ಹೆಸರಿವೆ. ಚೇರವೇ 'ಕೇರ', 'ಕೇರಳ' ಆಗುತ್ತದೆ. 'ಚೇರರು' ಪ್ರಸಿದ್ಧ ಅರಸುಮನೆತನ. ಚೇರರನಾಡು 'ಕೇರಳ'. ಚೇರರೆಂದರೆ 'ಹೊಲೆಯರು'. ಅಲ್ಲಿರುವ ಐತಿಹ್ಯದ ಪ್ರಕಾರ ಪುಲಯರು ಶಿವನಿಂದ ವರವನ್ನು ಪಡೆದು ಕೊಡಲಿಯಿಂದ ಕಾಡು ಕಡಿದು, ಹೊಲಗಳನ್ನು ಮಾಡಿದರು. ನಂತರ ಇತರರು ಬಂದು ಇವರ ಹೊಲಗಳನ್ನು ಕಿತ್ತುಕೊಂಡು ತಾವೇ ಒಡೆಯರಾದರು ಹಾಗಾಗಿ ಪುಲಯರು ಕೂಲಿಕಾರರಾಗ ಬೇಕಾಯಿತು. ದಕ್ಷಿಣ ಮಲಬಾರಿನ ಚೆರುಮಾನ್‌ರೇ ಉತ್ತರ ಮಲಬಾರನಲ್ಲಿ ಪುಲಯನ್‌ರಾಗಿದ್ದಾರೆ. ಚೆರುಮೆ ಅಥವಾ ಚೆರುಮಕ್ಕಳ್ ಎಂದರೆ 'ಮಣ್ಣಿನ ಮಕ್ಕಳು. 'ಚೆರು' ಎಂದರೆ ಕೆಳಭಾಗದ ಬತ್ತದ ಗದ್ದೆ.

ಕೇರಳದ ದಕ್ಷಿಣ ತ್ರಾವಣಕೋರದ ಗುಡ್ಡಗಾಡಿನಲ್ಲಿ ಕುಮ್ರಿ ಬೇಸಾಯ ಮಾಡಿಕೊಡಿರುವ 'ಕಾನಿಕರ್' ಎಂಬ ಆದಿವಾಸಿಳು ಹೇಳುವ ಒಂದು ಕತೆ ತುಂಬ ಧ್ವನಿಪರ್ಣವಾಗಿದೆ. (ಥರ್‌ಸ್ಟನ್ III-೧೫೭)

ಆದಿಯಲ್ಲಿ ಸಮುದ್ರವೇ ಎಲ್ಲವನ್ನೂ ವ್ಯಾಪಿಸಿತ್ತು. ದೇವರು ನೀರನ್ನು ಹಿಂದಕ್ಕಟ್ಟಿ ಬೆಟ್ಟಗಳು ಕಾಣುವಂತೆ ಮಾಡಿದ. ಪಾರ್ವತಿ ಪರಮೇಶ್ವರರು ಹುಟ್ಟಿಸಿದ ಗಂಡು ಹೆಣ್ಣುಗಳಿಂದ ೫೬ ಕುಲ ಹುಟ್ಟಿದವು. ಜನ ಹೆಚ್ಚಾಗಿ ಭೂಮಿಯಲ್ಲಿ ಬರಗಾಲ ಕಾಣಿಸಿಕೊಂಡಿತು. ಆ ಕಾಲದಲ್ಲಿ ಪುರುಷರು ಬೇಟೆಗಾರರಾಗಿದ್ದರು. ಅವರಿಗೆ ಬಿತ್ತಿ ಬೆಳೆವ ವಿಧಾನ ತಿಳಿದಿರಲಿಲ್ಲ. ಬರಗಾಲದ ಬವಣೆಯನ್ನು ಕೇಳಿ ಶಿವ–ಪಾರ್ವತಿಯರು ಹಂಸಗಳಾಗಿ ಬಂದು ಕಂಜಿರಂ ಗಿಡದ ಮೇಲೆ ಕೂತರು. ಕೊಡತಿ ಹುಳು

ರತಿಸುಖದಲ್ಲಿರುವುದು ಕಂಡು ಮಾನವರ ಮೇಲೆ ಕರುಣೆ ತಾಳಿ ಕರಾವಳಿಯಲ್ಲಿ ಬತ್ತ ಬೆಳೆಯುವಂತೆ ಮಾಡಿದರು. ಪರೈಯಾನ್ ಮತ್ತು ಪುಲಯಾನ್‌ರು ಮೊದಲು ಬತ್ತದ ಬೆಳೆ ನೋಡಿದವರು. ಮೊಟ್ಟ ಮೊದಲು ಅದರ ರುಚಿಯನ್ನು ತಿಳಿದರು. ಮಹಾರಾಜನು ಸುದ್ದಿಯನ್ನು ಕೇಳಿ ಬತ್ತವನ್ನು ತರಲು ಏಳು ಗಿಳಿಗಳನ್ನು ಕಳಿಸಿದ. ಅವು ೭ ತೆನೆಗಳನ್ನು ತಂದವು. ರಾಜ ಅವನ್ನು ಪರೈಯಾನ್‌ರಿಗೆ ಬಿತ್ತಲು ಕೊಟ್ಟ. ಅಲ್ಲಿಯೂ ಬತ್ತ ಸಮೃದ್ಧವಾಗಿ ಬೆಳೆಯಿತು. ಆದರೆ ಅಕ್ಕಿಯ ಅನ್ನವನ್ನು ಮಾಡುವುದು ಹೇಗೆಂದು ರಾಜನಿಗೆ ತಿಳಿದಿರಲಿಲ್ಲ. ಮತ್ತೆ ೭ ಗಿಳಿಗಳು ದೂತರಾಗಿ ಮಲಬಾರಿಗೆ ಬಂದು ಪರೈಯಾನ್ ಮಹಿಳೆ ಮಾಡಿದ ೧೮ ವಿಧದ ಅನ್ನವನ್ನು ತಂದವು. ರಾಜ ಸಂತೋಷದಿಂದ ಭೋಜನ ಮಾಡಿದ......"

ಈ ಕತೆ ಅನೇಕ ಮುಖ್ಯ ವಿಷಯಗಳನ್ನು ಧ್ವನಿಸುತ್ತಿದೆ. ಸಂಭೋಗಕ್ಕೂ, ಕೃಷಿಗೂ (ಕಂಬುಲ ಸಂಬಂಧವಿದೆ ಎಂಬ ನಂಬಿಕೆ ಹೊಲೆಯರೇ ಬತ್ತದ ಬೆಳೆ, ಅನ್ನ ಮಾಡುವ ವಿಧಾನ ತಿಳಿದ ಮೊದಲಿಗರು ಎಂಬ ವಿಚಾರ, ಇದನ್ನು ದಲಿತೇತರ ಕುಲದ ಜನ ಹೇಳುತ್ತಿರುವುದು ಮುಖ್ಯ. ಪ್ರತಿಯಾಗಿ ದ್ರಾವಿಡ ಪಶುಪಾಲಕ ಜನಕುಲಗಳಾವುವೂ ತಾವು ಕೃಷಿಕರೆಂದು ತಮ್ಮ ಯಾವ ಮಹಾಕಾವ್ಯ, ಕತೆ, ಹಾಡುಗಳಲ್ಲಿ ಹೇಳಿಕೊಳ್ಳಲಾರವು.

ಸಂತೋಷ ಚೊಕ್ಕಾಡಿ ದಕ್ಷಿಣ ಕನ್ನಡದ ಕೃಷಿ ಆಚರಣೆಗಳ ಬಗ್ಗೆ ಬರೆಯುತ್ತ ('ಜಾತ್ರೆ ಮತ್ತು ಇತರ ಸಂಶೋಧನಾತ್ಮಕ ಪ್ರಬಂಧಗಳು') 'ಹಾಲು ಹೊಯ್ಯುವುದು' (ಕೋಲ್‌ತ್ರಿ ಮಾಡುವುದು) ಎಂಬುದನ್ನು ಕುರಿತು–

"ನಾಗನಕಲ್ಲು ಇರುವ ಬನದ ಪಕ್ಕದಲ್ಲಿರುವ ಪ್ರತಿಯೊಂದು ಗದ್ದೆಯಲ್ಲೂ ಪೂಕರೆ ಮಾಡುತ್ತಾರೆ. ಪೂಕರೆ ಮಾಡಿದ ಗದ್ದೆಯನ್ನು ಪೂಕರೆಗದ್ದೆ ಎನ್ನುವರು. ಇದು ಸುಗ್ಗಿ ಬೇಸಾಯದ ಮುಂಚೆ ಅಂದರೆ ಗದ್ದೆ ಗೋರಿ ನಡೆಸುವ (ಸಣ್ಣ ಸಣ್ಣ ಗದ್ದೆಗಳಲ್ಲಿ ನಡೆಸುವ ಕಂಬಳವನ್ನು ಗದ್ದೆಗೋರಿ ಎನ್ನುವರು. ಇಲ್ಲಿ ಎತ್ತುಗಳನ್ನು ಕೂಡ ಓಡಿಸುತ್ತಾರೆ.) ಒಂದು ದಿನಕ್ಕೆ ಮುಂಚೆ ಮಾಡುತ್ತಾರೆ. ದೊಡ್ಡ ಟೆಂಗಿನಗಿಡದ ಸುತ್ತ ಚಚ್ಚೌಕ ಹಾಕಿ ಪೂಜೆ ಮಾಡುತ್ತಾರೆ. ಇದನ್ನು ಕೋಲ್ ತ್ರಿ ಮಾಡುವುದು ಎನ್ನುವರು. ಇಂತಹ ಪೂಕರೆ ಗದ್ದೆಯಲ್ಲಿ ಗದ್ದೆಗೋರಿ ದಿನ ಭೂತದ ನೇಮವನ್ನು ನಡೆಸುತ್ತಾರೆ. ಇಲ್ಲಿ ಒಟ್ಟು ಮೂರು ಭೂತಗಳು ನರ್ತಿಸುತ್ತವೆ. ಒಂದನೆಯ ಭೂತ ಗದ್ದೆಗೋರಿ ನಡೆಯುತ್ತಿರುವಾಗಲೇ ನರ್ತಿಸುತ್ತದೆ. ಎರಡನೆಯ ಭೂತ ನರ್ತಿಸುವಾಗ ಒಂದು ಜೊತೆ ಎತ್ತು ಮಾತ್ರ ಗದ್ದೆಯಲ್ಲಿರಬೇಕು. ಇದನ್ನು ಹೊಲೆಯ ಉಳಬೇಕು ಎಂಬ ವಾಡಿಕೆ ರೂಢಿಯಲ್ಲಿದೆ. ನಂತರ ನಾಗನ ಪೂಜೆ ನಡೆಯುವಾಗ ಮೂರನೇ ಭೂತ ನರ್ತಿಸುತ್ತದೆ. ಈ ಭೂತದ ನೇಮವಾದ ನಂತರ ಬೊಂಡ (ಸೀಯಾಳ) ವಿತರಿಸುತ್ತಾರೆ. ಒಂದು ಜೊತೆ ಎತ್ತಿಗೆ ಎರಡು ಬೊಂಡದಂತೆ ನೀಡುತ್ತಾರೆ. ಗದ್ದೆ ಗೋರಿ ಸಂಪೂರ್ಣ ಮುಗಿದ ಮೇಲೆ, ಮನೆಯ ಯಜಮಾನನ ಊಟ. ಹೀಗೆ ಗದ್ದೆ ಗೋರಿ ದಿನ ಒಂದು ಸಂಭ್ರಮದ ಹಬ್ಬ ಜರುಗುತ್ತದೆ. ಇಲ್ಲಿ ಭೂತ ಯಾಕೆ ನರ್ತಿಸುತ್ತದೆ, ಮತ್ತು ಎರಡನೇ ಭೂತ ನರ್ತಿಸುವಾಗ ಹೊಲೆಯ ಮಾತ್ರ ಯಾಕೆ ಊಳಬೇಕು ಎಂಬುದರ ಬಗ್ಗೆ ಸ್ಪಷ್ಟವಾದ ಉತ್ತರ ಜನಗಳಿಂದ ಸಿಕ್ಕುವುದಿಲ್ಲ". (ಪು. ೪೬)

ಡಾ. ಬಿಳಿಮಲೆಯವರ ಕಂಬುಲದ ವಿವರಗಳಲ್ಲಿ ಇಲ್ಲದಿರುವ ಕೆಲವು ಮಹತ್ವದ ಸಂಗತಿಗಳು ಇಲ್ಲಿವೆ. ದಲಿತರ ಭೂತ ನರ್ತನ, ಹೊಲೆಯ ಉಳುವುದು ಇದಕ್ಕೆಲ್ಲ ಉತ್ತರ ಸ್ಪಷ್ಟವೇ ಇದೆ. ಕೃಷಿಯ ಪ್ರತಿಯೊಂದು ಘಟ್ಟದಲ್ಲಿ ದಲಿತರ ಭೂತ ನರ್ತನ ಕಡ್ಡಾಯವೆಂಬುದು ಆದಿಮ ಕೃಷಿ ಮಾಟವಲ್ಲದೆ ಇನ್ನೇನು? ಸಂತೋಷ ಚೊಕ್ಕಾಡಿ 'ಬೈಲಮಾರಿ' ಬಗ್ಗೆ ಬರೆಯುವುದು ಗಮನಿಸಿ–ಸುಗ್ಗಿ ಬಿತ್ತನೆಯಾದ ನಂತರ ಬೈಲಮಾರಿ ಬಿಡುವ ಕ್ರಮವಿದೆ. "ಹೆಚ್ಚಿನ ಜನರು ತೆಂಗಿನ ಗರಿಯನ್ನು ಹಿಡಿದು ಯಾವುದೋ

ಒಂದು ನಿರ್ಧರಿತ ಸ್ಥಳಕ್ಕೆ ನಡೆಯುತ್ತಾರೆ." ಆಗ ಅಜಿಲರು ಅಥವಾ ಮೇರರು ಎಂಬ ಅಸ್ಪೃಶ್ಯರು 'ಗುಳಿಗ' ಭೂತದ ವೇಷ ಹಾಕಿ ನರ್ತಿಸುತ್ತಾರೆ. ನಂತರ ಕೋಳಿ ಬಲಿ ನೀಡುತ್ತಾರೆ. (ಅದೇ)

"ಭತ್ತದ ಸೂಡಿಯಿಂದ ಬತ್ತವನ್ನು ಬೇರ್ಪಡಿಸುವ ಹೊತ್ತಿನಲ್ಲಿ 'ಪೊಲಿ ಬಾರೆ' ಅಥವಾ 'ಪೊಲಿ ಪೊಲಿಯೆ' ಎಂದು ಕೂಗುವ ಕ್ರಮವಿದೆ. (ಅದೇ) 'ಕದಿರು ಕಟ್ಟುವ' ಸಂದರ್ಭದಲ್ಲೂ 'ಪೊಲಿ ಪೊಲಿ' ಎಂದು ಕೂಗುತ್ತಾ ಆರಾಧಿಸುತ್ತಾರೆ. ಬತ್ತದ ಕದಿರನ್ನು ಆಗ ಮನೆಯ ಕಂಬ, ಮೇಜು ಕುರ್ಚಿ ಹೀಗೆ ಎಲ್ಲಕ್ಕೂ ಕಟ್ಟುತ್ತಾರೆ. 'ಬ್ರಾಹ್ಮಣರು ಉಳಬಾರದು' ಎಂಬುದು ಇಲ್ಲಿ ಗಾಢ ನಂಬಿಕೆ.

ಹೀಗೆ ಕೃಷಿ ಸಂಬಂಧಿ ಆಚರಣೆ ಮತ್ತು ನಂಬಿಕೆ ಸಾಕಷ್ಟಿವೆ (ಅದೇ ೪೭)

ಡಾ. ವಿವೇಕರೈ ಅವರ ವೀಕ್ಷಣೆ: "ತುಳುನಾಡಿಲ್ಲಿ ಈಗ ಇರುವ ಜನಾಂಗಗಳ ಪೈಕಿ ಹೊಲೆಯರು ಇಲ್ಲಿನ ಪ್ರಾಚೀನ ಜನಾಂಗದವರು, ಉಳಿದವರೆಲ್ಲಾ ಬೇರೆ ಪ್ರದೇಶಗಳಿಂದ ತುಳುನಾಡಿಗೆ ವಲಸೆ ಬಂದವರು ಎಂಬ ಅಭಿಪ್ರಾಯ ತುಳುನಾಡಿನ ಇತಿಹಾಸಕಾರರಲ್ಲಿ ಪ್ರಬಲವಾಗಿದೆ. ಕಾಡುಗಳಲ್ಲಿ ವಾಸ ಮಾಡುತ್ತಿರುವ ಹೊಲೆಯರ ಕೆಲವು ವರ್ಗಗಳಲ್ಲಿ ಪ್ರಾಚೀನ ಸಂಸ್ಕೃತಿಯ ಪಳೆಯುಳಿಕೆಗಳನ್ನು ಈಗಲೂ ಕಾಣಬಹುದು..... ಹೊಲೆಯರನ್ನು ರೂಢಿಯಲ್ಲಿ 'ಮೂಲೊಡಕಳು' (ಮೂಲದವರು) ಎನ್ನುವಲ್ಲಿ ಮೂಲನಿವಾಸಿಗಳು ಎನ್ನುವ ಧ್ವನಿಯೂ ಇದೆ". ("ತುಳು ಜನಪದ ಸಾಹಿತ್ಯ")

ಮುಂಬೈ ಇಲಾಖೆಗೆ ಸೇರಿದ ೧೮೮೩ 'ಗ್ಯಾಝೆಟೀಯರು' (ಭಾಷಾಂತರ ವೆಂಕಟ ರಂಗೊ ಕಟ್ಟಿ) ಹೀಗೆ ಹೇಳುತ್ತದೆ: "ಊರಿಗೆ ಹೊಲೆಯನಿಲ್ಲದಿದ್ದರೆ ಸಾಗುವುದಿಲ್ಲ. ಉತ್ತಮ ಕುಲದವರು ತಮ್ಮ ಹೆಣ ಸುಡುವಾಗ, ಹುಗಿದಾಗ ಹೊಲೆಯರಿಗೆ ಭೂಮಿಯ ತೆರಿಗೆ ಕೊಡುತ್ತಾರೆ. ಭೂಮೇರೆಗಳಲ್ಲಿ ಹೊಲೆಯರ ಸಾಕ್ಷಿಗೆ ಬಹಳ ಬೆಲೆ ಇರುತ್ತದೆ. ಹೊಲಗಳಲ್ಲಿ ರಾಶಿ ಆಗುವಾಗ ರೈತರು ಹೊಲೆಯರನ್ನು ಸಂತೋಷಪಡಿಸಲಿಕ್ಕೇ ಬೇಕು. ಗ್ರಾಮದೇವತೆ ಹಬ್ಬದಲ್ಲಿ ಹೊಲೆಯನೇ ಮುಖ್ಯ ಮನುಷ್ಯ. ಊರುತನದ ಕೆಲಸವು ಹೊಲೆಯನಿಲ್ಲದೇ ಸಾಗುವುದಿಲ್ಲ. ಈ ಯಾವತ್ತೂ ಕಾರಣಗಳಿಂದ ಆರಂಭದಲ್ಲಿ ಈ ಸೀಮೆಯಲ್ಲಿ ಭೂಮಿಯ ವೊಡೆಯರು ಹೊಲೆಯರೇ ಇದ್ದರೆಂದು ಕೆಲವರು ಊಹಿಸುತ್ತಾರೆ."

ದಲಿತರು ಹೇಳುವ ಜನಪದ ಕತೆಯ ಪ್ರಕಾರ ಆದಿಜಾಂಬವ ಮುನಿ (ಕೆಲವು ಕಡೆ ಹರಳಯ್ಯನೆಂದೆನ್ನುತ್ತಾರೆ) ತನ್ನ ಏಳು ಮಕ್ಕಳನ್ನು ಬಲಿಕೊಟ್ಟ ರಕ್ತದಿಂದ ಅಳ್ಳಕವಾಗಿದ್ದ ಭೂಮಿ ಹೆಪ್ಪುಗಟ್ಟಿ, ಉತ್ತು, ಬಿತ್ತಲು, ಅನುಕೂಲವಾಯಿತು.

ಈಗ ಬಯಲು ಸೀಮೆಯಲ್ಲಿ ಉಳಿದಿರುವ ಕೆಲವು ಆಚರಣೆಗಳನ್ನು ನೋಡಬೇಕು.

ಎಂ.ಜಿ. ಈಶ್ವರಪ್ಪ ಬರೆಯುತ್ತಾರೆ–

ಚಿತ್ರದುರ್ಗ ಜಿಲ್ಲೆಯಲ್ಲಿ ಮಾದಿಗರಿಗೆ ಮಣೆಗಾರರು ಎನ್ನುತ್ತಾರೆ. ಸುಗ್ಗಿ ಮಾಡುವಾಗ ಮೇಟಿಗೆ ರಾಶಿಯನ್ನು ಪೇರಿಸಿದ ಕೂಡಲೇ ಮಾದಿಗನು ಮುಂಕಟ್ಟಿಗೂ ರಾಶಿಗೂ ಮಂಡಲ ಬರೆಯುವನು. ಸೂರ್ಯ ಚಂದ್ರರನ್ನು ಬಿಡಿಸುವನು. ತಲೆಗೆ ಟವಲ್ಲು ಸುತ್ತಿಕೊಂಡು ಹುಲ್ಲು ಮತ್ತು ಕಾಳಿನ ಪುಟ್ಟಿಯನ್ನು ಹಿಡಿದುಕೊಂಡು 'ಹುಲಿಗ್ಯೊ' ಎಂದು ಕೂಗುತ್ತಾ ರಾಶಿಯ ಮತ್ತು ಕಣದ ಸುತ್ತ ಮೂರು ಸುತ್ತು ಬರುವನು. ಈ ಸಂದರ್ಭದಲ್ಲಿ ಎಲ್ಲರೂ ನಿಶ್ಯಬ್ದವಾಗಿರುತ್ತಾರೆ. ಇದಕ್ಕೆ 'ಶಾಂತಿ ಮಾಡುವುದು' ಎಂದು ಹೆಸರು. ಇದು ಆಗದೇ ರಾಶಿಯನ್ನು ಚೀಲಕ್ಕೆ ತುಂಬುವ ಹಾಗಿಲ್ಲ. ಕಣದಲ್ಲಿರುವ ಮುಂಕಟ್ಟು, ಮರಿರಾಸಿ, ಬೆಳೆ ರಾಸಿಗಳ ಹಕ್ಕುದಾರನು ಮಾದಿಗ. ರಾಸಿ ಕಾಳನ್ನು ತುಂಬಿದ ನಂತರ ನೆಲದ ಮೇಲೆ ಉಳಿಯುವ ಕಾಳನ್ನು ಹಕ್ಕಿನಿಂದ ಮಾದಿಗನೇ ಪಡೆಯುತ್ತಾನೆ."

ಕಣದ ರಾಸಿಯ ಪೂಜೆಯಲ್ಲಿರುವ ವಿಶ್ವ ದೃಷ್ಟಿ ಭೌತವಾದಿ ಸ್ವರೂಪದ್ದಾಗಿದೆ. 'ಹುಲಿಗ್ಯೊ' ಎಂಬ ಪದ 'ಪೊಲಿ' ಕರೆಯುವುದಲ್ಲದೆ ಬೇರಲ್ಲ. ರಾಸಿಗೇ ಒಡೆಯನಾಗಿದ್ದ ದಲಿತ ಈಗ ರಾಸಿ ತುಂಬಿದ ಮೇಲೆ ಉಳಿಯುವ ಪುಡಿಗಾಳಿಗೆ ಹಕ್ಕುದಾರನಾಗುವ ದುರಂತ ಬಂದಿತು.

ಉತ್ತರ ಕರ್ನಾಟಕದ ಒಕ್ಕಲಿಗರು ಜೋಳದ ಸುಗ್ಗಿಯಲ್ಲಿ ಬೂದುಗವನ್ನು ಮಾಡುತ್ತಾರೆ. ತೆನೆ ತುಳಿಸುವಾಗ ಹಂತಿಗೆ ಹೂಡಿರುವ ಕಡೆಯ ಎತ್ತಿನ ಶಗಣಿಯಲ್ಲಿ 'ಮದ' (ತೂರದೆ ಇರುವ, ಸುಂಕಸಹಿತ ಕಾಳು) ಸೇರಿಸಿ ಶಂಖದಂತೆ ಮಾಡಿ ತುದಿಗೆ ಎತ್ತಿನ ಬಾಲದ ಕೂದಲು ಸಿಕ್ಕಿಸಿ ಕಣದ ಸುತ್ತ ಒಟ್ಟಿರುವ ಕಣಿಕೆಯ ಸಿವುಡಗಳ ಮೇಲೆ ಇಡುತ್ತಾರೆ. ಇದು 'ಬೂದುಗ'. ("ಬೂದುಗ ಮತ್ತು ಹೊನ್ನುಗ್ಗಿ": ಎಂ.ಎಂ. ಕಲಬುರ್ಗಿ. ಮಾರ್ಗ ೨ ಪು. ೪೧೩) ಇದಕ್ಕೆ ಕೆಲವು ಕಡೆ "ಹುಲಿಗ" ಎಂದೂ ಹೇಳುತ್ತಾರೆ. ಹಂತಿ ಮುಗಿದ ಬಳಿಕ ರಾಶಿಯ ಜತೆ ಬೂದುಗವನ್ನು ಮನೆಗೆ ತಂದು ಧಾನ್ಯದ ಜೊತೆ ಹಗೇವಿನಲ್ಲಿಡುತ್ತಾರೆ. ಇವರ ಪ್ರಾಚೀನ ರೂಪ ಬೂತುಗ, ಇದರರ್ಥ ಬೂತುಗಳ ಒಡನಾಡಿ ಅಥವಾ ಭೂತ. ಬ್ರಹ್ಮಶಿವ ಹೇಳುವ ಬೆನಕನೇ ಈ ಬೂದುಗ. ಈ ಬೆನಕನಿಗೆ, ಭುತ ಸಮೂಹಕ್ಕೆ ಮತ್ತು ಮನೆದೇವರಿಗೆ ಸರುಗ (ಚರಗ) ಅರ್ಪಿಸಿದರೆ ಬೆಳೆ ಸಮೃದ್ಧವಾಗುತ್ತದೆಂಬ ಅಂಶ 'ಸಮಯಪರೀಕ್ಷೆ'ಯಲ್ಲಿದೆ. ಬೆನಕನೂ ಭೂತವೇ (ಅದೇ) ಹಲವಾರು ವಿದ್ವಾಂಸರು ಇದನ್ನು 'ತಾಮಸ ದೇವರೆಂದು' ಹೇಳುವುದು ವಿಚಿತ್ರ. "ಇದು ಕಾಯುವ ದೈವವಲ್ಲ ಕಾಡುವ ದೈವ" ಎಂದು ಹೇಗೆ ಕಲ್ಪಿಸಿದರೊ ತಿಳಿಯದು. ಇದರ ನಿಷ್ಪತ್ತಿಯನ್ನು, ಹೊಲ್ಲೆಗ>ಹುಲ್ಲೆಗ>ಹುಲಿಗ (ಕೆಟ್ಟ ವ್ಯಕ್ತಿ) ಎಂದು ಹೇಳುವುದು ಕೂಡ ಸೂಕ್ತವೆನಿಸದು. 'ಹುಲಿಗ್ಯೊ' 'ಪೊಲಿ' ಯೇ ಭೂತುಗ (ಹುಲಿಗ). 'ಪೊಲಿ' ಆರಾಧನೆಯ ಉತ್ತರ ಕರ್ನಾಟಕದ ರೂಪ ಇದು. ಅವೈದಿಕರ ಗಣಪತಿ ದೈವವಾಗಿ ವೈದಿಕ ಸಂಸ್ಕೃತಿಯನ್ನು ಸೇರಿದ ವಿವರವಾದ ಚರ್ಚೆ ದೇ.ಪ್ರ.ಚ.ರ 'ಲೋಕಾಯತ' ದಲ್ಲಿದೆ. 'ಗಣಪತಿ' ದಲಿತರ ದೈವ ಎಂಬುದೇ ಅಲ್ಲಿ ಧ್ವನಿತವಾಗುವುದು. ಮಾತಂಗ (ಆನೆ) ಮುಖದ ಗಣಪತಿ (ಟೊಟೆಂ) 'ಮಾದಿಗ' ಸಂಸ್ಕೃತಿಗೆ ಸೇರಿದ್ದು.

ಭೂತ ಪಂಥವಂತೂ ಹೇಳಿ ಕೇಳಿ ದಲಿತರದ್ದು. ಇದು ಉತ್ತರ ಕರ್ನಾಟಕದಲ್ಲಿ ಪಳೆಯುಳಿಕೆಯಂತುಳಿಯಿತು. 'ಪೊಲಿ' ಪರಿಕಲ್ಪನೆ ತನ್ನ ಸಾಂಸ್ಕೃತಿಕ ಪರಾಕಾಷ್ಠೆಯನ್ನು ಮೆರೆಯುವುದು ಕರಾವಳಿ ಪ್ರದೇಶದ ಬಲೀಂದ್ರನ ಹಬ್ಬದಲ್ಲಿ. ಈ ಹಬ್ಬದ ಸೂಕ್ಷ್ಮ ಆಶಯಗಳು 'ಬಲಿ'ಯೆ 'ಪೊಲಿ' ಎಂಬುದನ್ನು ಧ್ವನಿಸುತ್ತವೆ.

ದೀಪಾವಳಿ ಸಂದರ್ಭದಲ್ಲಿ ಕರಾವಳಿಯಲ್ಲಿ ಮಾಡುವ ಬಲೀಂದ್ರನ ಪೂಜೆ ಕೃಷಿ ಸಂಸ್ಕೃತಿಗೆ ಸಂಬಂಧಿಸಿದ್ದೆಂದೂ, ಅದನ್ನು ವೈದಿಕರ 'ಯಜಮಾನ್ಯ ರಾಜ್ಯ' ತನ್ನ ಪ್ರಸ್ತುತತೆಗೆ ಬಳಸಿಕೊಳ್ಳಲು ಯತ್ನಿಸಿದರೂ, "ಪ್ರಾದೇಶಿಕ ಜೀವನದ ವಾಸ್ತವ ಈ ನಿರೂಪಣೆಗೆ ಸಂಪೂರ್ಣ ದಕ್ಕದ ರೀತಿಯಲ್ಲಿ" ಇರುವುದನ್ನು ತುಂಬ ಚೆನ್ನಾಗಿ ನಿರೂಪಿಸುತ್ತಾರೆ, ರಾಜಾರಾಮ ಹೆಗಡೆ. ("ಬಲೀಂದ್ರ–ರಾಜ್ಯದಿಂದ ಗಡೀಪಾರಿನವರೆಗೆ"–ಸಾಹಿತ್ಯ ಸಂವಾದ ೫೧) ವೈದಿಕ ಹೆಜಿಮನಿಕ್ ಸಂಸ್ಕೃತಿಯ ದಾಳಿಯ ಸ್ವರೂಪವನ್ನೂ, ಅದು ಯಜಮಾನ್ಯ ಸ್ಥಾಪಿಸಲು ಮಾಡುವ ಯತ್ನವನ್ನೂ ಅದನ್ನು ಪ್ರತಿರೋಧಿಸುವ ಸ್ಥಳೀಯ ಸ್ವಭಾವವನ್ನು ಈ ಲೇಖನ ಸಮರ್ಥವಾಗಿ ವಿವರಿಸಿದೆ.

ಕೃಷಿ ಸಂಸ್ಕೃತಿಯಲ್ಲಿ ಬಲಿ ಖಳನಾಯಕನಲ್ಲ. ಪ್ರತಿಯಾಗಿ ದೇವೇಂದ್ರ, ವಿಷ್ಣು ಖಳನಾಯಕರಾಗುತ್ತಾರೆ. ಬಲಿಗೆ 'ಬಲ್ಲಾಳ ಬಲೀಂದ್ರ', 'ಬಲಿಯೇಂದ್ರರಾಯ', 'ಬಲೀಂದ್ರಜ್ಜ', ಎಂದು ಬ್ರಾಹ್ಮಣೇತರರು ಮತ್ತು ಗೊಂಡರು ಹೇಳುತ್ತಾರೆ. ಬಲೀಂದ್ರನನ್ನು ಕರೆಯುವುದು, ಪೂಜಿಸುವುದು, ಕಳಿಸುವುದು ಇವೇ ಹಬ್ಬದ ಕ್ರಿಯೆಗಳು. ಕರೆಯುವುದಕ್ಕೆ 'ಬೂರೆಹಬ್ಬ' ಎನ್ನುವರು. ಇಲ್ಲಿ ನರಕಾಸುರ

‘ಭೂಮಿಯ ಮಗ’. ಬೂರೆ ಹಬ್ಬದ ಹಿಂದಿನ ದಿನ ‘ಬೂರಜ್ಜಿ’ಯನ್ನು ಕೂರಿಸುವದು ಮುಖ್ಯ. ಇದು ಧಾನ್ಯ ತುಂಬಿದ ಕಲಶ.

ಪಾಡ್ದನದಲ್ಲಿ ಬಲೀಂದ್ರ ‘ಭೂಮಿಪುತ್ರ’, ಅಂದರೆ ಬೂರಜ್ಜಿಯ ಮಗ. ಇದು ಗೌರಿ–ಗಣೇಶ, ಗೌರಿ–ಜೋಕುಮಾರರೆಂಬ ತಾಯಿ–ಮಗ ಕೃಷಿ ಸಂಸ್ಕೃತಿ ಸಂಬಂಧದಂತೇ ಇದೆ. ಬಲೀಂದ್ರ ಕೂಡ ಕಲಶ, ತೆಂಗಿನ ಕಾಯಿ, ಅಕ್ಕಿ, ಸೌತೆಕಾಯಿಗಳ ಮೇಲೆ ಜೇಡಿಮಣ್ಣಿನಿಂದ ಅಲಂಕರಿಸಿದ ಪ್ರತಿಮೆ. ಆತ “ಅಡಿಕೆ ಗೊನೆ, ತೆಂಗಿನ ಕಾಯಿ, ಹಾಲು ತುಂಬಿದ ಭತ್ತದ ತೆನೆ, ಕೇವಿ (ಭತ್ತದ ಸಸಿ)ಗಳಿಂದ ಇಳಿದು ಅಥವಾ ಹರಿದು ಬರುತ್ತಾನೆ. ಇನ್ನೂ ಕೆಲ ಹಾಡುಗಳಲ್ಲಿ ಆತನು ಭೂಮಿಯ ಒಳಗಿನಿಂದ ಏರಿ ಬರುವ, ಉಕ್ಕಿ ಬರುವ, ಚಿತ್ರಣ ಬರುತ್ತದೆ.” ಇವನ ರಾಜ್ಯ ಕೃಷಿ, ಪಶು ಸಮೃದ್ಧಿಯದು. ಈ ರಾಜ್ಯದಲ್ಲಿ ಬಡತನ ಎಂಬುದೇ ಇಲ್ಲ. ದನ ಕಟ್ಟದೇ ಕರೆಯುವುದು, ಬಿತ್ತದೇ ಬೆಳೆಯುವುದು. ಈತ ಮಾತೃದೈವ, ಪರಿವಾರದೊಂದಿಗೆ ಪೂಜೆಗೊಳ್ಳುತ್ತಾನೆ.

ಮರುದಿನ ಆತ ‘ಆನೆ ಕುದುರೆ ಸಾಲಲ್ಲಿ ದೀವಟಿಗೆಯ ಬೆಳಕಿನಲ್ಲಿ ಸಾಗಿ ಹೋಗುವ ಕಲ್ಪನೆ ಬರುತ್ತದೆ.’ ‘ಈತ ಮನುಷ್ಯರನ್ನು ನೋಡಲಿಕ್ಕೆ ಬಂದು, ತನ್ನ ರಾಜ್ಯ ಸುಖವಾಗಿದೆ ಎಂದು ಸಂತೋಷಿಸಿ ತನ್ನ ರಾಜ್ಯಕ್ಕೆ ಹೋಗುತ್ತಾನೆ’. ಮುಂದೆ ಒಂದು ವರ್ಷಕ್ಕೆ ಮತ್ತೆ ಬರುತ್ತಾನೆ. ಕೆಲವರು ಈತನನ್ನು ಭತ್ತದ ಬಣವೆಯಲ್ಲಿ ಹುಗಿಯುತ್ತಾರೆ.

ಆತ ಬರುವಾಗ ಕಲ್ಲು ಮಳೆ ಸುರಿಯುತ್ತವೆ. ಹುಲ್ಲು ಗಡ್ಡೆ ಚಿಗುರುತ್ತವೆ. ಬರಡು ಗೊಡ್ಡು ಹಯನವಾಗುತ್ತದೆ. ಈತ ಬಲು ತಗಡುಗಾರ. ಇದು ಬಯಲು ಸೀಮೆಯ ಜೋಕುಮಾರನ ಆರಾಧನೆಯನ್ನು ಸಂಪೂರ್ಣ ಹೋಲುತ್ತದೆ. (‘ಹಬ್ಬಗಳು’– ಎಸ್.ಎಸ್.ಹಿ) ಕೇರಳದ ಓಣಂ ಸಂದರ್ಭದ ಮಹಾಬಲಿ (ಮಾವೇಲಿ) ಪೂಜೆ ಬಲೀಂದ್ರ ಪೂಜೆಯೇ.

ಒಂದು ಕತೆಯ ಪ್ರಕಾರ ಬಲಿಯೇಂದ್ರ ತೆಂಕಣ ಕಡಲಿನಿಂದ ಹಿಮಾಲಯ ದವರೆಗೆ ಆಳುತ್ತಿದ್ದ. ಇವನ ಹೋಮ ನೇಮಾದಿಗಳನ್ನು ನೋಡಿ ದೇವತೆಗಳು ಹೊಟ್ಟೆಕಿಚ್ಚು ಪಟ್ಟು ‘ಕಲಿಯನ್ನು’ ಕಳಿಸಿ ‘ಧರ್ಮ ನೀತಿ’ ಹಾಳು ಮಾಡಿಸಿದರು. ಇಂಥ ದೇವತೆಗಳ ವಿರುದ್ಧ ಬಲಿ ಯುದ್ಧ ಹೂಡಿದ. ನಾರಾಯಣ “ಮೋಸದಿಂದ” ಬಲಿಯನ್ನು ಸೋಲಿಸಿದ. ಆದರೆ ವರ್ಷಕ್ಕೊಮ್ಮೆ ಬಂದು ತನ್ನ ಜನರ ಬದುಕು–ಭಾಗ್ಯ ನೋಡಿ ಹೋಗಬೇಕೆಂದು ನಿರ್ದೇಶಿಸಿದ. ಇದಿಷ್ಟು ಹೆಗಡೆಯವರ ಲೇಖನದ ಮುಖ್ಯ ಅಂಶಗಳು.

‘ಬಲಿ’ ಪಿತೃ ಸಂಸ್ಕೃತಿಯ ಪದದಂತೆ ಕೇಳುತ್ತಿದ್ದರೂ ಕಲಶ ರೂಪಿಯಾಗಿ ಆರಾಧನೆಗೊಳ್ಳುವುದು ಅದು ಮೊದಲು ಮಾತೃದೈವವೆಂಬುದನ್ನು ಸೂಚಿಸುವುದು. ಅಥವಾ ಜೋಕುಮಾರ, ಕಾಮ, ಗಣಪತಿಯಂತೆ ಕೃಷಿಗೆ ಸಂಬಂಧಿಸಿದ ಪುರುಷರೂಪಿ ಸ್ಥಳೀಯ ದೈವವಾಗಿದೆ. ತಾಯಿ ಇಲ್ಲದೇ ಈತ ಬರಲಾರ ಎಂಬ ಮಾತೇ ಇದೆ. ‘ದೊರೆ’ ಎಂದು ಹೇಳಿರುವುದೂ ಆತನ ಆಶಯದ ಅತಿಶಯತೆಯನ್ನು ನಿರೂಪಿಸಲು. ಆದರೆ ಕೊನೆಗೆ ಕೋಣಾಸುರನಂತೆ ಬಲಿ ಆಗುವನು. ಅವನ ಹೆಸರೇ ‘ಬಲಿ’ ಅಲ್ಲವೇ?

ಜಗತ್ ಸೃಷ್ಟಿಗೆ ಕಾರಣವಾದ ‘ರತಿ’ (ಸಂಭೋಗ)ಯನ್ನು ಸೂಚಿಸುವ, ‘ಪೊಲಿ’ ದ್ರಾವಿಡ ಸಂಸ್ಕೃತಿಯ ಅಥವಾ ದಲಿತ ಸಂಸ್ಕೃತಿಯ ಪ್ರಖ್ಯಾತ ಪರಿಕಲ್ಪನೆ. ಅದರ ಅರ್ಥ, ಆಶಯಗಳು ಭೂಮವಾಗಿವೆ.

“ಪೊಲಿ ಪೊಲಿ ಪೊಲಿ ಹೆಚ್ಚಾಗು. ಪಂಚಪಾಂಡವರ ಪೊಲಿ, ನಿತ್ಯ ದೇವರ ಪೊಲಿ ಕಣಜ ಕಟ್ಟಬೇಕು. ಐಸಿರಿ ನೋಡಬೇಕು, ಆ ಅಂಗಳದ ಪೊಲಿ, ಈ ಅಂಗಳದ ಪೊಲಿ ಅರವತ್ತಾರು

ಅಂಗಳದಷ್ಟು ಪೊಲಿ, ಎಪ್ಪತ್ತೇಳು ಕೋಟಿ ಪೊಲಿ, ತಾಯ ಬೆನ್ನಲ್ಲೆ ಮಕ್ಕಳು ಬರುವ ಹಾಗೆ ಬರಬೇಕು, ಹಸುವಿನ ಬೆನ್ನಲ್ಲೆ ಕರು ಬರುವಂತೆ ಬರಬೇಕು. ಹುಲಿಯ ಹಿಂದೆ ಹುಲಿಯ ಮರಿಗಳು ಬರುವಂತೆ ಬರಬೇಕು. ಹೊಲತಿ ಹೆಣ್ಣಿಗೆ ಮೊಲೆ ಬರುವಂತೆ ಬರಬೇಕು. ಹಾಲು ಉಕ್ಕಿದಂತೆ ಉಕ್ಕಬೇಕು." (ಡಾ. ವಿವೇಕರೈ) ಇದೆಲ್ಲವೂ 'ಬಲೀಂದ್ರ'ನೇ. ವಾಮನಾವತಾರದ ವಿಷ್ಣು ರಾಕ್ಷಸನಾದ ಬಲಿಯನ್ನು ಮೋಸದಿಂದ ಪಾತಾಳಕ್ಕೆ ತುಳಿಯುವುದು ದ್ರಾವಿಡ ಕೃಷಿಕರನ್ನು ವೈದಿಕರು ತುಳಿದು ಕೇರಳಕ್ಕೆ ಅಟ್ಟಿದುದರ ಅರ್ಥವೇ. ಬಲೀಂದ್ರನ ಪೂಜೆಯ ನಂತರ ಮನೆ ಮನೆಗೆ ಹೋಗಿ ದೀಪ ಕೊಡುವ ಸಂದರ್ಭದಲ್ಲಿ ದಲಿತರು ಹೇಳುವ ಹಾಡುಗಳಲ್ಲಿ (ಅಂಟಿಗೆ ಪಂಟಿಗೆ) ದೀಪವನ್ನು ಹೆಣ್ಣೆಂದು ಭಾವಿಸಿರುವ ಮಹತ್ವದ ಆಶಯವಿದೆ. ಪುರುಷ ಪ್ರಧಾನ ವೈದಿಕದಲ್ಲಿ ಅಗ್ನಿ ಪುರುಷದೈವ. ನಮ್ಮಲ್ಲಿ ಅದು ಸ್ತ್ರೀ. ನೋಡಿ–

"ಮಣ್ಣಲ್ಲಿ ಹುಟ್ಟೋಳೆ ಮಣ್ಣಲ್ಲಿ ಬೆಳೆಯೋಳೆ

ಮಣ್ಣಲ್ಲಿ ಕಣ್ಣ ಬಿಡುವೋಳೆ । ಜಗಜ್ಯೋತಿ

ಚೊಕ್ಕದಿಂದುರಿಯೆ ನಮಗಾಗಿ."

(ಪೊಲಿ) ಬಲಿ ಸಂಸ್ಕೃತಿ ತುಂಬ ಪ್ರಾಚೀನವಾದುದೆಂದು ಹೇಳಬೇಕಿಲ್ಲ. ಅದು ಬುಡಕಟ್ಟು ಕಾಲದ ಕೃಷಿ ಜೀವನದ ಜೀವಧಾತು. ಋಗ್ವೇದದಲ್ಲಿ 'ಬಲಿ'ಗೆ 'ಅಧಿಕ ಉತ್ಪನ್ನ ಸಂಗ್ರಹಿಸು' ಎಂಬರ್ಥವಿದೆ. ಇದು 'ಪೊಲಿ'ಯ ಅರ್ಥವೇ ಅಲ್ಲವೇ? ಕಾಲಾಂತರದಲ್ಲಿ, ವರ್ಗ–ವರ್ಣ ಶೋಷಣೆ ಪ್ರಾರಂಭವಾದ ನಂತರ ರಾಜ ಅಥವಾ ದೇವರಿಗೆ ಕೊಡುವ ಕಾಣಿಕೆ ಎಂಬರ್ಥ ಪ್ರಾಪ್ತವಾಯಿತು. ವೇದೋತ್ತರ ಕಾಲದಲ್ಲಿ ಅಧಿಕ ಉತ್ಪನ್ನವನ್ನು ಸಂಗ್ರಹಿಸುವ ಅಧಿಕಾರಿಗೆ 'ಬಲಿಸಾಧಕ' ಎಂಬ ಹೆಸರಿತ್ತು. (ಶರ್ಮಾ) ಬ್ರಾಹ್ಮಣರ ಪಿಂಡದಾನಕ್ಕೂ ಬಲಿಗೂ ಸಂಬಂಧವಿದೆ.

ದ್ರಾವಿಡ ಮತ್ತು ಮುಂಡಾ ಭಾಷೆಯ ಪದಗಳು ಋಗ್ವೇದದಲ್ಲಿ ಸಾಕಷ್ಟಿರುವುದರಿಂದ ದ್ರಾವಿಡ ಸಂಸ್ಕೃತಿಯ ಪ್ರಖ್ಯಾತ 'ಪೊಲಿ' ಅಲ್ಲಿ 'ಬಲಿ'ಯಾಗಿ ಸೇರಿರಬೇಕು.

'ಬಲಿ' ಕೊಲೆಯಲ್ಲ, ಸಾವಲ್ಲ. ಕುಲಸಮೂಹ ಅಥವಾ ಹಲವಾರು ಕುಲಗಳ ಬುಡಕಟ್ಟು, ಅಮ್ಮನಿಗೆ, ಫಲಸಮೃದ್ಧಿಗಾಗಿ ನೀಡುವ ಪುರುಷ ಬಲಿ–ಮೊದಲು ಮಾನವ, ನಂತರ ಕೋಣ, ಹೋತ, ಹುಂಜ, ಟಗರು. ಇದು ಅಮ್ಮನ ಶಕ್ತಿ ಸಾಮಾರ್ಥ್ಯವನ್ನು ಉದ್ಬುದ್ಧಗೊಳಿಸಲು, ತೀವ್ರಗೊಳಿಸಲು, ಹೆಚ್ಚಿಸಲು ಅಗತ್ಯವಿತ್ತು. ಅಂಥ ಶಕ್ತಿಯನ್ನು ಪಡೆದ ನಂತರವಷ್ಟೇ ಅಮ್ಮ ಇಡಿ ಗ್ರಾಮದ, ಹೊಲಗಳ, ಬೆಳೆ, ದನಗಳ, ರಕ್ಷಣೆಯನ್ನು ಸಮರ್ಥವಾಗಿ ಮಾಡಬಲ್ಲವಳಾಗುತ್ತಿದ್ದಳು. ಪುರುಷ ಸಾಮರ್ಥ್ಯವನ್ನು ತಾಯಿಗೆ ಅರ್ಪಿಸುವ ಕೋಣ ಬಲಿ ಅಮ್ಮನ ಹಬ್ಬದ ಅತ್ಯುನ್ನತ ಮತ್ತು ಅಂತಿಮ ಘಟ್ಟ. ಇದನ್ನು ಪೂರೈಸುವವನೇ 'ಪೊಲೆಯ'.

ಎಲ್ಲ ಪ್ರಾಣಿಗಳನ್ನು ಬಿಟ್ಟು ಕೋಣವನ್ನೇ ಏಕೆ ಆಯ್ಕೆ ಮಾಡಲಾಯಿತು? ಏಕೆಂದರೆ, ಕೋಣಗಳಿಂದ ಬೇಸಾಯ ಮಾಡುತ್ತಿದ್ದ (ಇನ್ನೂ ಹೋರಿ ಎತ್ತುಗಳು ಕೃಷಿಗೆ ಬಳಕೆಯಾಗುವ ಮೊದಲು) ಮಾತೃ ಮೂಲೀಯ ದಲಿತರು ಕೋಣ ಬಲಿಯಲ್ಲದ ಬೇರೇನು ನೀಡಿಯಾರು? ಕಂಬುಲದಲ್ಲಿ ಕೋಣಗಳಾಗುವ ದಲಿತರು ಮಾಡುವ 'ಪೊಲಿ' ವಿಧಿಯಾಚರಣೆ ಆದಿಮ ಸಂಸ್ಕೃತಿಯನ್ನು ಇನ್ನೂ ಉಳಿಸಿದೆ. ಈ ಆದಿಮ ಪದ್ಧತಿ ಭಾರತದೇಶದಲ್ಲಿ ಪಡೆದಿರುವ ಆಕೃತಿ ನೂರಾರು. ವೇದೋತ್ತರ ಕಾಲದ ವೈದಿಕರಲ್ಲಿ 'ಪುರುಷಮೇಧ'ದ ರೂಪ, ಪುರಾಣ ಕಾಲದಲ್ಲಿ ಮಹಿಷಾಸುರ ಸಂಹಾರಕ್ಕೆ, ಗಂಡು ದೇವರುಗಳ ಒಂದೊಂದು ಬಗೆಯ ಶಕ್ತಿಯನ್ನು ಪಡೆದ 'ದುರ್ಗೆ' (ಕಾಳಿ)ಯ ರೂಪ ಮುಂತಾದವು.

ಪೊಲಿಯ ಬಗ್ಗೆ ಹೇಳಿದಷ್ಟೂ ಕಡಿಮೆ. (ವಿವರಗಳಿಗೆ ನನ್ನ "ಜಾತ್ರೆಗಳು" ನೋಡಿ) ಪೊಲಿಯಿಂದಲೇ 'ಹೊಲೆಯ' ಹುಟ್ಟಿದೆ ಎಂಬುದು ನಮ್ಮ ಕೇಂದ್ರವಾದ . ಪೊಲಿಯಿಂದಲೇ, 'ಪಳ್ಳಿ' 'ಹಳ್ಳಿ' ಪದ ಹುಟ್ಟಿದೆಯೋ ನೋಡಬೇಕು.

ಭೂಮಾಲಿಕತ್ವ ಬೇರೆ, ಭೂಮಿಯ ಜತೆ ನಿಕಟ ಸಂಬಂಧವಿಟ್ಟುಕೊಂಡು ರಕ್ತ, ಬೆವರು ಸುರಿಯುವದು ಬೇರೆ, ರೈತರು ಬೇರೆ, ನೆಲವನ್ನು, ಭೂಮಿಯನ್ನಾಗಿ ಪರಿವರ್ತಿಸಿದ ಕೃಷಿಕರು ಬೇರೆ. ಚರಿತ್ರೆಯಲ್ಲಿ ಈ ಕೃಷಿಕರೇ ರೈತರಾಗುಳಿಯಲಿಲ್ಲ. ರೈತರು ಭೂಮಾಲಿಕ ರಾಗುಳಿಯಲಿಲ್ಲ. ಮೊಟ್ಟ ಮೊದಲು ಅಸಂಸ್ಕೃತ ನೆಲವನ್ನು ತಮ್ಮ ಪರಿಶ್ರಮ. ಮಾಟ, ಶ್ರದ್ಧೆ, ಜಾಣ್ಮೆ, ತಂತ್ರಗಾರಿಕೆಗಳಿಂದ ಹೊಲವನ್ನಾಗಿ 'ಹದ'ಗೊಳಿಸಿದವರು ಹೊಲಯರು, ಮಾದಿಗರು. ಕಾಲಾಂತರದಲ್ಲಿ ರೈತರಾದವರು ಒಕ್ಕಲಿಗರು (ಗೌಡರು), ಲಿಂಗಾಯತರು, ಕುರುಬರು, ಬಂಟರು, ಬೇಡರು ಮುಂತಾದವರು. ಇವರೆಲ್ಲ ದ್ರಾವಿಡ ಪಶುಪಾಲಕ 'ಹಟ್ಟಿ ಸಂಸ್ಕೃತಿ ಜನ'. ಕೊನೆಗೆ ಭೂಮಾಲಿಕರಾದವರು ಅರಸರು, ಸಾಮಂತರು, ಬ್ರಾಹ್ಮಣರು.

ಕೃಷಿಕರಾಗಿದ್ದ ಹೊಲೆಯ–ಮಾದಿಗರ ಮೇಲೆ ಬ್ರಾಹ್ಮಣನೆಂಬ ಒಡೆಯ ಬಂದು ಕೂತಾಗ ಆದ ಪರಿಣಾಮವೇನು? ಶತಮಾನಗಳಿಂದ ಯಾವ ಒಡೆಯನೂ ಇಲ್ಲದೆ ಸಂಪೂರ್ಣ ಸ್ವತಂತ್ರರಾಗಿದ್ದ ಈ ಭೂಮಾಲಿಕರು (ಆಧುನಿಕ ಅರ್ಥದ ಭೂಮಾಲಿಕರಲ್ಲ. ಆಗ ಭೂಮಿಯ ಮೇಲೆ ಸಾಮೂಹಿಕ ಒಡೆತನವಿರುತ್ತಿತ್ತು) ಈಗ ವಿನಾಕಾರಣ ಯಾರೊ ಅಪರಿಚಿತರಿಗೆ ಗುಲಾಮರಾಗಬೇಕಾಯಿತು. ತಮ್ಮ ಆಸ್ತಿಯಾದ ಜಮೀನನ್ನು ಕಳಕೊಂಡು, ಅದರಲ್ಲೇ ಕೂಲಿಕಾರರಾಗಬೇಕಾಯಿತು. ಆಗ ಘರ್ಷಣೆ ಅನಿವಾರ್ಯ. 'ರಾಜ್ಯ' ಬಲಾತ್ಕಾರದಿಂದ ಒಡೆತನವನ್ನು ಕಿತ್ತುಕೊಳ್ಳುವಂತಿರಲಿಲ್ಲ, ಎಂದೂ ಹೇಳಬೇಕಾಗುತ್ತದೆ. ಅಂಥ ಅನಿವಾರ್ಯತೆ ಒದಗಿದಲ್ಲಿ ಅದನ್ನೂ (ಸೈನ್ಯದ ಮೂಲಕ) ಮಾಡಿತು. ಅದು ತನ್ನ ಪಾಲನ್ನು ಕರ, ಕಂದಾಯ, ಬಿಟ್ಟಿ, ಸುಂಕಗಳ ರೂಪದಲ್ಲಿ ಪಡೆಯುತ್ತಿತ್ತು. ಆದರೆ ಈಗ ಬ್ರಾಹ್ಮಣರು (ಅಗ್ರಹಾರ) ಇಡಿ ಭೂಮಿಗೆ ತಾವೇ ಹಕ್ಕುದಾರರು ಎಂದು ಪ್ರವೇಶಿಸಿದಾಗ ತೊಂದರೆ ಎದುರಿಸಿದರು. ಅವರ ವೈದಿಕ ಧರ್ಮ, ಶಾಸ್ತ್ರ, ಪುರಾಣಗಳೆಲ್ಲ ಅಸ್ತ್ರಗಳಾದವು. ಇದೇ "ನಾನ್ ಕೊಯಿರ್‌ಸಿವ್ ವೆಪನ್". ಪೂಜೆ ಪುನಸ್ಕಾರಗಳ ಒಪ್ಪಂದಕ್ಕೆ ಇಳಿದರು ಇವರು. ಸ್ಥಳೀಯರ ದೈವಗಳನ್ನು (ಭೂತ) (ಅಮ್ಮ) ಆರಾಧಿಸಿದರು. ಅವರ ಜ್ಞಾನ, ವಿಜ್ಞಾನವನ್ನು ಲಪಟಾಯಿಸಿದರು. ದಲಿತರನ್ನು ಭೂಮಿಯಿಂದ ಸಂಪೂರ್ಣ ಹೊರ ಹಾಕದೆ ಬ್ರಾಹ್ಮಣರು ಬದುಕುವಂತಿರಲಿಲ್ಲ. ಅದಕ್ಕೆ ಅವರಿಗೆ ಒಂದೆಡೆ ರಾಜ್ಯದ ಸೈನಿಕ ಬೆಂಬಲವೇನೊ ಇತ್ತು. ಆದರೆ ಅದು ದೀರ್ಘಕಾಲಿಕ ಕಾರ್ಯಾಚರಣೆಗೆ ಒದಗದು. ವೇದೋಪನಿಷತ್ತು, ಧರ್ಮಪುರಾಣಗಳೆಂಬ ಅಸ್ತ್ರವೇ ಅವರಿಗೆ ಹೆಚ್ಚು ಉಪಯುಕ್ತವಾದುದು. ಸರ್ವಶ್ರೇಷ್ಠನೂ, ದೇವರ ಪ್ರತಿನಿಧಿಯೂ, ಎಲ್ಲ ಭುಮಿಗೆ ಸಾಂಕೇತಿಕವಾಗಿ "ಪತಿಯೂ" ಆದ ಅರಸನ ತಲೆಯ ಮೇಲೆ ಕೈಯಿಡಬಲ್ಲ ಬ್ರಾಹ್ಮಣರು ಪ್ರಾಯೋಗಿಕ ವಾಗಿ ಭೂಮಿ, ಜನ, ದನ, ಇತ್ಯಾದಿ ಅಷ್ಟಭೋಗ ತೇಜಸ್ವಾಮ್ಯದ ಒಡೆಯರಾದರು. ಅವರಿಗೀಗ ದಲಿತೇತರರ ನೆರವು ಅಗತ್ಯವಿತ್ತು. ಅವರನ್ನು ರೈತರನ್ನಾಗಿ ಮಾಡಬೇಕಿತ್ತು. ಈ ಮೊದಲೆ ದ್ರಾವಿಡ ಪಶುಪಾಲಕರು ಅಂಥ ಹೋರಾಟದಲ್ಲಿ ಗೆಲ್ಲುತ್ತಿದ್ದರು ಕೂಡ. (ಮೈಲಾರ ಪಂಥ) ಒಡೆದಾಳುವ ನೀತಿಯನ್ನು ಅನುಸರಿಸಿ ವೈದಿಕರು ಜಾತಿ ಶ್ರೇಣೀಕರಣ ಜಾರಿಗೊಳಿಸಿದರು. ಇದಕ್ಕಾಗಿ ರಾಜ್ಯ ಆಡಳಿತದಲ್ಲಿ ಪ್ರತ್ಯೇಕ ವಿಭಾಗಗಳೇ ಇರುತ್ತಿದ್ದವು. ಮೊದಲೇ ಬುಡಕಟ್ಟು ವ್ಯತ್ಯಾಸಗಳಿದ್ದವು. ಅವು ಜಾತಿ ವ್ಯವಸ್ಥೆಗೆ ಸುಲಭವಾಗಿ ಬದಲಾದವು, ಬಲಿಯಾದವು. ಕುರಿ ಕಾಯುತ್ತ ಸದಾಕಾಲ ತಿರುಗುತ್ತಿದ್ದ ಕುರುಬರು ಈಗ ರೈತರಾದರು.

**ದಲಿತರು ಮತ್ತು ಗ್ರಾಮಗಳು :**

"ಕೃಷಿ", ಸಮುದಾಯಗಳು ಒಂದೆಡೆ ನೆಲೆಯೂರುವುದನ್ನು ಅನಿವಾರ್ಯವಾಗಿಸುತ್ತದೆ. ಬಿತ್ತಿದ ಬೀಜ, ಮೊಳಕೆಯೊಡೆದು, ಬೆಳೆದು ಫಲ ಕೊಡಬೇಕಾದರೆ ನಾಲ್ಕಾರು ತಿಂಗಳೊ, ವರ್ಷವೊ ಬೇಕು. ಕುಮ್ರಿ ಬೇಸಾಯದಲ್ಲೂ ಕನಿಷ್ಟ ಅವಧಿ ಇದು. ಬೇಸಾಯವೇ ಪ್ರಧಾನ ವೃತ್ತಿಯಾದಾಗ ಭೂಮಿಯ ಪಕ್ಕಕ್ಕೆ ನೀರಿನ ಆಸರೆ ನೋಡಿಕೊಂಡು 'ಹಳ್ಳಿ'ಗಳು ಸ್ಥಾಪನೆಯಾಗುವುದು ಅನಿವಾರ್ಯವಾಯಿತು.

ದಕ್ಷಿಣ ಭಾರತದ ಪ್ರಾದಿಮ ಹಳ್ಳಿಗಳ ಸ್ಥಾಪನೆಯ ಕುರಿತು ಹಲವಾರು ಕುತೂಹಲಕಾರಿ ಮಾಹಿತಿಗಳು ಲಭ್ಯವಿವೆ. ಅಂತಿಮವಾಗಿ ಅವು;

೧) ಊರಮ್ಮನೆಂಬ ಮಾತೃದೈವವಿಲ್ಲದೆ ಒಂದು ಹಳ್ಳಿಯೂ ಇರಲಾರದು.

೨) ಅದಕ್ಕೆ ನಿರ್ದಿಷ್ಟ ಅವಧಿಯಲ್ಲಿ ಕೋಣನ ಬಲಿಯ ಮೂಲಕ ತೃಪ್ತಿ ಪಡಿಸಲೇಬೇಕು ಇಲ್ಲವೆ ಪುನರ್ನವೀಕರಿಸಬೇಕು.

೩) ಈ ಆಚರಣೆಯ ಪ್ರಧಾನ ಕರ್ತವ್ಯ ಹೊಲೆಯರು ಮತ್ತು ಮಾದಿಗರದ್ದು, ಇಂಥ ನಿರ್ಣಯಗಳಿಗೆ ನಮ್ಮನ್ನು ತಲುಪಿಸುತ್ತವೆ.

ಹಳ್ಳಿ ಅಥವಾ ಗ್ರಾಮ ಸ್ಥಾಪನೆಯಾಗುವಾಗಲೂ 'ಬಲಿ' ಕಡ್ಡಾಯವಿತ್ತು. ಬಲಿಯಿಲ್ಲದೆ ಗ್ರಾಮ ಹುಟ್ಟುತ್ತಿರಲಿಲ್ಲ. ಅಮ್ಮನಿಗೆ ಬಲಿಯಿಲ್ಲದಿದ್ದರೆ ಊರು ಅಸ್ತಿತ್ವದಲ್ಲೇ ಇರಲಾರದು ಎಂಬ ಗಾಢವಾದ ನಂಬಿಕೆ ಜೀವಂತವುಳಿಯಿತು.

ಈ ಎಲ್ಲ ವಿಚಾರಗಳು ನೇರವಾಗಿ ದಲಿತ ಸಂಸ್ಕೃತಿಗೆ ಸಂಬಂಧಿಸಿವೆ. ದಲಿತರೇ ಕೃಷಿಕರಾದ್ದರಿಂದ ಅವರೇ ಮೊದಲ ಗ್ರಾಮಗಳ ನಿರ್ಮಾಪಕರು. ಅವರಿಲ್ಲದೆ ಪೊಲಿ (ಬಲಿ) ಇಲ್ಲ, ಬಲಿಯಿಲ್ಲದೆ ಗ್ರಾಮವಿಲ್ಲ, ಅಮ್ಮನೂ ಇಲ್ಲ.

ಗ್ರಾಮಗಳ ಸ್ಥಾಪನೆಗೆ ಸಂಬಂಧಿಸಿದ ವಿಧಯಾಚರಣೆಗಳನ್ನು ನೋಡಿದರೆ ಈ ವಿಷಯಕ್ಕೆ ಸೂಕ್ತ ಆಧಾರವೊದಗಿದಂತಾಗುತ್ತದೆ. ಇಲ್ಲಿ ನಮಗೆ ಹೆನ್ರಿ ವೈಟ್‌ಹೆಡ್ ನೆರವಿಗೆ ಬರುತ್ತಾರೆ. ("ದಿ, ವಿಲೇಜ್ ಗಾಡ್ಸ್ ಆಪ್ ಸೌಥ್ ಇಂಡಿಯಾ")

ಗ್ರಾಮ ಸ್ಥಾಪನೆಯಾಗುವ ಮೊದಲು 'ಕರಗಲ್ಲು' ನೆಡುವ ವಿಧಿಯಿತ್ತು. ತಮಿಳುನಾಡಿನಲ್ಲಿ ಇದಕ್ಕೆ 'ನಟ್ಟನ್‌ಕಲ್' ಎಂದೂ, ಆಂಧ್ರದಲ್ಲಿ 'ಬೊಡ್ಡುರಾಯಿ' ಎಂದೂ ಹೆಸರು.

ಕನ್ನಡದ 'ಕರಿಗಲ್ಲು' ಪದದಲ್ಲಿರುವ 'ಕರಿ'ಗೆ 'ಪೊಲಿ'ಯ ಅರ್ಥವಿದೆ. ಯಾವುದೇ ಪ್ರಮುಖ ಹಬ್ಬಗಳ ಕೊನೆಯದಿನ 'ಕರಿ' ಮಾಡಲಾಗುತ್ತದೆ. ಮಾಂಸಾಹಾರಿಗಳಲ್ಲಿ ಇದು ಮಾಂಸದ ಎಡೆ ಮತ್ತು ಊಟ; ಸಸ್ಯಾಹಾರಿಗಳಲ್ಲಿ 'ಕರಿದ ಪದಾರ್ಥಗಳು. 'ಕರಿ ಕಟ್ಟುವ' ಮತ್ತು 'ಕರಿ ಹರಿಯುವ' ಗ್ರಾಮೊಟ್ಟಿನ ಕೃಷಿ ಆಚರಣೆಗಳ ಬಗ್ಗೆ ಹಿಂದೆ ಪ್ರಸ್ತಾಪಿಸಲಾಗಿದೆ. ಹೀಗೆ ಕೃಷಿ ಸಂಸ್ಕೃತಿಗೆ ಸೇರಿದ 'ಕರಿ' ಒಂದು ವಿಶಿಷ್ಟ ಪರಿಭಾಷೆ. 'ಕನ್ನಡ' ಎಂಬ ಪದ ನಿಷ್ಪತ್ತಿಯಲ್ಲಿ 'ಕರಿ'ಯನ್ನು ಕಲ್ಪಿಸಲಾಗುತ್ತದೆ.

ಹೊಸ ಹಳ್ಳಿಯನ್ನು ಸ್ಥಾಪಿಸಲು ಒಳ್ಳೆಯ ನಿವೇಶನವನ್ನು ಹುಡುಕಿ ಮಧ್ಯದಲ್ಲಿ ತಗ್ಗು ತೆಗೆದು ವಿವಿಧ ಧಾನ್ಯಗಳು, ಬಂಗಾರ, ಬೆಳ್ಳಿ, ತಾಮ್ರ, ಕಬ್ಬಿಣ, ಸೀಸಗಳನ್ನು ಹಾಕಿ ಬೊಡ್ಡುರಾಯಿಯನ್ನು ನಿಲ್ಲಿಸುತ್ತಿದ್ದರು. ಅಗಸಿ ಬಾಗಿಲ ಹತ್ತಿರ ದಾರಿಯ ಮಧ್ಯೆ ಜೀವಂತ ಹಂದಿಯನ್ನು ಹುಗಿಯುತ್ತಿದ್ದರು.

ಮಾನವ ಬಲಿಗೆ ಇದು ಪರ್ಯಾಯವಿದ್ದಿರಬೇಕು. ಕೃಷಿ, ಜನ, ದನಗಳ, ಶಕ್ತಿಗೆ, ಸಮೃದ್ಧಿಗೆ ಇದು ಸಂಕೇತವಾಗಿರುತ್ತಿತ್ತು.

ಹೊಸ ಊರಷ್ಟೇ ಅಲ್ಲ, ಹೊಸ ಮನೆ, ಕೆರೆ, ಬಾವಿಗಳನ್ನು ರಚಿಸಿದಾಗಲೂ ಬಲಿ ಕೊಡುವುದು ಕಡ್ಡಾಯವಿತ್ತು. ಮೊದಲು ಮಾನವ ಬಲಿ, ನಂತರ ಕೋಣ, ಕುರಿ, ಹೋತ, ಕೋಳಿಗಳ ಬಲಿ ಕೊಡುವ ಪದ್ಧತಿ ಚಾಲ್ತಿಗೆ ಬಂತು. ಹೊಸಕೆರೆ, ಮನೆ, ಉಪಕರಣಗಳು ಸಾವನ್ನು ತರುತ್ತವೆಂಬ ಭಯದಿಂದ ಮೊದಲೇ ಅವಕ್ಕೆ ಬಲಿ ನೀಡಿ, ಅವುಗಳಲ್ಲಿರುವ ಶಕ್ತಿಯನ್ನು ತೃಪ್ತಿ ಪಡಿಸಲಾಗುತ್ತಿತ್ತೆಂದು ವೈಟ್‌ಹೆಡ್‌ಊಹಿಸುತ್ತಾನೆ. (ಪು. ೮೫)

ಗ್ರಾಮದ ಸ್ಥಾಪನೆ, ರಕ್ಷಣೆ, ಅಭಿವೃದ್ಧಿಗಳಿಗೆ ಕರಗಲ್ಲನ್ನು ಸ್ಥಾಪಿಸಲಾಗುತ್ತಿದ್ದರೆ ಹೊಲಗಳನ್ನು ಒಳಗೊಂಡು ಗ್ರಾಮದ ಮೇರೆಯನ್ನು ಗುರುತಿಸಲು ಎಲ್ಲೆಕಲ್ಲುಗಳನ್ನು ಸ್ಥಾಪಿಸುತ್ತಿದ್ದರು. ಇಲ್ಲಿ ಆ ಊರಿನ ಅಮ್ಮನ ಪಾದಗಟ್ಟೆಯನ್ನು ಒಳಗೊಂಡ ಸಣ್ಣ ಗುಡಿಯೂ ಇರುತ್ತಿತ್ತು. ಗ್ರಾಮದ ಸುಖ, ಸೌಭಾಗ್ಯ, ನೆಮ್ಮದಿಗಳನ್ನು ಆಶಿಸಿ ಮಾಡುತ್ತಿದ್ದ ಗ್ರಾಮದೇವಿಯ ಹಬ್ಬದಲ್ಲಿ ಎಲ್ಲೆ ಕಲ್ಲುಗಳ ಹತ್ತಿರ ಅಮ್ಮನ ಕರಗ ತಂದಿಡುವುದು, ಬಲಿ ನೀಡಿ ಪೂಜಿಸುವುದು, ರಕ್ತ ಬೆರೆತ 'ಪೊಲಿ' ಚರಗ ಚಲ್ಲುವುದು ಮೊದಲಾದ ಆಚರಣೆಗಳನ್ನು ಮಾಡುತ್ತಿದ್ದರು. ಇಂಥ ಅನೇಕ ಹಬ್ಬಗಳ ಕುರಿತು ವೈಟ್‌ಹೆಡ್ ದಾಖಲಿಸಿದ್ದಾನೆ. ತ್ರಿಚುನಾಪಳ್ಳಿಯ ಹತ್ತಿರದ ಇರುಂಗಲೂರಿನ ಕುರುಂಬೈ ಜಾತ್ರೆಯ ವಿವರ ನೀಡಿ "ತ್ರಿಚುನಾಪಲ್ಲಿ ಜಿಲ್ಲೆಯಲ್ಲಿ ಈ ಎಲ್ಲೆ ಕಲ್ಲುಗಳ ಪೂಜೆ ಸರ್ವೇಸಾಮಾನ್ಯ" (೧೦೨ ಪು.) ಎನ್ನುತ್ತಾನೆ. ಆದರೆ ಪದ್ಧತಿಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿರುವುದನ್ನೂ ಗುರುತಿಸಿದ್ದಾನೆ. ಪುಲ್ಲಂಬಡಿ ಗ್ರಾಮದ ೯ ಮೂಲೆಗಳ ೯ ಕಂಬಗಳಿಗೆ ಕುರಿ ಬಲಿ ನೀಡುವುದು ಅಲ್ಲಿಯ ದಲಿತರು ಎಂಬುದು ಇಂಥ ಒಂದು ನಿದರ್ಶನ. ಶೆಂಬಿಯ ಎಂಬ ಊರಿನಲ್ಲಿ ನಾಲ್ಕು ದಿಕ್ಕಿಗೆ ೪ ಎಲ್ಲೆ ಕಲ್ಲುಗಳಿದ್ದು ಪಿಡಾರಿ ಹಬ್ಬದಲ್ಲಿ ಎಲ್ಲಕ್ಕೂ ಕುರಿ ಬಲಿ ನೀಡುತ್ತಾರೆ. ತಾಂಜಾವೂರ ಜಿಲ್ಲೆಯ ಹಲವಾರು ಕಡೆ ಗಡಿಯ ಅಮ್ಮನ ಹೆಸರು 'ಕಾಲಿಯಮ್ಮನ್'. ಈಕೆಯ ಹಬ್ಬದ ಕೊನೆಯ ದಿನ ಗಡಿ ಕಲ್ಲಿನ ಹತ್ತಿರ ಮೆರವಣಿಗೆ ಬಂದು ಕೋಣ ಬಲಿ ಕೊಟ್ಟು ಅದನ್ನು ಹುಗಿಯುತ್ತಾರೆ. ಕೋಣನ ಬಲಿಯಂತೂ ತಮಿಳುನಾಡಿಗಿಂತ ಆಂಧ್ರದಲ್ಲಿ ಹೆಚ್ಚು.

ಊರಿನ ಕರಗಲ್ಲಿನ ಹತ್ತಿರ ಪ್ರಾಣಿ ಬಲಿ ನೀಡಿ ಪೂಜುವ ಆಚರಣೆಗಳು ಹಲವಾರು ಕಡೆ ಉಳಿದಿವೆ. ಹಂದಿಯನ್ನು ಹುಗಿದು ಅದರ ಮೇಲೆ ದನಗಳನ್ನು ಓಡಿಸುವ, ಮಾದಿಗರು ದನಗಳಿಗೆ ಪೊಲಿ ಅನ್ನ ಎರಚುವ ವಿಧಿಗಳಿವೆ. ಇದು ದನಗಳಿಗೆ ಬಂದ ರೋಗವನ್ನು ನಿವಾರಿಸುವ ಸಂದರ್ಭದ ಆಚರಣೆ.

ಊರಮ್ಮನ ಜಾತ್ರೆಯಲ್ಲಂತೂ ಬತ್ತಲೆ ಹೊಲೆಯ ಅಥವಾ ಮಾದಿಗ ಕೋಣನ ಕರಸನ್ನು ಅನ್ನದಲ್ಲಿ ಬೆರೆಸಿ (ಪೊಲಿ) ಇಡೀ ಊರಿನ ಸುತ್ತ ಚರಗ ಚಲ್ಲುವ ಪದ್ಧತಿ ಸಾರ್ವತ್ರಿಕವಾಗಿದೆ. ಕರ್ನಾಟಕದ ಕೆಲವೆಡೆ ಅಸಾದಿ, ಮೆರವಣಿಗೆಯಲ್ಲಿ ಬಲಿಯಾದ ಕೋಣನ ತಲೆಯನ್ನು ಗಡಿಯವರೆಗೆ ತಂದು ಚಲ್ಲುವುದಿದೆ.

ಗಮನಾರ್ಹ ಅಂಶವೆಂದರೆ ವೈದಿಕ ಸಂಸ್ಕೃತಿಯಲ್ಲಿ ಇಡಿ ಗ್ರಾಮವನ್ನು ಗಮನದಲ್ಲಿಟ್ಟುಕೊಂಡು ಹೀಗೆ ಯಾವ ವಿಧವಾದ ಆಚರಣೆಯನ್ನು ಮಾಡುವ ಸಂಪ್ರದಾಯವಿಲ್ಲದಿರುವುದು.

ಇಂದು ಈ ಎಲ್ಲ ರಿಚ್ಯುವಲ್‌ಗಳನ್ನು ನಾವು ಹೇಗೆ ನೋಡುತ್ತಿದ್ದೇವೆ ಎಂಬ ಮಾತು ಬೇರೆ. ಅದನ್ನು ಸಮರ್ಥಿಸುವ ಪ್ರಶ್ನೆಯೂ ಇಲ್ಲ. ಆದರೆ ಸಾಂಸ್ಕೃತಿಕ ಚರಿತ್ರೆಯ ಗತಿಶೀಲ ಸ್ವಭಾವವನ್ನು ಗುರುತಿಸುವಾಗ ಇವೆಲ್ಲ ತುಂಬ ಪ್ರಮುಖ ಅಂಶವಾಗುತ್ತವೆ.

ಗ್ರಾಮಕ್ಕಿರುವ ಸಾಮಾನ್ಯ ಬಳಕೆಯ ಪದ 'ಪಲ್ಲಿ' (ಹಳ್ಳಿ) ತುಂಬ ಹಿಂದೆಯೆ ವೈದಿಕ ವಾಙ್ಮಯವನ್ನು ಸೇರಿದೆ ಎಂದು ರೋಮಿಲಾ ಥಾಪರ್ ಹೇಳುತ್ತಾರೆ. ('ಗತಕಾಲದ ಬಗ್ಗೆ ಪೂರ್ವಗ್ರಹ' ಪು. ೫೪) ಪ್ರತಿಯೊಂದು ರಾಜ್ಯದ ಗ್ರಾಮನಾಮಗಳ ಅಧ್ಯಯನ ಮಾಡಿದರೆ ದಲಿತ ಸಂಸ್ಕೃತಿಗೆ ಸಂಬಂಧಿಸಿ ಕುತೂಹಲದ ಫಲಿತಗಳು ದೊರಕುವ ಸಾಧ್ಯತೆ ಇದೆ.

ಇಡೀ ದೇಶದ ಗ್ರಾಮನಾಮಗಳಲ್ಲಿ ಕಂಡುಬರುವ 'ಪಾಡಿ', 'ಪಾಳಿ'ಯು ದ್ರಾವಿಡ ಪಟ್ಟಿ–ಪಾಡಿಗಳಿಂದ ಹುಟ್ಟಿವೆ ಎಂದು ವಿದ್ವಾಂಸರ ಗ್ರಹಿಕೆ (ಡಾ.ಬಿ.ಎಸ್. ಕುಲಕರ್ಣಿ) ಪಳ್ಳಿ, ಪಾಡಿ, ಪಟ್ಟಿ ಇವೆಲ್ಲ ದ್ರಾವಿಡ ಪದಗಳು. ಪಾಡಿ ಪಾಳಿಯಿಂದ ಬುದ್ಧ ಬೋದಿಸಿದ 'ಪಾಲಿ' ಭಾಷೆಯ ಹೆಸರು ಹುಟ್ಟಿತು. ಇದು 'ಪಟ್ಟಿ' ಜನರ ಆಡುಮಾತಾಗಿತ್ತು. ಬುದ್ಧನ ತತ್ವಗಳಿಗೂ ಕೂಡಾ ಆ ಪ್ರದೇಶದ ದ್ರಾವಿಡರ ವಿವಿಧ ಜ್ಞಾನಗಳೇ ಆಧಾರವಾಗಿದ್ದವು.

ಈ ಹಿಂದೆ ತಮಿಳುನಾಡಿನ ಪರ್ರೈಯಾನ್‌ರ ಭೂಮಿ ಸಂಬಂಧ ಕುರಿತು ಹೇಳಲಾಗಿದೆ.

**ಬೇಸಾಯ ಮತ್ತು ತಾಯಿಪಂಥ :**

'ಬೇಸಾಯ', ಕಾಲವನ್ನು ಗೊತ್ತು ಪಡಿಸಲಾಗದಷ್ಟು ಹಿಂದೆಯೆ ಮಾನವ ಪೀಳಿಗೆ ರೂಢಿಸಿಕೊಂಡಿರುವ 'ವೃತ್ತಿ'. ಇದು, ಆದಿಮ ಜನ ಸಮುದಾಯಗಳು ನಾಗರಿಕರಾದುದರ ಸೂಚನೆಯೆಂದೇ ಭಾವಿಸಲಾಗುತ್ತದೆ. ಬೇಟೆಗಾರಿಕೆಯಿಂದ ಪಶುಪಾಲನೆಯ ಹಂತಕ್ಕೆ, ಕೆಲವು ಗುಂಪುಗಳು ಬೆಳೆದು ಬಂದರೆ, ಕೆಲವು ಕೃಷಿಯನ್ನು ಕಂಡು ಕೊಂಡವು. ಇಜಿಪ್ತ, ಮೆಸೊಪೊಟೆಮಿಯಾ, ಹರಪ್ಪ, ಮೊದಲಾದ ಪ್ರಾಚೀನ ನಾಗರಿಕತೆಗಳು ಕೃಷಿ ಪ್ರಧಾನ ಸಮಾಜಗಳಾಗಿದ್ದು ಅಲ್ಲಿ ಮಾತೃದೈವ ಪ್ರಮುಖವಾಗಿ ಆರಾಧನೆಗೊಳ್ಳುತ್ತಿತ್ತು.

ಕೃಷಿಯನ್ನು ಮೊದಲು ಕಂಡುಹಿಡಿದವರು ಮಹಿಳೆಯರು ಎಂದು ಅನೇಕ ವಿದ್ವಾಂಸರು ಸಾಧಾರವಾಗಿ ನಿರೂಪಿಸಿದ್ದಾರೆ. ಭೂಮಿಯನ್ನೆ ಹೆಣ್ಣೆಂದು ದರ್ಶಿಸಿ ಬೆಳೆಸಿಕೊಂಡಿರುವ ತಾತ್ತ್ವಿಕ ಪರಿಕಲ್ಪನೆಗಳ ವೈವಿಧ್ಯಕ್ಕಿಂತಲೂ ಲೆಕ್ಕವಿಲ್ಲ. ಬೇಟೆಗಾರಿಕೆ ಪುರುಷರ ವೃತ್ತಿಯಾಗಿದ್ದಾಗ, ಆದಿಮ ಬೇಸಾಯ ಮಹಿಳೆಯರ ವೃತ್ತಿಯಾಗಿತ್ತು. ಇದು ನಮ್ಮ ನಾಡಿನಲ್ಲಿ ಎಷ್ಟು ಅಧಿಕ ಬಲದಿಂದ ವೃದ್ಧಯಾಯಿತೆಂಬುದನ್ನು ಮಾತೃದೈವಗಳ ಪ್ರಾಬಲ್ಯದ ಮುಖಾಂತರ ಹೇಳುವಂತಾಗಿದೆ. ಕಾಲಸಂದಂತೆ ಪಿತೃ ಪ್ರಧಾನ ಸಮಾಜ, ವರ್ಗ-ವರ್ಣ, ಶೋಷಣೆ ಇವೆಲ್ಲ ಕಾಲಿಟ್ಟರೂ ಆದಿಮ ಸಂಪ್ರದಾಯಗಳು ಸಂಪೂರ್ಣ ನಶಿಸಲಿಲ್ಲ. ಜನಕುಲಗಳೂ ನಾಶವಾಗಲಿಲ್ಲ. ಈ ಕಾರಣದಿಂದಲೇ ದಲಿತ ಮಹಿಳೆಯರು ಮೊಟ್ಟಮೊದಲ ಕೃಷಿಕರೆಂದು ಹೇಳಲು ಸಾಧ್ಯವಾಗುತ್ತಿದೆ.

ಕೃಷಿ, ದಲಿತರು, ತಾಂತ್ರಿಕ ಪಂಥ, ಮಾತೃದೈವಾಚರಣೆ, ಗ್ರಾಮಗಳು, ಇವೆಲ್ಲವನ್ನು ಪ್ರತ್ಯೇಕಿಸಿ ನೋಡಲು ಶಕ್ಯವಿಲ್ಲವಾದರೂ ಅಧ್ಯಯನದ ದೃಷ್ಟಿಯಿಂದ ಅಮ್ಮನ ಪಂಥಕ್ಕೂ, ಬೇಸಾಯಕ್ಕೂ ಇರುವ ನಂಟಿನ ಕುರಿತು ನಮ್ಮ ನಾಡಿನ ಅನುಭವಗಳನ್ನು ಸಂಗ್ರಹಿಸಬೇಕಿದೆ.

೧೯೨೧ ರಲ್ಲೇ ಹೆನ್ರಿ ವೈಟ್‌ಹೆಡ್ ದಕ್ಷಿಣ ಭಾರತದ ಗ್ರಾಮದೈವಗಳ ಕುರಿತು ಬರೆಯುವ ಸಂದರ್ಭದಲ್ಲಿ, "The number of different gods and goddesses worshipped all over south India is enormous and the variety of local customs almost infinite." ಎಂದು ಹೇಳಬೇಕಾಯಿತು. "The variety of ritual and ceremonial in the different districts of south India is almost endless." ಎನ್ನುವ ಆತ ದಕ್ಷಿಣ ಭಾರತದ ಪ್ರತಿಗ್ರಾಮ ಮತ್ತು ನಗರಗಳಲ್ಲಿ ಗ್ರಾಮದೇವಿಯ ಪೂಜೆ ಜಾತ್ರೆ, ಬಲಿ ಇರುವುದನ್ನು ನೋಡಿದ. ತೀರ ಪ್ರಾಚೀನವೆಂಬಂಥ ರೂಪಾಕೃತಿ, ಪಾಜಾಪದ್ಧತಿಗಳಿಂದ ಹಿಡಿದು, ವೈದಿಕರ ಒಳತೂರುವಿಕೆಯಿಂದ ಬೃಹತ್ ದೇಗುಲಗಳು, ಸುಂದರ ಕಲಾಕೃತಿಗಳು, ಪೂಜೆ, ಪುನಾಸ್ಕಾರಗಳವರೆಗೆ ಅಮ್ಮನ ಪಂಥ ಬೆಳೆಯಿತು.

ಬೇಸಾಯ ವೃತ್ತಿಯ ಅಡಿಪಾಯವಿಲ್ಲದೆ ಮೇಲ್‌ರಚನೆಯಾದ ಅಮ್ಮನ ಪಂಥಕ್ಕೆ ಬೆಲೆಯೆ ಇರಲಾರದು. ಇದು ಕೃಷಿಗೂ, ತಾಯಿ ಪಂಥಕ್ಕೂ ಇರುವ ನಂಟಿನ ಸ್ವಭಾವ. ಕೃಷಿ ಎಲ್ಲಿ ಹಿಂದುಳಿದ ಸ್ಥಿತಿಯಲ್ಲಿರುವುದೋ ಅಲ್ಲಿ ಅಮ್ಮನೂ ಆದಿಮ ರೂಪದಲ್ಲಿ ಆರಾಧನೆಗೊಳ್ಳುತ್ತಾಳೆ. ಕೃಷಿ ಪದ್ಧತಿ ಅಭಿವೃದ್ಧಿಗೊಂಡಿರುವಲ್ಲಿ ಅಮ್ಮನ ಪಂಥವೂ ಬೆಳೆದಿದೆ.

ಪಶುಪಾಲಕ ಗೊಲ್ಲ, ಬೇಡ, ಕುರುಬರಲ್ಲಿ, ಕೇತದೇವರು, ಪಾತೇದೇವರು, ಎತ್ತಪ್ಪ, ಜುಂಜಪ್ಪ, ಗಾದ್ರಿ ಪಾಲನಾಯಕ, ಪಾಪಿನಾಯಕ, ಬೀರಪ್ಪ, ಖಂಡೋಬಾ-ಮೈಲಾರ ಮುಂತಾದ ಪುರುಷದೈವ ಪಂಥಗಳಿವೆ. ಈ ದೈವಗಳ ಹಾಡ್ಗತೆ, ಮಹಾಕಾವ್ಯಗಳಲ್ಲಿ ಪಶುಪಾಲಕ ಸಂಸ್ಕೃತಿಯ ವಿವರಗಳೇ. ಕೆಲವು

ಸಲ ಅವು ಕೃಷಿಕರ ಜೊತೆ, ಹಾಗಾಗಿ ಸ್ತ್ರೀ ದೈವಗಳ ಜೊತೆ ಘರ್ಷಣೆಗಿಳಿಯುತ್ತವೆ. ಊರು ಮತ್ತು ಗಡಿಗಳನ್ನು ರಕ್ಷಿಸುವ ದ್ಯಾಮವ್ವ, ಎಲ್ಲವ್ವ, ಊರಮ್ಮ, ಮಾರೆಮ್ಮ, ದುರುಗಮ್ಮ, ಕಾಳಮ್ಮ ಚೌಡಮ್ಮಗಳು ಘರ್ಷಣೆಯ ನಂತರ ಆ ಪುರುಷ ದೈವಗಳ ಸೋದರಿಯರಾಗಿಯೋ, ಪತ್ನಿಯರಾಗಿಯೋ ಹೊಂದಿಕೊಳ್ಳುತ್ತವೆ. ಈ ಘಟ್ಟಕ್ಕೆ ಕನ್ನಡ ಜನಪದ ಸಂಸ್ಕೃತಿಯ ಬೆಳವಣಿಗೆ ನಿಂತಿದೆ. ಇದರರ್ಥ ಸ್ಪಷ್ಟವೇ.

ತಮ್ಮ ತಮ್ಮ ಕುರಿ ಆಡು, ಎಮ್ಮೆ, ಕೋಣ, ಹೋರಿ, ಆಕಳ, ಹಿಂಡುಗಳ ಸಮೇತ ತಿರುಗುತ್ತಿದ್ದವರು ಕೃಷಿಕ ನೆಲಸುಗರ ಜತೆ ಮೊದಲು ಘರ್ಷಣೆಗಿಳಿಯುತ್ತಾರೆ. ನಂತರ ಹಳ್ಳಿಗಳಲ್ಲಿ ಅವರ ಜೊತೆ ನೆಲೆಯೂರಿ ಸಮನ್ವಯ ಸಂಸ್ಕೃತಿಗೆ ಒಗ್ಗುತ್ತಾರೆ. ಈ ಹಂತದಲ್ಲಿ ಯಾರೂ ತಮ್ಮ ತಮ್ಮ 'ಮೂಲದ' ಆಶಯಗಳನ್ನು ಬಿಟ್ಟು ಕೊಡದಂತೆ ಪರಸ್ಪರ ಕೊಳುಕೊಡೆಗಿಳಿಯುತ್ತಾರೆ. ಅವರಿಗೆ ಬೇಕಾಗಲಿ ಬೇಡಾಗಲಿ ಸಾಂಸ್ಕೃತಿಕ ಅಂತರ್‌ಚಲನೆಯಿಂದಾಗಿ ಬೇರೆ ಬೇರೆ ಆಕಾರಗಳು ಟಿಸಿಲೊಡೆಯುತ್ತವೆ. ಇನ್ನೊಂದೆಡೆ ಫ್ಯೂಡಲ್ ಕಾಲದ ಪ್ರಭುತ್ವ ಮತ್ತು ಧರ್ಮಗಳ ದಾಳಿಕೋರತನದಿಂದಾಗಿ ಉಂಟಾಗಿರುವ ಪಲ್ಲಟಗಳೂ ಹಲವಾರು.

ಇದು ಒಟ್ಟಾರೆ ಒಂದು ಸಂಕೀರ್ಣ ಸನ್ನಿವೇಶವನ್ನು ನಿರ್ಮಾಣ ಮಾಡಿದೆ. ಈಗ ಬೇಸಾಯಕ್ಕೂ, ತಾಯಿಪಂಥಕ್ಕೂ ಇರುವ ಸಂಬಂಧಕ್ಕೆ ಕೆಲವು ನಿದರ್ಶನಗಳು–

೧) ಉತ್ತರ ಕರ್ನಾಟಕದ ರೈತರು ಭೂಮಿಗಳನ್ನು ಹದಮಾಡಿಕೊಂಡು, ಬಿತ್ತುವ ಸಮಯ ಬಂದಾಗ 'ಕೂರಿಗೆ'ಯನ್ನು ಮನೆಯ ಒಂದು ಕಡೆ ಎತ್ತಿ ನಿಲ್ಲಿಸಿ ಸೀರೆಯುಡಿಸಿ 'ಅವ್ವ' ನನ್ನಾಗಿ ಮಾಡುತ್ತಾರೆ. ಕಾಳು ಹಾಕುವ ಶೆಡ್ಡಿ ಅವ್ವನ ಮುಖ, ಈಸುಗಳೇ ಕಾಲುಗಳು. ಪೂಜೆ ಮಾಡಿ ಜೋಳದ ಕಡಬು, ಸಿಹಿಬೇಳೆ ಎಡೆ ಹಿಡಿದು ಐದು ಜನ ಮುತ್ತೈದೆಯರನ್ನು ಅಥವಾ ಬಾಲಕಿಯರನ್ನು ಕೂರಿಗಿಯ ಮುಂದೆ ಕೂರಿಸಿ ಅವರ ತಲೆಗೆ ದಂಡೆಕಟ್ಟಿ, ಉಡಿತುಂಬಿ, ಊಟ ಮಾಡಿಸುತ್ತಾರೆ.

ಅಮ್ಮನಿಗೂ ಬೇಸಾಯಕ್ಕೂ ಇರುವ ನಂಟನ್ನು ಇದಕ್ಕಿಂತ ಚೆನ್ನಾಗಿ ವಿವರಿಸುವ ಅಗತ್ಯವಿಲ್ಲ.

ಗೌರಿ, ಗುರುಚಿ, ಗುಳ್ಳವ್ವ ಗೊಗ್ಗವ್ವ ಮೊದಲಾದ ಸ್ತ್ರೀದೈವಗಳು ಒಕ್ಕಲುತನದ ಬೇರೆ ಬೇರೆ ಹಂತಗಳಾದ ಬಿತ್ತುವ, ಕಳೆ ತೆಗೆಯುವ, ಮಳೆ ನಿರೀಕ್ಷಿಸುವ, ತೆನೆ ಬರುವ, ಕಾಳು ಹಿಡಿಯುವ, ಒಕ್ಕುವ ಸಂದರ್ಭಗಳಿಗೆ ಹೊಂದಿಕೊಂಡು ಆಚರಣಾತ್ಮಕ ಸಂಬಂಧ ಪಡೆಯುತ್ತವೆ.

ಉತ್ತರ ಕರ್ನಾಟಕದ ರೈತರು ಬಿತ್ತುವ ಸಂದರ್ಭದ ಒಂದು ಆಚರಣೆಯನ್ನು ಇಲ್ಲಿ ಪ್ರಸ್ತಾಪಿಸಬಹುದು. ಕಾಮದಹನದ ಮರುದಿನ ಮುಂಗಾರು ಕೃಷಿ ಆರಂಭ. ರೈತ ಆದಿನ ಹೊಲಕ್ಕೆ ಹೋಗಿ ಗಳೆ ಹೂಡಿ ಬರುತ್ತಾನೆ. ಅಂದು ಸಾಮಾನ್ಯವಾಗಿ ಕಾಮನ ಕಣ್ಣೀರು (ಮಳೆ) ಆಗುತ್ತದೆ. ಅದು ಶುಭವೆಂದು ನಂಬಿಗೆ.

ಬಿತ್ತುವ ಮೊದಲು ಗ್ರಾಮದೇವಿಯ ಉಡಿ ತುಂಬುತ್ತಾರೆ. ಬಿತ್ತುವ ದಿನಗಳು ಬರುವ ಮೊದಲ ೫ ಅಥವಾ ೧೧ ಶುಕ್ರವಾರ ಅಥವಾ ಮಂಗಳವಾರ (ಇವು ಸ್ತ್ರೀ ಸಂಬಂಧಿ ವಾರಗಳು) ಗ್ರಾಮದೇವಿಯ ಹೆಸರಿನ ವಾರ ಮಾಡುತ್ತಾರೆ. ಅಂದು ರೈತರಿಗೆ ಬಿಡುವು. ಕೊನೆಯ ವಾರ ದೇವಿಯ ಹಬ್ಬ. ದೇವಿಯ ಪಲ್ಲಕ್ಕಿ ಊರೆಲ್ಲ ಸುತ್ತು ಹಾಕುತ್ತದೆ. ಪ್ರತಿ ಮನೆಯವರೂ ನೀರು ಹಾಕಿ, ಪೂಜಾ ದ್ರವ್ಯಗಳನ್ನು ಕೊಡುತ್ತಾರೆ. ಸಂಜೆ ಊರವರು ದೇವಿಯ ಉಡಿ ತುಂಬುತ್ತಾರೆ. ಟಗರು ಬಲಿ ಕೊಡುತ್ತಾರೆ. ಇತರ ಹೆಣ್ಣು

ದೇವರುಗಳಿಗೆ ಹೋತ ಬಲಿ ನೀಡುತ್ತಾರೆ. ದೇವಿಗೆ ಶಾಂತಿ ಮಾಡದ ಹೊರತು ರೈತ ಭೂಮಿಗೆ ಬೀಜ ಹಾಕುವುದಿಲ್ಲ. ದೇವಿಯ ಉಡಿಯ ಧಾನ್ಯವನ್ನೇ ಕೆಲವು ಕಡೆ ಬಿತ್ತುವ ಬೀಜದಲ್ಲಿ ಬೆರೆಸುತ್ತಾರೆ.

ಬಿತ್ತಲು ಬೇಕಾಗುವ ಸಾಧನ 'ಕೂರಿಗೆ'. 'ಬಡಿಗ', ಕಮ್ಮಾರರು ಅದರ ವಿವಿಧ ಭಾಗಗಳನ್ನು ಮಾಡಬೇಕಾಗುತ್ತದೆ. ಅದನ್ನು ಸಿದ್ಧ ಪಡಿಸುವ ಇಡಿ ಕೆಲಸ ವಿಧಿಯಾಚರಣೆಯೊಂದಿಗೇ ನಡೆಯುತ್ತದೆ. ಕೂರಿಗೆಯ ತಾಳಕ್ಕೆ ಬೇಕಾಗುವ ಜಾಲಿ ಕಟ್ಟಿಗೆಯನ್ನು ಪೂಜೆಮಾಡಿ ಕಡಿದು ತರುತ್ತಾರೆ. ಕುಂಬಾರ ಕುಲುಮೆ ಮತ್ತು ಬಡಿಗರ ಅಡಿಗಟ್ಟಗಳನ್ನು ಪೂಜಿಸಿ ಸಲಕರಣೆಗಳಾದ ಮೊಳೆ, ತಾಳ, ದಿಂಡು, ಈಸು, ಮೇಳಿಗಳನ್ನು ತಯ್ಯಾರಿ ಮಾಡುತ್ತಾರೆ. ಕುಲುಮೆ, ಅಡಿಗಟ್ಟೆಗಳೆರಡೂ 'ಕಾಳಮ್ಮ'ನ ಪ್ರತೀಕ ಎಂಬ ಭಾವನೆ ಇದೆ. ಕರಿಕಟ್ಟದ ಕರಿಕಂಬಳಿಯ ಮೇಲೆ ಉಪಕರಣಗಳನ್ನೆಲ್ಲ ಇಟ್ಟು ಪೂಜಿಸಿ ನಿಧಿ ಹಾಕುತ್ತಾರೆ. ಕೂರಿಗೆ ಸಿದ್ಧವಾದ ನಂತರ ಮೇಲೆ ಹೇಳಿದಂತೆ ಕೂರಿಗೆ ತಾಯಿ ಪೂಜೆ (ವೀರೇಶ ಬಡಿಗೇರ: 'ಅಡಿಪೂಜೆ'– ಸುವರ್ಣ ಜಾನಪದ II ೧೯೯೮) ಊರ ದೇವರುಗಳಿಗೆಲ್ಲ ನವಧಾನ್ಯ ಸಹಿತ ಎಡೆ ಅರ್ಪಿಸುವುದೂ ಮುಖ್ಯ. ಹೊಲಕ್ಕೆ ಕೂರಿಗಿ ತಂದು ಹೊಲ ಪೂಜೆ ಮಾಡಿ, ಮಡಿಬಟ್ಟೆಯುಟ್ಟ ರೈತ ಕಂಬಳಿ ಗೊಂಗಡಿ ಹೊದ್ದು ಪೂರ್ವ ಅಥವಾ ಉತ್ತರ ದಿಕ್ಕಿಗೆ ಅಭಿಮುಖವಾಗಿ ಬಿತ್ತಲು ಪ್ರಾರಂಭಿಸುತ್ತಾನೆ. ಬಿತ್ತುವ ಕ್ರಿಯೆ ಸಂಭೋಗದ ಕ್ರಿಯೆಯೇ ಎಂದು ವೀರೇಶ ಬಡಿಗೇರ ಹೇಳುವುದು ಸರಿಯಾದ ವಿಚಾರವೇ. ಹೆಣ್ಣು ಗರ್ಭಧರಿಸಿ, ಹೊಸ ಜೀವಸೃಷ್ಟಿಗೆ ಕಾರಣಳಾಗುವಂತೆ, ಭೂಮಿ ತಾಯಿಯೂ ಜೀವಕೋಟಿಗೆ ಬೇಕಾಗುವ ಧಾನ್ಯ, ಹಣ್ಣು ಹಂಪಲು ನೀಡುತ್ತಾಳೆಂಬ ಭಾವನೆ ತುಂಬ ಪ್ರಾಚೀನವೇ.

ಇಂಥ ಭಾವನೆ ನಾಡಿನ ಎಲ್ಲೆಡೆ ಇರುವುದು ಆಶ್ಚರ್ಯಕರವೇನಲ್ಲ. ತುಳುನಾಡಿನಲ್ಲಿ ಭೂಮಿತಾಯಿ ರಜಸ್ವಲೆಯಾಗುವಳೆಂದು ನಂಬಿ ಮಾಡುವ ಆಚರಣೆಯನ್ನು ಇಲ್ಲಿ ನೆನಪಿಸಬಹುದು. 'ಕೆಡ್ಡಸ' ಎಂದು ಈ ಹಬ್ಬ ಮಾಡುತ್ತಾರೆ. ಕೆಡ್ಡಸದ ದಿನ ಭೈರ (ದಲಿತರು) ಹೆಂಗಸರು ಮುಟ್ಟಾದರೆ ಆ ಹೆಂಗಸಿಗೆ ಶಾಪ ಬಂದಂತೆಂಬ ಕಲ್ಪನೆಯಿದೆ. ಅವಳು ಆಗ ಮೂರುದಿನ ಭೂಮಿಯಿಂದ ಬೆಳೆಯುವ ಧಾನ್ಯವನ್ನು ತಿನ್ನುವಂತಿಲ್ಲ. ಮಾಂಸ, ಹಾಲು ಮಾತ್ರ ಸೇವಿಸುವಳು ("ಭೈರರ ಸಂಸ್ಕೃತಿ"– ದೇವನೂರು ಪಾಂಡುರಂಗ) ಕೆಡ್ಡಸ "ಭೂಮಿತಾಯಿ ಋತುವಾಗಿ ಬೀಜೋತ್ಪತ್ತಿಯ ನಿರೀಕ್ಷೆಯಲ್ಲಿರುವ ಸಂಧಿಕಾಲದ ಹಬ್ಬ." (ಅಮೃತ ಸೋಮೇಶ್ವರ, 'ಭೂಮಿ ತಾಯಿಯ ಮೀಹದ ಹಬ್ಬ ಕೆಡ್ಡಸ' ಸುವರ್ಣ ಜಾನಪದ I) ಭೂಮಿ ತಾಯಿ ವರ್ಷಕ್ಕೊಮ್ಮೆ ಮುಟ್ಟಾದಾಗ, ಅಗೆಯುವುದು, ಉಳುವುದು ಇಂಥ ಹಿಂಸೆ ಮಾಡಬಾರದೆಂದು, ಹಾಗೆ ಮಾಡಿದರೆ ಭೂಮಿಗೆ ನೋವಾಗಿ ಆಕೆ ಬಂಜೆಯಾಗುವಳೆಂದು ನಂಬಿಕೆ ಇದೆ.

ಕೆಡ್ಡಸ ಹಬ್ಬದಲ್ಲಿ ಮೂರುದಿನ ಭೂಮಿ ದೇವಿಯ ಪೂಜೆ ಮಾಡುವವರು ಮಹಿಳೆಯರು. ಅಂಗಳದ ಒಂದೆಡೆ ಶಗಣಿಯಿಂದ ಸಾರಿಸಿ, ವಿಭೂತಿಯಿಂದ ವೃತ್ತ ಬರೆದು, ಮಡಿಬಟ್ಟೆ, ಗೆಜ್ಜೆಕತ್ತಿ, ತೆಂಗಿನ ಸೋಗೆ ಕಡ್ಡಿ ಇಟ್ಟು ಪೂಜಿಸಿ ನವ ಧಾನ್ಯಗಳನ್ನು ಹುರಿದು ಮಾಡಿದ ಪುಡಿಯಲ್ಲಿ ಬೆಲ್ಲ ಅರಳು ಕಾಯಿಚೂರು ಬೆರೆಸಿ ನೈವೇದ್ಯ ಮಾಡಿ ಹಂಚಿಕೊಂಡು ತಿನ್ನುತ್ತಾರೆ. ಈ ಹಬ್ಬದಲ್ಲಿ ಗಂಡಸರು ಪುರುಷ ಭೂತ ಮುಗ್ಗೆಲುನ ಭೂತಗಳನ್ನು ಪ್ರಾರ್ಥಿಸಿ ಸಾಮೂಹಿಕವಾಗಿ ಬೇಟೆಗೆ ಹೋಗುತ್ತಾರೆ. ನಲಿಕೆಯವ ಡೋಲು ಬಡಿಯುತ್ತ ಬೇಟೆಗಾರರನ್ನು ಪುಸಲಾಯಿಸಿ ಹೊಗಳಿ ಕಾಕುಹಾಕಿ ಒಂದಿಷ್ಟು ದೂರ ಹೋಗಿ ಒಂದು ಮುಷ್ಟಿ ಮರಳನ್ನು ಮುಂದೆ ಬೀಸಾಡಿ ಹಿಂದಿರುಗುತ್ತಾನೆ. ಮೂರನೆಯ ದಿನ ಮುತ್ತೈದೆಯರು, ಭೂಮಿ ಬರೆದಲ್ಲಿ ಸೊಪ್ಪು, ದೀಪ, ಅರಿಶಿಣ, ಕುಂಕುಮ, ಎಣ್ಣೆ ಇತ್ಯಾದಿ ಇಟ್ಟು ಮನೆಯೊಳಗೆ ಭೂಮಿತಾಯಿಯನ್ನು ಕರೆದುಕೊಳ್ಳುವ ವಿಧಿ ಪೂರೈಸುತ್ತಾರೆ. ಮರುದಿನ ಭೂಮಿಗೆ ಎಣ್ಣೆ ಹೊಯ್ಯುತ್ತಾರೆ. ಸ್ನಾನದ ಸೀಗೆ ಇತ್ಯಾದಿ ಚಲ್ಲುತ್ತಾರೆ. ಓಕುಳಿ ನೀರಿಂದ ಜಾಗ ಶುದ್ಧೀಕರಿಸಿ ಪೂಜಿಸುತ್ತಾರೆ.

ಇದು ಭೂಮಿ ಋತುಮತಿಯಾದಾಗ ಮಾಡುವ ಆಚರಣೆಯಾದರೆ, ಭೂಮಿತಾಯಿ ತುಂಬು ಗರ್ಭಿಣಿಯಾದಾಗ ಬಯಕೆ ತೀರಿಸುವ ಹಬ್ಬ ("ಭೂಮಿ ಹುಣ್ಣಿವೆ ಹಬ್ಬ") ಮಾಡುತ್ತಾರೆ. ಇದು ನಾಡಿನ ಹಲವಾರು ಕಡೆ ಮಾಡುವ ಹಬ್ಬ.

ಉತ್ತರ ಕರ್ನಾಟಕದ ಗುಳ್ಳವ್ವನ ಹಬ್ಬವೂ ಕೃಷಿಗೇ ಸಂಬಂಧಿಸಿದ್ದು, ಇದನ್ನು ಮಾಡುವವರೂ ಮಹಿಳೆಯರೇ. ವಿವರಗಳನ್ನು ವೀರೇಶ ಬಡಿಗೇರ ಅವರ ಗ್ರಂಥ ("ಗುಳ್ಳವ್ವ"),ದಲ್ಲಿ ನೋಡಬಹುದು. ಇದು ಆಷಾಢ ಮಾಸದಲ್ಲಿ ಬರುವ ಹಬ್ಬ. ಹೊಳೆ ಅಥವಾ ಹಳ್ಳದ ದಂಡೆಯ ಅರಲನ್ನು ತಂದು ಹುಡುಗಿಯರು ಪ್ರತಿವಾರ ಒಂದೊಂದು ಹಂತದ ಗುಳ್ಳವ್ವ ಮಾಡುತ್ತಾರೆ. ಇವಕ್ಕೆ ಕಂಬದ ಗುಳ್ಳವ್ವ (ಕೊಂತಿ), ಪಡಕದ ಗುಳ್ಳವ್ವ (ಕಟ್ಟೆ), ಮಾಡದ ಗುಳ್ಳವ್ವ, ಗಾಲಿಗುಳ್ಳವ್ವ, ಎಂದು ಹೆಸರು. ಭೂಮಿಯಲ್ಲಿ ಬೆಳೆಯುತ್ತಿರುವ ಪೈರಿನ ಜೊತೆ ಈ ಗುಳ್ಳವನನ್ನೂ ಬೆಳೆಸುತ್ತ ಹೋಗಲಾಗುತ್ತದೆ. ಕೊನೆಗೆ ಅರಲಿನ ಕೋಣ ಬಲಿ ನೀಡುತ್ತಾರೆ. ಈಕೆಯ ಎಡೆಯನ್ನು ಹೊಲದಲ್ಲಿ ಚರಗ ಚಲ್ಲುತ್ತಾರೆ. ಮಾದಿಗರ ಹೆಂಗಸರ ಪ್ರಕಾರ "ಗುಳ್ಳವ್ವ ಭೂಮಿ ತಾಯಿ, ಅನ್ನ ಹಾಕುವಾಕಿ".

ಚಿಕ್ಕ ಮಗಳೂರಿನ ಕೊಪ್ಪ, ಶೃಂಗೇರಿ, ಮೂಡಿಗೆರೆ, ನರಸೀಪುರ, ತೀರ್ಥಹಳ್ಳಿಗಳ ಕಡೆ ಬತ್ತದ ರಾಸಿ ಕಣದಲ್ಲಿದ್ದಾಗ ೧೧ ದಿನ ಗ್ರಾಮದೇವತೆಯ ಪೂಜೆ ಮಾಡಿಯೇ ಬತ್ತವನ್ನು ಮನೆಗೆ ತರುತ್ತಾರೆ. ಇದಕ್ಕೆ 'ಸುಗ್ಗಿ ಹಬ್ಬ' ಎನ್ನುತ್ತಾರೆ. (ಎ. ಹಿರಿಯಣ್ಣ)

ಆಂಧ್ರದ ಗೋದಾವರಿ, ಮಚಲಿಪಟ್ಟಣ, ಕೊಕನಾಡುಗಳಲ್ಲಿ, ಗ್ರಾಮದೇವತೆಯ ಜಾತ್ರೆಯ ಸಂದರ್ಭದಲ್ಲಿ ಮಾದಿಗ ಬಲಿಕೊಟ್ಟ ಕೋಣನ ರಕ್ತದಲ್ಲಿ ೯ ವಿಧದ ಧಾನ್ಯಗಳನ್ನು ಹಾಕಿ ದೇವಿಯ ಮುಂದೆ ಇಟ್ಟು ೩ ದಿನ ಬಾಗಿಲು ಮುಚ್ಚುತ್ತಾರೆ. ೪ನೇ ದಿನ ಪಾತ್ರೆಯ ಕಾಳನ್ನು ತೆಗೆದು ತೊಳೆದು ಯಾವ ಧಾನ್ಯ ಮೊಳಿಕೆಯೊಡೆದಿರುತ್ತದೆಯೋ ಅದನ್ನು ದೇವಿ ಬಿತ್ತಲು ಆದೇಶಿಸಿರುವಳೆಂದು ಭಾವಿಸುವರು. (ವೈಟ್‌ಹೆಡ್)

ಆಂಧ್ರದ ಭೀಮದೊರೆ ಎಂಬ ಊರಲ್ಲಿ ಸುಗ್ಗಿಯ ಜೊತೆ ಊರಮ್ಮನ ಹಬ್ಬದ ನೇರ ಸಂಬಂಧಯಿರುವ ಬಗ್ಗೆ ಉದಾಹರಣೆ ಇದೆ. ನವಂಬರ, ಡಿಸೆಂಬರನ ಸುಗ್ಗಿಯ ವೇಳೆಯಲ್ಲಿ ಮಂಗಳವಾರ ಈ ಹಬ್ಬ ನಡೆಯುತ್ತದೆ. ಊರ ಮಧ್ಯೆ ಒಲೆ ಹೂಡಿ ಅರ್ಧಚೀಲ ಅಕ್ಕಿಯನ್ನು ಬೇಯಿಸುತಾರೆ. ದೇವಿಯ ಮುಂದೆ ಇದನ್ನು ಪೇರಿಸಿ ತುದಿಗೆ ಅಕ್ಕಿಯ ಹಿಟ್ಟಿನ ಆರತಿಯಲ್ಲಿ ದೀಪ ಉರಿಸುವರು. ಅನ್ನದ ಪೂರ್ವಕ್ಕೆ ಅಗಸನೊಬ್ಬ ಹೆಂಡ ಸುರಿದು ಕರ್ಪುರ ಬೆಳಗುವನು. ನೆರೆದ ಜನವೆಲ್ಲ ನಮಸ್ಕರಿಸುವರು. ೨೦೦ರವರೆಗೆ ಕುರಿ ಟಗರುಗಳನ್ನು ಕೊಂದು ಅನ್ನದ ಮೇಲೆ ರಕ್ತವನ್ನು ಸೇರಿಸುವರು. ಪ್ರತಿಯೊಬ್ಬ ರೈತ ತನ್ನ ಮನೆಯ ಮಾದಿಗನಿಗೆ ಆ ಗುಂಪಿನಿಂದ ಒಂದು ಹಿಡಿ ಅನ್ನ ತೆಗೆದು ಕೊಡುವನು. ಮಾದಿಗ ಒಡೆಯನ ಹೊಲದಲ್ಲಿ ಅದನ್ನು ಚರಗ ಚಲ್ಲುವನು.

ಪ್ರತಿಯೊಂದು ಸ್ತ್ರೀದೈವದ, ಪೂಜೆ, ವಿಧಿಯಾಚರಣೆ, ಹಬ್ಬ, ಜಾತ್ರೆ ಉತ್ಸವಗಳಲ್ಲಿ ಕೃಷಿ ಸಂಬಂಧಿಯಾದ ಫಲವಂತಿಕೆಯನ್ನು ಸೂಚಿಸುವ ಒಂದಿಲ್ಲೊಂದು ಘಟನೆ, ಪ್ರಸಂಗ ಇದ್ದೇ ಇರುತ್ತವೆ. ಅವನ್ನೆಲ್ಲ ಅಲ್ಲಿ ದಾಖಲಿಸುವುದು ಕಷ್ಟ ಸಾಧ್ಯ, ಅನಗತ್ಯ ಕೂಡ.

**ತಾಯಿಪಂಥ, ದಲಿತರು :**

ಮಾತೃದೈವ ದಲಿತರ ಕೃಷಿ ಸಂಸ್ಕೃತಿಯ ಸೃಷ್ಟಿ. ಭಾರತೀಯ ಸಂಸ್ಕೃತಿಗೆ ಸ್ತ್ರೀ ದೈವವನ್ನು ಸಮರ್ಪಿಸಿದ್ದೇ ದಲಿತ ಸಂಸ್ಕೃತಿ. ಹಾಗಾಗಿ ದಲಿತ ಸಂಸ್ಕೃತಿ ಅಧ್ಯಯನವೆಂದರೆ ಅಮ್ಮನ ಪಂಥದ ಅಧ್ಯಯನವೆನ್ನುವಷ್ಟರ ಮಟ್ಟಿಗೆ ಅದಕ್ಕೆ ಕರುಳು ಬಳ್ಳಿ ನಂಟು, ದುರ್ಗೆ, ಗೌರಿ, ಲಕ್ಷ್ಮಿ, ಸರಸ್ವತಿ, ಕಾಳಿಗಳು ಈಗ ದೇಶವ್ಯಾಪಿ ದೈವಗಳಾಗಿದ್ದರೂ, ತಮ್ಮ ಪ್ರಾಚ್ಯ ಸ್ವರೂಪವನ್ನು ದಲಿತರ ಬದುಕಿನ ಮಧ್ಯೆ ಉಳಿಸಿಕೊಂಡಿವೆ.

ಭಾರತದ ಪ್ರಗತಿಯು ಅಂತಿಮವಾಗಿ ಕೃಷಿಯನ್ನು ಅವಲಂಬಿಸುವಲ್ಲಿ ಸ್ಥಗಿತಗೊಂಡುದರಿಂದ, ಅಮ್ಮನ ಪಂಥ ರಾಷ್ಟ್ರ ವ್ಯಾಪಿಯಾಗಿ ಹರಡಲು ಕಾರಣವಾಯಿತು. ಊಳಿಗಮಾನ್ಯ ಕಾಲದಲ್ಲಂತೂ 'ಆಕೆ' ಕೃಷಿಯೇತರ ಆಶಯಗಳಿಗೂ ಕೇಂದ್ರ ನೆಲೆಯಾದಳು. ಕೋಟೆ ಕೊತ್ತಲನ್ನೂ ರಕ್ಷಿಸುವ, ಯುದ್ಧದಲ್ಲಿ ಜಯವನ್ನು ತಂದು ಕೊಡುವ, ಸಾಂಪ್ರದಾಯಿಕ ರೋಗಗಳನ್ನು ಹೊಡೆದೋಡಿಸುವ, ಕ್ಷಾಮಡಾಮರ, ಬರಬೇಗುದಿಗಳನ್ನು ನಿವಾರಿಸುವ ಪ್ರಮುಖ ದೈವವಾದಳು. ಏಕೆಂದರೆ ಇದಾವುದನ್ನೂ ಪುರುಷದೈವಗಳು ಪೂರೈಸುವಷ್ಟು ಸಬಲವಾಗಿರಲಿಲ್ಲ!

ಜೈನ, ಬೌದ್ಧರಂಥ ಅವೈದಿಕರಲ್ಲೂ ತಾಯಿಪಂಥ ಪ್ರವೇಶ ಪಡೆದು ಆಕಾರ 'ತಾಳಿದ' ರೀತಿಯೂ ಅದ್ಭುತವೇ.

ತಾಯಿಪಂಥ ಬರಿ ಆರಾಧನೆಯ ಮಟ್ಟಕ್ಕೆ ನಿಲ್ಲದೆ ತಾತ್ತ್ವಿಕ ಕ್ಷೇತ್ರದಲ್ಲಿ. 'ತಾಂತ್ರಿಕ ಸಿದ್ಧಾಂತ'ವಾಗಿ, 'ಯೋಗ' ದರ್ಶನವಾಗಿ ಬೆಳೆದುದು ಇದರ ಸಾಮರ್ಥ್ಯಕ್ಕೆ ಸಾಕ್ಷಿ. ಈ ಕ್ಷೇತ್ರಗಳಲ್ಲಿ ನಮ್ ಹಿಂದಿನ ಜನ ನಡೆಸಿರುವ ಶೋಧನೆಗಳು ದಂಗುಬಡಿಸುತ್ತವೆ.

ಒಟ್ಟಾರೆ ತಾಯಾಳಿಕೆಯ ಕಾಲ ದೀರ್ಘವಾಗಿತ್ತು, ಬಹುಮುಖಿ ಆಯಾಮಗಳಲ್ಲಿ ಗಾಢ ಪ್ರಭಾವ ಬೀರಬಲ್ಲ ತಾಕತ್ತು ಪಡೆದಿತ್ತು. ತಾಯಿ ಪಂಥವನ್ನು ವೈದಿಕ ಸಂಸ್ಕೃತಿ ತನ್ನೊಳಗೆ ಸೇರಿಸಿಕೊಳ್ಳುವ ಮೂಲಕ ದಲಿತರ ಮೇಲೆ ಯಜಮಾನ್ಯವನ್ನು ಸ್ಥಾಪಿಸಲು ಸಾಧ್ಯವಾಯಿತು. ಶ್ರೇಣೀಕೃತ ವ್ಯವಸ್ಥೆಯಲ್ಲಿ ದಲಿತೇತರ ಜಾತಿಗಳ ಕೈಗೆ ಅಮ್ಮನ ಪೂಜಾರಿಕೆ ಹಸ್ತಾಂತರವಾಯಿತು. ಇಷ್ಟೆಲ್ಲ ಆದರೂ, ಪ್ರಾಚ್ಯರೂಪಿ ಅಮ್ಮ ದಲಿತರ ಮಧ್ಯೆ ಉಳಿದಳು.

ಈಗಾಗಲೇ ತಾಯಿಪಂಥಕ್ಕೂ, ದಲಿತರಿಗೂ ಇರುವ ಸಂಬಂಧವನ್ನು ಸಾಕ್ಷಿಸುವ ಹಲವಾರು ನಿದರ್ಶನಗಳನ್ನು ನೀಡಲಾಗಿದೆ. ಇಲ್ಲಿ ಇನ್ನೂ ಕೆಲವನ್ನು ನೋಡಬೇಕು–

೧) ದಕ್ಷಿಣ ಕನ್ನಡ ಜಿಲ್ಲೆಯ ಮೇರರು ಅಸ್ಪೃಶ್ಯರು. ಮೇರರ ಪ್ರಕಾರ ಮೂಲ ಹೆಣ್ಣು ಹೊನ್ನಿ. ಆಕೆಯ ಮಗ(ಳು?) ಕಾಡ್ಯ. ಇವರು ಮಾಡುವ 'ಕಾಡ್ಯನಾಟ', ನಾಗಮಂಡಲ ಎಂಬ ಕಾಳಿಂಗ ಸರ್ಪ ಪೂಜೆ. ಇದು ತಾಂತ್ರಿಕ ಆಚರಣೆಯಾಗಿದ್ದು, ನಾಗನನ್ನು ಶಕ್ತಿರೂಪದಲ್ಲಿ (ಭಗವತಿ) ಪೂಜಿಸಲಾಗುತ್ತದೆ. ಕೆಲವೆಡೆ ಹುತ್ತಗಳ ಪೂಜೆ ಇದೆ. ಮಂಡಲ ಬರೆದು ಕಲಶ ಸ್ಥಾಪಿಸುವುದು, ಅಮ್ಮನನ್ನು ಸ್ಥಾಪಿಸಿದಂತೆಯೇ. ಪೂಜುವ 'ವೈದ್ಯ' ಸ್ತ್ರೀ ರೂಪಿಯಾಗಬೇಕೆಂಬ ನಿಯಮವಿದೆ. ಕಾಡ್ಯನಾಟ ಬುಡಕಟ್ಟು ಜೀವನ ಕ್ರಮದಿಂದ ಕೃಷಿಕ ಮಂಡಲಕ್ಕೆ ಪ್ರವೇಶಿಸುವುದರ ಸೂಚನೆ. (ವಿವರಗಳಿಗೆ ನೋಡಿ: "ಕಾಡ್ಯನಾಟ" ನಾವಡಾ ದಂಪತಿ)

೨) ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸುಮಾರು ೩೦೦ ಭೂತಗಳ ಆರಾಧನೆ ನಡೆಯುತ್ತಿದ್ದು ಇವುಗಳಲ್ಲಿ ಹೆಚ್ಚಿನವು ಸ್ತ್ರೀ ದೈವಗಳು. ಮಾಸ್ತಿ, ಮಾರಿಯಮ್ಮ, ಮಾಂಕಾಳಿ, ನಾಗೇಶ್ವರಿ,

ಕನ್ಯಾಕುಮಾರಿ, ಕಾಳಭೈರವಿ, ಚಾಮುಂಡಿ, ಗಾಂಧಾರಿ, ಭಗವತಿ ಇತ್ಯಾದಿ. ಅಕಾಲ ಮರಣ ಹೊಂದಿದ ಮಾನವ ಅಥವಾ ಪ್ರಾಣಿ ಭೂತವಾಗಿ ಜನ ಸಮುದಾಯವನ್ನು ರಕ್ಷಿಸುತ್ತದೆಂಬ ನಂಬಿಕೆ ಇದರ ಆಧಾರ. ಈ ಆಚರಣೆ ಎಷ್ಟು ಪ್ರಭಾವಶಾಲಿಯಾಗಿದೆ ಎಂದರೆ ಬ್ರಾಹ್ಮಣರೂ ಇವನ್ನು ಪೂಜದೆ ಇರಲಾಗಲಿಲ್ಲ. 'ಭೂತ'ಗಳಾಗುವವರು ('ದೈವ' ಎಂಬುದೇ ಸರಿಯಾದ ಪದ ಎನ್ನಲಾಗಿದೆ) ನಲಿಕೆ, ಪಂಬದ, ಪರವ, ಮೇರ ಮೊದಲಾದ, ಅಸ್ಪೃಶ್ಯರು. ಹಾಗೆ ನೋಡಿದರೆ ದ್ರಾವಿಡ ಸಂಸ್ಕೃತಿಯ ದೈವಗಳೆಲ್ಲ ಭೂತಗಳಾಗಿದ್ದುವೇ. ಭೂತನಾಥ "ಶಿವ" ಬಹುಶಃ ಭೂತವೇ. ಶವದಿಂದ ಶಿವ ಹುಟ್ಟಿದೆ ಎಂಬ ಪುರಾಣಗಳ ಹೇಳಿಕೆ ಈ ಊಹೆಗೆ ಆಧಾರ. ಸಿಂಧೂ ನಾಗರಿಕತೆಯಲ್ಲೂ ಭೂತಾರಾಧನೆ ಇತ್ತೆಂದು ಫಾದರ್ ಹೆರಾಸ್ ತರ್ಕಿಸಿರುವುದು ಸೂಕ್ತವೇ ಇದೆ.

ಭೂತರಾಧನೆಯಲ್ಲಿ ಹೇಳುವ ಪಾಡ್ದನಗಳ ಕತೆಗಳು ದಲಿತರ ಪ್ರಾಚ್ಯ ಜೀವನ ಸಂಸ್ಕೃತಿಯನ್ನು ಕಲ್ಪಿಸಿಕೊಳ್ಳುವ ನೆರವಾಗುತ್ತವೆ. ಉದಾಹರಣೆಗೆ, ಪಂಜುರ್ಲಿ ಭೂತದ ಕತೆಯಲ್ಲಿ ಸೋದರ ಸೋದರಿಯರು ಮದುವೆಯಾಗುವ ಪ್ರಸಂಗವು ಏಂಗೆಲ್ಸ್ ಹೇಳುವ ಪ್ರಾದಿಮ 'ರಕ್ತ ಸಂಬಂಧಿ ಕುಟುಂಬ' ಪದ್ಧತಿಯೇ. (ಮುಂದೆ ನೋಡಿ)

೩) ಹರಪನಹಳ್ಳಿ ತಾಲೂಕು ಅರಸೀಕೆರೆ ಎಂಬ ಗ್ರಾಮದಲ್ಲಿ ಪ್ರತಿವರ್ಷ ಮಾದಿಗರ ಕೇರಿಯ ದಂಡಿನ ದುರುಗಮ್ಮನ ಹಬ್ಬ 'ಜಾತ್ರೆ' ಯಂತೆ ಜರುಗುತ್ತದೆ. ದೇವರು ಹೊತ್ತ ಮಾದಿಗ ಹೆಂಗಸರು (ಮಾತಂಗಿಯರು) "ದುರುಗೇರಾ"ಗುತ್ತಾರೆ. ಇದೇ ಮಾದಿಗ ಕುಲದ ಪೂಜಾರಿ ಅಮ್ಮನ ಕೇಲು ಹೊತ್ತು 'ಹೊಳೆಯಿಂದ' ಗುಡಿಗೆ ಬರುವ ದಾರಿಯಲ್ಲಿ ಎಲ್ಲ ಜಾತಿ ಜನ ಅಡ್ಡ ಮಲಗುತ್ತಾರೆ. ಅವರನ್ನು ತುಳಿದುಕೊಂಡು ಬರುತ್ತಾನೆ ಪೂಜಾರಿ. ಆಗ ಆತ ಅಮ್ಮನ ಸೀರೆಯನ್ನು 'ಗೊಂಗಡಿ'ಯಂತೆ ಹೊದ್ದಿರುತ್ತಾನೆ. ಮುಖಕ್ಕೆ ಕುಂಕುಮ, ಅರಿಶಿಣ ಬಳಿದುಕೊಂಡು, ತಲೆಗೂದಲು ಬಿಟ್ಟುಕೊಂಡ 'ದುರುಗೇರು' ಅವನ ಜತೆಗಿರುತ್ತಾರೆ.

ಅಂದು ಸಂಜೆ 'ದುರುಗೇರ ಊಟ' ಗರ್ಭಗುಡಿಯ ಹೊರಗೋಣೆಯಲ್ಲಿ ಪೇರಿಸಿಟ್ಟು ಪೂಜಿಸಲ್ಪಡುವ ಅನ್ನದ ರಾಸಿಯನ್ನು ದುರುಗೇರು ಊಟ ಮಾಡಲು ಪ್ರಾರಂಭಿಸುತ್ತಾರೆ. ಅವರು ಎಂಜಲು ಮಾಡಿದ ಈ ರಾಶಿಯನ್ನು ಸಾಮೂಹಿಕ ಭೋಜನದ ಅಡುಗೆಯಲ್ಲಿ ಪ್ರಸಾದದಂತೆ ಬೆರೆಸುತ್ತಾರೆ.

ಮಾತೃ ಪ್ರಧಾನ ಸಮಾಜದಲ್ಲಿ ತಾಯಿಯೆ ಕುಟುಂಬದ ಮತ್ತು ಸಮಾಜದ 'ಕೇಂದ್ರ'. ಆಕೆಯ 'ದುರುಗೆ'. ಆಗ ಇಡಿ ಬುಡಕಟ್ಟು (ಅಥವಾ ಕುಲ) ಹಂಚಿಕೊಂಡು ಊಟ ಮಾಡುತ್ತಿದ್ದುದನ್ನೆ 'ದುರುಗೇರ ಊಟ' ಧ್ವನಿಸುವುದು. ದೂರದ ಅನೇಕ ಗ್ರಾಮನಗರಗಳಿಂದ ಜನ ಈ ಸಂದರ್ಭದಲ್ಲಿ ನೆರೆದಿರುತ್ತಾರೆ.

ಹಳ್ಳಿ ಗ್ರಾಮಗಳ ಅಮ್ಮಂದಿರ ಜಾತ್ರೆಗಳಲ್ಲಿ ದಲಿತರ ಮುಖ್ಯ ಪಾತ್ರದ ಕುರಿತು ಪ್ರಸ್ತಾಪಿಸಲಾಗಿದೆ. ಜಾತ್ರೆಯ ಪ್ರಧಾನ ಆಶಯವಾದ ಕೋಣನ ಬಲಿ ನೀಡಿ ಚರಗ ಚಲ್ಲುವ ಕೆಲಸ ದಲಿತರದ್ದೇ.

ಮದ್ರಾಸಿನ ಕರಿದೇವತೆ ಎಗಟ್ಟಾ ಜಾತ್ರೆಯಲ್ಲಿ ಪರ್ರೈಯನ್‌ನನ್ನು (ಹೊಲೆಯ) ಆಕೆಯ ಗಂಡನನ್ನಾಗಿ ಮಾಡುತ್ತಾರೆ. ಅವನೇ ಆಕೆಗೆ ತಾಳಿ ಕಟ್ಟುತ್ತಾನೆ. ಕಾಂಜೀವರಂ, ಕುಂಭಕೋಣಂ, ಶ್ರೀವಿಲ್ಲಿ ಪುತ್ತೂರುಗಳಲ್ಲಿ ಪರ್ರೈಯಾನ್‌ರೇ ತೆರೆಳೆಯುತ್ತಾರೆ.

ಥರ್‌ಸ್ಟನ್ ಬರೆಯುತ್ತಾರೆ "More usually one particular mother is worshipped at the paraiya shrine, she is then called the gramdevata or village goddess of the

particular hamlet. (VI-105) ಊರಿನ ಅಮ್ಮ ಮೊಟ್ಟ ಮೊದಲು ಹೊಲಗೇರಿಯಲ್ಲಿ ಹುಟ್ಟಿದಳು ಎಂದು ಇಲ್ಲಿ ಹೇಳಲಾಗಿದೆ.

ಕೇರಳದ ದಲಿತರಾದ ಚೆರುಮಾನ್‌ರು ಅಲ್ಲಿಯ ಪ್ರತಿ ಗ್ರಾಮದ ಭಗವತಿ ಅಥವಾ ಕಾಳಿ ಎಂಬ ಗ್ರಾಮ ದೈವಗಳ ಪೂಜಾರಿಗಳು.

ಆಷಾಢ ತಿಂಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಲಿಕೆಯವರು ಭೂತವೇಷ ಹಾಕಿ ಊರಿನ ಜನ, ದನ, ಪೈರುಗಳಿಗೆ,ಸಾಂಕ್ರಾಮಿಕ ರೋಗ (ಮಾರಿ) ಬರದಂತೆ 'ಕುಣಿಯುವ' ಪದ್ಧತಿ ಇದೆ. ನಲಿಕೆ ಹೆಂಗಸು ತೆಂಬರೆ ಬಾರಿಸುವ ಗತ್ತಿಗೆ ಭೂತಧಾರಿ ಕಳಿಂಜ ಕುಣಿಯುತ್ತಾನೆ. ಮಾರಿ ಗ್ರಾಮದೇವತೆ ಸಿಡುಬು ಕಾಲಾರಾ, ಪ್ಲೇಗು, ಮುಂತಾದ ರೋಗಗಳಿಗೆ ಕಾರಣಳು ಆಕೆಯನ್ನು ತೃಪ್ತಿಪಡಿಸುವುದು ಈ ಕುಣಿತದ ಉದ್ದೇಶವೆಂದು ವಿವೇಕ ರೈ ಬರೆಯುತ್ತಾರೆ. ("ಆನ್ವಯಿಕ ಜಾನಪದ") ಇದನ್ನು ಇವರು, 'ಮಾಂತ್ರಿಕ ಜನಪದ ಕಲೆ' ಎಂದಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯ ಹಲವು ಕಡೆ ಇರುವ 'ಹೊನ್ನಾರಾಕಾ' ದೈವಗಳಿಗೆ 'ಹೊಲೆವಟ್ರ' ದೇವರೆಂದೂ ಕರೆಯುತ್ತಾರೆ. ಕೆಲವು ಕಡೆ ನಾಡವರು ಪೂಜಾರಿಗಳು.

**ತಾಯಾಳಿಕೆ :**

ದಲಿತ ಸಂಸ್ಕೃತಿಯ ವಿವೇಚನೆಯ ಈ ಸಂದರ್ಭದಲ್ಲಿ ಮಾತೃಪಂಥ ಮತ್ತು ತಾಯಾಳಿಕೆಯ ಚರ್ಚೆ ಅನಿವಾರ್ಯ. ಇಲ್ಲಿ ಒಂದು ಸ್ಥೂಲ ನೋಟವನ್ನಷ್ಟೇ ನೀಡಲಾಗಿದೆ.

ಆಸ್ಟ್ರೇಲಿಯಾ, ಆಫ್ರಿಕಾ ಮೊದಲಾದ ಹಲವು ದೇಶಗಳಲ್ಲಿ ಅಸ್ತಿತ್ವದಲ್ಲಿದ್ದ ಆದಿವಾಸಿ ಜನಕುಲಗಳ ಸಾಮಾಜಿಕ ರಚನೆಯನ್ನಾಧರಿಸಿ, ಏಂಗೆಲ್ಸ್, ಆದಿಮಾನವ ಜೀವನದಲ್ಲಿ 'ಸ್ವಚ್ಛಂದ ಲೈಂಗಿಕ' ವ್ಯವಸ್ಥೆಯಿತ್ತು ಎಂಬ ನಿರ್ಣಯಕ್ಕೆ ಬರುತ್ತಾರೆ. ಹಿಂಡಾಗಿ ಬದುಕುವ ಸಸ್ತನಿ ಪ್ರಾಣಿಗಳಿಗೆ ಲೈಂಗಿಕ ಅಸೂಯೆ ಇಲ್ಲದಂತೆ ಬದುಕುವುದು ಅಗತ್ಯವಿತ್ತು. ಇಂಥ ಸ್ವೇಚ್ಛಾ ಲೈಂಗಿಕ ಸಂಬಂಧವಿದ್ದ ಕಾಲದಲ್ಲೇ, ಮಾನವ, ಪ್ರಾಣಿ ಅವಸ್ಥೆಯಿಂದ ಬೇರಾದ. ಇದರಿಂದ ೧) ರಕ್ತ ಸಂಬಂಧಿ ಕುಟುಂಬ. ೨) ಪುನಾಲುಆನ್ ಕುಟುಂಬ ೩) ಯುಗ್ಮ ಕುಟುಂಬ ರೂಪಗಳು, ಆರ್ಥಿಕ, ಸಾಮಾಜಿಕ ಪರಿವರ್ತನೆಗೆ ಅನುಗುಣವಾಗಿ, ಹಂತ ಹಂತವಾಗಿ ಬೆಳೆದು ಬಂದವು. ಪೀಳಿಗೆಗೆ ಹೊಂದಿಕೊಂಡು ಕುಲದ ಇಡೀ ಅಜ್ಜ ಅಜ್ಜಿಯರು, ತಂದೆ ತಾಯಂದಿರು, ಸೋದರ ಸೋದರಿಯರು ಪತಿ ಪತ್ನಿಯರಾಗಿದ್ದುದೇ 'ರಕ್ತ ಸಂಬಂಧಿ ಕುಟುಂಬ'. ಹವಾಯ್‌ನಲ್ಲಿ ಈ ಪದ್ಧತಿ ಇತ್ತು. ಆನಂತರದ ವ್ಯವಸ್ಥೆಯೆ ಪುನಾಲುಆನ್ ಕುಟುಂಬ. 'ಪುಲಾನು ಆನ್' ಎಂದರೆ 'ನಿಕಟ ಸಹವರ್ತಿ'. ಇಲ್ಲಿ ಸ್ವಂತ ಸೋದರ ಸೋದರಿಯರ ಸಂಬಂಧ ತಪ್ಪಿತು. ಒಂದು ಗುಂಪಿನ ಸೋದರರೆಲ್ಲ ಇನ್ನೊಂದು ಗುಂಪಿನ ಸೋದರಿಯರ ಗಂಡಂದಿರು. ಆದರೆ ಇವರೆಲ್ಲ ಸ್ವಂತ ಸೋದರರೊ ಸೋದರಿಯರೊ ಆಗಿರಬೇಕಿರಲಿಲ್ಲ. ತಾಯಿಯ ಸೋದರಿಯರ ಗಂಡಂದಿರು ತಾಯಿಗೂ ಗಂಡಂದಿರೇ. ಇದೇ ರೀತಿ ತಂದೆಯ ಸೋದರರ ಪತ್ನಿಯರು ತಂದೆಗೂ ಪತ್ನಿಯರೇ, ಆಗಿನ ಹಕ್ಕು ಹಾಗಿತ್ತು. ನಮ್ಮಲ್ಲಿ ಅಪ್ಪ, ಚಿಕ್ಕಪ್ಪ, ದೊಡ್ಡಪ್ಪ, ಅವ್ವ ಚಿಗವ್ವ, ದೊಡ್ಡವ್ವ ಎಂಬ ಸಂಬಂಧ ಉಳಿದಿರುವುದು ಈ ಹಿನ್ನೆಲೆಯಲ್ಲಿ. ಆದರೆ ತಾಯಿಯ ಸೋದರರ ಮಕ್ಕಳು, ತಂದೆಯ ಸೋದರಿಯರ ಮಕ್ಕಳು ಸೋದರಳಿಯ, ಸೋದರ ಸೊಸೆಯಾದರು.

ಪುನಾಲುಆನ್ ಕುಟುಂಬದಿಂದಲೇ 'ಗೋತ್ರ ಪದ್ಧತಿ' ಹುಟ್ಟಿತು. ತಂದೆ ಯಾರೆಂದು ಗೊತ್ತಿರುವುದಿಲ್ಲವಾದ್ದರಿಂದ ತಾಯಿಯ ಕಡೆಯಿಂದಲೇ ಗೋತ್ರವನ್ನು ಗುರುತಿಸಲಾಗುತ್ತಿತ್ತು. ಇದೇ ಮಾತೃಮೂಲೀಯ ಕುಟುಂಬ ರೂಪ. ವಂಶಾವಳಿಯನ್ನು ತಾಯಿಯಿಂದ ಗುರುತಿಸುವುದು ಮತ್ತು ಇದರಿಂದ ಹುಟ್ಟುವ ಉತ್ತರಾಧಿಕಾರವೇ 'ಮಾತೃ ಅಧಿಕಾರ'.

ಪರಸ್ಪರ ವಿವಾಹವಾಗಲು ಅವಕಾಶವಿರದಂಥ ತಾಯಿಯ ಕಡೆಯ ರಕ್ತ ಸಂಬಂಧಿಗಳ ಕಟ್ಟುನಿಟ್ಟಾದ ಗುಂಪು "ಗೋತ್ರ". (ಬಳಿ ಬೆಡಗು) ಇದು ಸಾಮಾಜಿಕ, ಧಾರ್ಮಿಕ ಸಂಪ್ರದಾಯಗಳ ಮೂಲಕ ದೃಢಗೊಳ್ಳುತ್ತದೆ.

ನಮ್ಮಲ್ಲಿ ಕುಲ, ಬೆಡಗು, ಗೋತ್ರ, ಬಳಿ, ಟೋಂಟೆ, ಜಾತಿ, ಬುಡಕಟ್ಟು ಈ ಪರಿಭಾಷೆಯ ಬಗ್ಗೆ ಗೊಂದಲಗಳಿರುವುದರಿಂದ ಅಧ್ಯಯನಗಳಿಗೆ ಉಂಟಾಗಿರುವ ಅಡಚಣೆ ಅಪಾರ. ಎಷ್ಟೋ ಸಲ ಕೆಲವರು ಬೆಡಗಿಗೇ ಕುಲವೆಂದಿದ್ದಾರೆ, ಕುಲವನ್ನೇ ಬುಡಕಟ್ಟೆಂದಿದ್ದಾರೆ.

ಬೆಡಗು, ಬಳಿ, ಗೋತ್ರ ಇವೆಲ್ಲ ಒಂದೇ. ಇಂಥ ಹಲವಾರು ಬಳಿಗಳು ಸೇರಿ 'ಕುಲ' (clan)ವಾಗುತ್ತದೆ. ಕುಲದಲ್ಲಿ ವಿವಾಹಯೋಗ್ಯ ಬೆಡಗು (ಬಳಿ)ಗಳಿರುತ್ತವೆ. ಆದರೆ ಫ್ರಾತ್ರಿ ಎಂದರೆ ವಿವಾಹವಾಗದ ಕುಲಗಳ ಗುಂಪು. (ಸೋದರ ಗೋತ್ರಗಳ ಗುಂಪು) ಈ ಅರ್ಥದಲ್ಲಿ ಕುಲವೆಂದರೆ ಹಲವು ಫ್ರಾತ್ರಿಗಳ ಗುಂಪಾಗುತ್ತದೆ. ಕೆಲವು ಸಲ ನಾವು ಕುಲವನ್ನು 'ಜಾತಿ' ಎಂದು ಬಳಸುವುದೇ ಈ

ಕಾರಣಕ್ಕಾಗಿ. ಆದರೆ ಇದು ಸರಿ ಅಲ್ಲ. ಹಲವು ಕುಲಗಳು (clans) ಸೇರಿ ಒಂದು ಬುಡಕಟ್ಟು ಆಗುತ್ತದೆ. ನಮ್ಮಲ್ಲಿ ಈ ಬುಡಕಟ್ಟೇ 'ಜಾತಿ'ಯ ರೂಪ ತಾಳುತ್ತದೆ.

ಒಂದು ಗೋತ್ರದ ಜನ ಸಂಪೂರ್ಣ ನಾಶಾವಾದಾಗ ಆ ಫ್ರಾತ್ರಿಗೆ ಇತರ ಫ್ರಾತ್ರಿಗಳಿಂದ ಇಡೀ ಗೋತ್ರವನ್ನೇ ವರ್ಗಾಯಿಸಲಾಗುತ್ತಿತ್ತು. ಹಾಗಾಗಿ ವಿವಿಧ ಬುಡಕಟ್ಟುಗಳಲ್ಲಿ ಒಂದೇ ಹೆಸರಿನ ಗೋತ್ರವಿರುತ್ತವೆಂದು ಏಂಗೆಲ್ಸ್ ಹೇಳುತ್ತಾರೆ. ("ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯಗಳ ಉಗಮ")

ನಮ್ಮಲ್ಲಿ ಒಂದು ಜಾತಿಯ ಒಳಗೆ ಹಲವಾರು ಗೋತ್ರಗಳಿರುವುದನ್ನು ಕಾಣುತ್ತೇವೆ. ಸಗೋತ್ರ ವಿವಾಹವಂತೂ ನಿಷಿದ್ಧ. ಆದರೆ ಜಾತಿಯ ಒಳಗೇ ವಿವಾಹವಾಗಬೇಕು ಎಂದರೇನು? ಒಂದು ಜಾತಿ ಒಂದು ಬುಡಕಟ್ಟಾಗಿತ್ತು, ಎಂದಿಟ್ಟುಕೊಂಡರೆ ಬುಡಕಟ್ಟಿನ ಒಳಗೇನೆ ವಿವಾಹವೇರ್ಪಡುವುದು ಕಡ್ಡಾಯವೆಂಬ ನಿಯಮವಿದ್ದುದು, ಆಧಾರವಾಗುತ್ತದೆ. ಆದರೆ ಬುಡಕಟ್ಟುಗಳ ನಡುವಿನ ಸಂಬಂಧವನ್ನು (ಜಾತಿಗಳು) ಸಂಪೂರ್ಣವಾಗಿ ನಿಷೇಧಿಸಲಾಯಿತೆಂದೇ ಅರ್ಥ. ಇದೇ ಭಾರತೀಯ ಸಮಾಜದ ಲಕ್ಷಣ: ಬುಡಕಟ್ಟಿನೊಳಗಿನ ಸಂಬಂಧ ಗಾಢವಾದುದ್ದು, ಬುಡಕಟ್ಟುಗಳ ನಡುವೆ ಸಂಬಂಧ ಕಡಿದು ಹೋದುದು. ಜಾತಿಯ ಈ ಲಕ್ಷಣದ ಭೀಕರ ಪರಿಣಾಮವೆಂದರೆ ನೂರಾರು ಅಲ್ಲ ಸಾವಿರಾರು ಪ್ರತ್ಯೇಕ ಸಾಮಾಜಿಕ ಘಟಕಗಳು ಪರಸ್ಪರ ಸೇರಲಾರದ ವರ್ತುಲಗಳಾದವು. ಇವುಗಳ ಮಧ್ಯೆ ಶ್ರೇಣಿಕರಣ ಹುಟ್ಟಿದುದೇ ಸಾಮಾಜಿಕ ವಿಷಮತೆಯ ನಗ್ನ ಚಿತ್ರ. ಇದು ಚರಿತ್ರಕಾಲದ ವರ್ಗ ಸಮಾಜದ ಅಡಿಪಾಯವಾಯಿತು. ಇದನ್ನು ಯಾವ ಕ್ರಾಂತಿಯೂ ನಾಶಮಾಡಲು ಶಕ್ಯವಾಗಲಿಲ್ಲ. 'ಜಾತಿ–ನಾಶ'ವೆಂದಾಗ ಜಾತಿಯ ಆಂತರಿಕ ಪರಂಪರೆ, ಸಂಸ್ಕೃತಿ, ಚಾರಿತ್ರಿಕತೆಗಳ ನಾಶವೋ, ಜಾತಿಗಳ ನಡುವಿನ ಸಂಬಂಧದ ನಾಶವೋ ಎಂಬ ಪ್ರಧಾನ ಪ್ರಶ್ನೆ ಇದೆ. ಜಾತಿಯ ಆಂತರಿಕ ರಚನೆಯನ್ನು ಉಳಿಸಿಕೊಂಡು, ಜಾತಿಗಳ ಅಂತರವನ್ನು ತೊಡೆದು ಹಾಕಬೇಕೆನ್ನುವುದು ಸಾಧುವೇ? ಸಾಧ್ಯವೇ?

ಬುಡಕಟ್ಟುಗಳು ಒಂದರೊಳಗೊಂದು ಬೆರೆತಾಗ ಮಾತ್ರ ರಾಷ್ಟ್ರೀಯತೆ ಹುಟ್ಟುತ್ತದೆಂದು ಏಂಗೆಲ್ಸ್ ಹೇಳುತ್ತಾರೆ. ಗ್ರೀಕ, ರೋಂ ಮತ್ತು ಯುರೋಪಿನ ರಾಷ್ಟ್ರೀಯತೆಗಳು (ನ್ಯಾಶನಾಲಿಟಿ) ಹುಟ್ಟಿದ್ದೇ ಹೀಗೆ. ಆದರೆ ನಮ್ಮಲ್ಲೇನಾಯಿತು? ಕರ್ನಾಟಕವನ್ನು, 'ಕನ್ನಡ ರಾಷ್ಟ್ರೀಯತೆ' ಎಂದು ಕರೆಯುವಲ್ಲಿ ಅನೇಕ ತೊಡಕುಗಳಿವೆ. ಬುಡಕಟ್ಟುಗಳು ನಾಶವಾಗದೇ, ಜಾತಿ ಸ್ವರೂಪ ಪಡೆದುದರಿಂದ ರಾಷ್ಟ್ರೀಯ ಜನತೆಯೆ ಉದಯವಾಗಲಿಲ್ಲ. ಹಿಂದೊಮ್ಮೆ ನಡೆದುಹೋದ (ನಿಗ್ರೋಯೆಟ್, ಆಸ್ಟ್ರಲೈಡ್, ಮೆಡಿಟರೇನಿಯನ್ ಜನಾಂಗಗಳು) ಜನಾಂಗೀಯ ಕಲಬೆರಕೆಯ ನಂತರ, ಬುಡಕಟ್ಟು, ಜಾತಿಗಳಲ್ಲಿ ಅಂಥ ಕ್ರಾಂತಿಕಾರಕ ಪರಿವರ್ತನೆ ಆಗಲಿಲ್ಲ. ಗಡಿ ಮತ್ತು ಭಾಷೆಗಳ ಆಧಾರದಲ್ಲಿ ದೇಸೀಯತೆ (ರಾಷ್ಟ್ರೀಯತೆ?) ನಿರ್ಧಾರಗೊಂಡರೂ ಜಾತಿ ಬುಡಕಟ್ಟುಗಳ ವ್ಯಾಪಕ ಸ್ವರೂಪ ನಿರ್ಬಾಧಿತವಾಗುಳಿಯಿತು. ನಾಲ್ಕೂ ದ್ರಾವಿಡ ಭಾಷಿಕ ರಾಜ್ಯಗಳಲ್ಲಿ ಹೊಲೆಯ ಮಾದಿಗ, ಕುರುಬ, ಬೇಡ, ಗೊಲ್ಲ ಉಪ್ಪಾರ, ಮೊದಲಾದ ಜಾತಿ ಜನ ಅಸ್ತಿತ್ವದಲ್ಲಿದ್ದಾರೆ. ಭಾಷೆ, ಪ್ರದೇಶ ಬದಲಿದರೂ ಪರಂಪರೆ, ಸಂಸ್ಕೃತಿಯಿಂದ ಒಂದಾಗಿದ್ದಾರೆ. ಇದು ರಾಷ್ಟ್ರೀಯತೆಯ ಸಮಗ್ರ ಸ್ವರೂಪಕ್ಕೆ ಸವಾಲಿನಂತಿದೆ. ಇಲ್ಲಿಯೇ ಭಾಷೆ, ಗಡಿಗಳ ಗೆರೆಗಳನ್ನು ಮೀರಿ ಐಕ್ಯತೆಯನ್ನು ಸಾಧಿಸಬಲ್ಲ ಸತ್ತ್ವವೂ ಇದೆ.

ವಿವಾಹದ ಸಂದರ್ಭದಲ್ಲಿ ವರ, ವಧುವಿನ ಗೋತ್ರದ ಬಂಧುಗಳಿಗೆ ಅಂದರೆ ಆಕೆಯ ತಾಯಿಗೆ, ತಾಯಿಯ ಕಡೆಯ ಬಂಧುಗಳಿಗೆ ಉಡುಗೊರೆ (ತೆರ) ನೀಡಬೇಕಿತ್ತು ಈ ಪದ್ಧತಿ ನಮ್ಮ ಹಲವಾರು ಜಾತಿ ಸಮಾಜಗಳಲ್ಲಿದೆ. ವಿವಾಹ ವಿಚ್ಛೇದನ, ಮರುಮದುವೆ, ವಿಧವಾವಿವಾಹಗಳಿಗೂ ಮುಕ್ತ ಅವಕಾಶವಿದೆ.

ಮದುವೆಯ ವಿಧಿಯಾಚರಣೆಗಳಲ್ಲಿ ಸೋದರ ಮಾವನ (ತಂದೆಯ ಅಲ್ಲ) ಹಾಜರಿ ಅಗತ್ಯ. ತಾಯಂದಿರ ಪಾತ್ರವಂತೂ ಅನಿವಾರ್ಯ. ಎಷ್ಟೋ ಕಡೆ ವರನಲ್ಲ, ಅವನ ಸೋದರಿ, ತಾಳಿ ಕಟ್ಟುವ ಪದ್ಧತಿ ಇದೆ.

ದಲಿತ ಸಂಸ್ಕೃತಿಯಲ್ಲಿ ಮಾತೃಮೂಲೀಯ ಪದ್ಧತಿ (ಅಳಿಯ ಸಂತಾನ) ಇರುವುದು ಗೊತ್ತಾಗಿದೆ. ಕರಾವಳಿ ಪ್ರದೇಶದ ಹಲವಾರು ದಲಿತೇತರ ಜಾತಿಗಳಲ್ಲಿಯೂ ಇದು ಅಸ್ತಿತ್ವದಲ್ಲಿದೆ. ಬಯಲು ನಾಡಿನಲ್ಲಿ ಇದಿಲ್ಲದಿದ್ದರೂ ಅದರ ಬೇರೆ ಬೇರೆ ಆಕಾರಗಳು ಉಳಿದಿವೆ. ಉದಾಹರಣೆಗೆ ಎಲ್ಲಮ್ಮನ ಪಂಥದಲ್ಲಿ ಪುರುಷನ ಸೊಕ್ಕನ್ನು ಮುರಿಯಲಾಗಿದೆ. ಜೋಗಮ್ಮನಾಗುವ ಗಂಡಸರೆಲ್ಲ ನಪುಂಸಕರಿರುವುದಿಲ್ಲ. ಇತರ ಸ್ತ್ರೀ, ಪುರುಷ ದೈವ ಪಂಥಗಳಲ್ಲೂ ಇಂಥದೇ ಪದ್ಧತಿಗಳಿವೆ. ಇದು ಇಡಿ ದಕ್ಷಿಣ ಭಾರತದ ವೈಶಿಷ್ಟ್ಯ. ನಮ್ಮ ಗ್ರಾಮಗಳ ಒಡತಿ ಸ್ತ್ರೀಯೇ. (ಊರಮ್ಮ) ಒಮ್ಮೊಮ್ಮೆ ಈ ಮಾತೃದೈವಗಳ, ಪ್ರಸರಣವ್ಯಾಪ್ತಿ ಹಿಗ್ಗುತ್ತದೆ. ಎಲ್ಲಮ್ಮ ಮೈಲಾರ, ದುರಗಮ್ಮ, ಮಾರೆಮ್ಮ, ಮುಂತಾದವು ಇಂಥವು.

ಮಾತೃ ಅಧಿಕಾರ ಇದ್ದಲ್ಲಿ ಸ್ತ್ರಿಯರು ಎಷ್ಟು ಪ್ರಬಲರಾಗಿದ್ದರೆಂಬುದನ್ನು ವಿವರಿಸಿ ಈ ಅಧ್ಯಾಯವನ್ನು ಮುಗಿಸಬಹುದು. ಆಷೆರ್‌ರೈಟ್ ಬರೆಯುತ್ತಾರೆ (ಅದೇ ಪು. ೭೦)

ದೊಡ್ಡ ಮನೆಗಳಲ್ಲಿ ಹಲವಾರು ವಂಶಗಳು ಕೂಡಿರುತ್ತಿದ್ದವು. ಇವುಗಳಲ್ಲಿ ಯಾವುದೋ ಒಂದು ವಂಶ (ಗೋತ್ರ) ಮೇಲುಗೈ ಪಡೆದಿರುತ್ತಿತ್ತು. ಈ ವಂಶದ ಸ್ತ್ರೀಯರು ಇತರ ವಂಶದ ಗಂಡಸರನ್ನು ಪತಿಗಳಾಗಿ ಪಡೆಯುತ್ತಿದ್ದರು. ಈ ಸ್ತ್ರೀಯರ ಶಾಸನ ಬಲವಾಗಿತ್ತು. ದಾಸ್ತಾನೆಲ್ಲಾ ಇವರ ಒಡೆತನದಲ್ಲಿರುತ್ತಿದ್ದವು. ತನ್ನ ಪಾಲಿನ ದಾಸ್ತಾನನ್ನು ಒದಗಿಸದ ಸೋಮಾರಿ ಪತಿಯನ್ನು ನಿರ್ದಯವಾಗಿ ಹೊರಹಾಕಲಾಗುತ್ತಿತ್ತು. ಅವನ ಮಕ್ಕಳೆಷ್ಟೇ ಇರಲಿ ತನ್ನ ಸಾಮಾನು ಕಟ್ಟಿಕೊಂಡು ಆತ ಹೊರಬೀಳಬೇಕಿತ್ತು. ಅವನು ತನ್ನ ಸ್ವಂತ ವಂಶಕ್ಕೆ ಹಿಂದಿರುಗುತ್ತಿದ್ದ. ಇಲ್ಲ ಬೇರೊಂದು ವಂಶಕ್ಕೆ ಹೋಗಿ ವಿವಾಹವಾಗಿರುತ್ತಿದ್ದ. ಮುಖ್ಯಸ್ಥನನ್ನೇ ಅವನ ಉಚ್ಚ ಸ್ಥಾನದಿಂದ ಮಹಿಳೆಯರು ಕಿತ್ತು ಹಾಕಬಲ್ಲವರಾಗಿದ್ದರು. ಇದಕ್ಕೆ "ಕೊಂಬು ಕತ್ತರಿಸುವುದು" ಎಂಬ ಹೆಸರಿತ್ತು.

ಈ ಮುಖ್ಯ ವಿವರಗಳು ನಮ್ಮನ್ನು ನೋಡಿಕೊಳ್ಳುವುದಕ್ಕೆ ಪ್ರೇರಿಸುತ್ತವೆ: ಪಾರ್ವತಿ ತನ್ನ ಪತಿಯಾದ ಶಿವನನ್ನು ದುರ್ಗೆಯಾಗಿ ಹತ್ತಿಕ್ಕುತ್ತಾಳೆ, ಇಲ್ಲವೇ ಹತ್ಯೆ ಮಾಡುತ್ತಾಳೆ. ನಮ್ಮ ಊರಮ್ಮಗಳಿಗೆ ಅವರ ಪತಿಯರಲ್ಲಿ ಕೆಲವರನ್ನು (ಕೋಣ, ಹೋತ) ಕೊಲೆ ಮಾಡುವುದು ಕಡ್ಡಾಯವಿತ್ತು. ಶಿವನೇ ಕೋಣಾಸುರನಾಗಿ ದುರ್ಗೆಯಿಂದ ಹತನಾಗುವನು, ಮಲೆಮಾದೇಶ್ವರ ಮಹಾಕಾವ್ಯವನ್ನು ಹಾಡುವವರು ದಲಿತರು. ಈ ಕಾವ್ಯದಲ್ಲಿ ಬೇವಿನ ಕಟ್ಟಿ ಕಾಳಮ್ಮನ ಸಾಲಿನಲ್ಲಿ, ಆಕೆಯ ಒಡೆತನದ, ದರ್ಪದ ವಿವರಗಳು ಮೇಲಿನ ವರ್ಣನೆಗೆ ಅನುಗುಣವಾಗಿವೆ.

ಗೋತ್ರದ ಮಹಿಳೆಯರೆಲ್ಲ ಒಂದೆಡೆ ಸೇರಿರುತ್ತಿದ್ದರು. ಪುರುಷರು ನಾನಾ ಗೋತ್ರಗಳಿಗೆ ಸೇರಿದವರಾಗಿರುತ್ತಿದ್ದರು. ಮಹಿಳೆಯರ ಪ್ರಾಬಲ್ಯಕ್ಕೆ ಇದೇ ಅಡಿಪಾಯವಾಗಿತ್ತು (ಅದೇ ಪು. ೭೧)

ಈ ಮಾತಿಗೆ ನಮ್ಮಲ್ಲಿರುವ ನಿದರ್ಶನಗಳೆಂದರೆ ಗ್ರಾಮದೇವಿಯನ್ನು ಸೋದರಿಯರೆಂದು ಹೇಳುವುದು. ಒಂದೇ ಗುಡಿಯಲ್ಲಿ ಎರಡೋ, ಹಲವೋ ಕಲ್ಲು, ಪ್ರತಿಮೆಗಳಿದ್ದರೆ ಅವು ಸೋದರಿದೈವಗಳೇ. ಸಪ್ತಮಾತೃಕೆಯರಂತೂ ಪ್ರಖ್ಯಾತ ಕಲ್ಪನೆ. ಉತ್ತರ ಕರ್ನಾಟಕದ ಊರಮ್ಮನಾದ ದ್ಯಾಮವ್ವನ ಜತೆಗೆ ಆಕೆಯ ಸೋದರಿ ದುರುಗವ್ವನೂ ಇರುತ್ತಾಳೆ.

**ತಾಯಿಪಂಥ, ಮತ್ತು ತಾಂತ್ರಿಕರು :**

ಮಾತೃಪ್ರಧಾನ ಸಮಾಜ ಮಾತ್ರ ತಾಯಿಪಂಥ ಮತ್ತು ತಾಂತ್ರಿಕ ಸಿದ್ಧಾಂತ ಹುಟ್ಟಲು ಕಾರಣವಾಗುತ್ತದೆ. ತಾಯಿಪಂಥವೇ ಸೈದ್ಧಾಂತಿಕವಾಗಿ, ತಾಂತ್ರಿಕ ಯೋಗ, ಸಾಂಖ್ಯ ಮೊದಲಾದ ಅವೈದಿಕ, ನಾಸ್ತಿಕ ತತ್ವಜ್ಞಾನಗಳ ಉಗಮಕ್ಕೆ ನಾಂದಿ ಹಾಡಿತು. ಅನೇಕ ವಿದ್ವಾಂಸರು ಈ ವಿಷಯದ ಬಗ್ಗೆ ಚರ್ಚಿಸಿದ್ದಾರೆ.

ತಾಂತ್ರಿಕವು ಬರಿ ಸಿದ್ಧಾಂತವಲ್ಲ, ಆಚರಣೆಯ ಜತೆಗಷ್ಟೇ ಅದು ಜೀವಂತವಿರಬಲ್ಲದು. ಖೇದದ ಸಂಗತಿ ಎಂದರೆ ಅದರ ಗ್ರಂಥಗಳು ದೇಸಿ ಭಾಷೆಗಳಲ್ಲಿ ಉಳಿದು ಬರದಿರುವುದು. ಇದ್ದರೂ ನಿಗೂಢ ಲೋಕ ಸೇರಿದವು. ಸಂಸ್ಕೃತದಲ್ಲಿರುವ ತಾಂತ್ರಿಕ ಗ್ರಂಥಗಳು ಬ್ರಾಹ್ಮಣರ ಮತ್ತು ತಾಂತ್ರಿಕ ವಿರೋಧಿಗಳ ಸೃಷ್ಟಿಗಳೆಂದು ದೇವಿಪ್ರಸಾದ ಚಟೋಪಾಧ್ಯಾಯ ವಿವರಿಸಿದ್ದಾರೆ. (ಲೋಕಾಯತ)

ನಮ್ಮ ನಾಡಿನಲ್ಲಿ ವಿಧಿಬದ್ಧಾತ್ಮಕ ತಾಂತ್ರಿಕತೆಯ ಹಲವಾರು ನಿದರ್ಶನಗಳು ಕಂಡು ಬರುತ್ತವೆ. ಮಾತೃದೈವಕೇಂದ್ರಿತವಾದ ನೆಲೆಗಳು ದಲಿತ ಸಂಸ್ಕೃತಿಯ ಸ್ವರೂಪವನ್ನು ಇನ್ನಷ್ಟು ಸ್ಪಷ್ಟಗೊಳಿಸುವವು. ಆದರೆ ಇದನ್ನು ಗ್ರಹಿಸಿಕೊಳ್ಳಬೇಕಾದರೆ ದಲಿತವಾದಿ ವೈಜ್ಞಾನಿಕ ಕಣ್ಣೋಟದ ಅಗತ್ಯವಿದೆ.

ದಕ್ಷಿಣಭಾರತದ ದಲಿತರಲ್ಲಿರುವ ಕತೆಗಳ ಪ್ರಕಾರ ಶಿವನ ಎಡಗಡೆ ಯುಗಮುನಿ, ಬಲಗಡೆ ಸಾಂಖ್ಯ ಮುನಿಗಳು ನಿಂತು ಕಾಮಧೇನುವಿನ ಹತ್ಯೆಯ ನ್ಯಾಯ ನಿರ್ಣಯ ಕೇಳುತ್ತಿದ್ದರು. ಶಿವ ಅವರನ್ನು ಚಾಂಡಾಲರಾಗಿರೆಂದು ಶಪಿಸಿದನು. ಹೀಗಾಗಿ ಎಡಗಡೆಯ ಯುಗಮುನಿ ಮಾಂತಗಿಯರಿಂದ ಎಡಗೈ ಮಾದಿಗರು, ಬಲಗಡೆ ಸಾಂಖ್ಯ ಮುನಿಯಿಂದ ಬಲಗೈ ಹೊಲೆಯರು ಹುಟ್ಟಿದರು.

ಇನ್ನೊಂದು ಕತೆಯ ಪ್ರಕಾರ ಕಂಚಿಯ ಕಾಮಾಕ್ಷಿಯ ಎಡ, ಬಲ ಕೈಗಳಿಂದ ಮಾದಿಗರು, ಹೊಲೆಯರು ಹುಟ್ಟಿದರು. ತಾಂತ್ರಿಕರಲ್ಲಿ 'ಯೋಗ' ಸಾಧನೆ ಎಂದರೆ ಹೆಣ್ಣು ಶಕ್ತಿಯನ್ನು ಅರ್ಥಮಾಡಿಕೊಳ್ಳುವುದು, ಷಟ್ ಚಕ್ರ ಸಾಧನೆಯಿಂದ ಸ್ವತಃ ಸ್ತ್ರೀಯಾಗಿ ಮಾರ್ಪಡುವುದು. (ಅದೇ)

ಪುರುಷ ಪ್ರಧಾನ ಸಮಾಜ ಬಂದ ನಂತರ ಹಿಂದಿನ ಮಾತೃದೈವಗಳ ಒಡೆತನವನ್ನು ಸಾಧಿಸಲು ಪುರುಷರು ಸ್ತ್ರೀಯಾಗಿ ಪರಿವರ್ತನೆಗೊಳ್ಳುವ ಅವಶ್ಯಕತೆ ಇತ್ತೆಂದು ಪಂಡಿತರ ಗ್ರಹಿಕೆ. ಎಲ್ಲಮ್ಮ ಪಂಥದಲ್ಲಿ ಗಂಡಸರು ಜೋಗಮ್ಮಗಳಾಗುವುದು ಈ ಹಿನ್ನೆಲೆಯಲ್ಲೇ. ದಾಸಮ್ಮ, ಗ್ವಾರಮ್ಮ, ಜೋಗಮ್ಮ, ಮಾತಂಗಿ, ದುರುಗೇರು, ಬಿಂಗೇರು, ಮುರುಳಿಯರು, ಇವರೆಲ್ಲ ಜನಪದ ಗುರುವರ್ಗವೇ; ಅಂದರೆ ತಾಂತ್ರಿಕರೇ. ಇವರಲ್ಲಿ ದಲಿತ ಮಹಿಳೆಯರ ಪಾತ್ರ ಪ್ರಧಾನವಾಗಿದೆ.

ಋಗ್ವೇದದಷ್ಟು ಪ್ರಾಚೀನ ಕಾಲದಲ್ಲೇ ತಂತ್ರವಿತ್ತು. ಅದಕ್ಕೂ ಹಿಂದಿನ ದಾಖಲೆಗಳಿಲ್ಲದಿರುವದರಿಂದಷ್ಟೇ ಹೀಗೆ ಹೇಳುವುದು ರೂಢಿ. ಋಗ್ವೇದದಲ್ಲಿ ತಂತ್ರವೆಂದರೆ ಬೇಸಾಯಗಾರರು, ನೇಗಿಲಿನಿಂದ ಭೂಮಿಯನ್ನು ಉತ್ತು ಬೆಳೆ ತೆಗೆಯುವುದು, ನೇಕಾರರು ಮಗ್ಗದಿಂದ ಬಟ್ಟೆ ಮಾಡುವುದು, ಒಂದೆಡೆ ಇದ್ದುದನ್ನು ಹರಡುವುದು ಇತ್ಯಾದಿ.

'ಪಂಚ' ಮಕಾರಗಳಿಂದ ಪೂಜುವುದನ್ನು ಹೇಳುವ ತಂತ್ರ ಮಾತೃ ದೈವಕ್ಕೆ ಸಂಬಂಧಿಸಿಯೇ ಪೂಜೆ ಇರುವುದನ್ನು ಗಟ್ಟಿಗೊಳಿಸುತ್ತದೆ. ಕೃಷಿ ಸಂಸ್ಕೃತಿಯಲ್ಲಿ 'ಐದರ' ಪ್ರಾಮುಖ್ಯತೆಯನ್ನು ಬೇರೆಡೆ ಚರ್ಚಿಸಿದ್ದೇನೆ. (ನೋಡಿ: "ಜಾತ್ರೆಗಳು") ಪಶುಪಾಲಕರಲ್ಲಿ ಏಳರ ಪ್ರಸಕ್ತಿ ಹೆಚ್ಚು. ಮಾತೃಮೂಲೀಯ ಸಂಸ್ಕೃತಿ ದೈನಂದಿನ ಕೆಲಸ ಕಾರ್ಯಗಳ ಸಂದರ್ಭದ ಲೌಕಿಕ ಅಮ್ಮನ ಗುಣಸ್ವಭಾವಗಳಿಗೆ ಅನುಗುಣವಾಗಿ ತಾಂತ್ರಿಕ ತಾಯಂದಿರನ್ನು ಕಲ್ಪಿಸಿತು. ಇದನ್ನು ಗೊಂಡರು ಹೇಳುವ ಕತೆಯಿಂದ ತಿಳಿಯಬಹುದು. (ಅದೇ

ಪು. ೩೨೨) ಅದನ್ನೇ ವೈದಿಕ ಸಂಸ್ಕೃತಿ "ಭೋಗದಲ್ಲಿ ಭವಾನಿ, ಯುದ್ಧ ಪ್ರಸಂಗದಲ್ಲಿ ದುರ್ಗಾ, ಕೋಪ ಬಂದಾಗ ಕಾಳಿ" ಎಂದೆಲ್ಲಾ ಹೇಳಿತು.

ದ್ರಾವಿಡ ಪದವಾದ 'ಪೂಜೆ'ಯ ಅರ್ಥವಾದರೂ ಏನು? ಇದು ನಿತ್ಯ ಜೀವನದ ಸುಖಕ್ಕೆ ಸಂಬಂಧಪಟ್ಟ ಭೌತಿಕ ಆಶಯಗಳಿಂದಲೇ ಕೂಡಿದೆ. (ದೇವರಿಗೆ) ಅಮ್ಮನಿಗೆ ಸ್ನಾನ ಮಾಡಿಸಿ, ಮಡಿ ಬಟ್ಟೆ ಧರಿಸಿ, ಗಂಧ, ಹೂ ಇತ್ಯಾದಿ ಏರಿಸಿ, ಕೊನೆಗೆ ಊಟ ಮಾಡಿಸುವುದು. (ಎಡೆ, ನೈವೇದ್ಯ) ಹಬ್ಬ ಜಾತ್ರೆಗಳಲ್ಲಿ ಹಾಸಿಗೆಯ ಸೇವೆಯನ್ನೂ ಕಲ್ಪಿಸಲಾಗುತ್ತದೆ. ಊಳಿಗಮಾನ್ಯ ಕಾಲದಲ್ಲಂತೂ ಇದು ಈಶ್ವರ ದೇಗುಲಗಳಲ್ಲಿ ಸೂಳೆಯರ 'ರಂಗಭೋಗದ' ಹೆಸರಿನಲ್ಲಿ ಉಳಿಯಿತು. ಈ ಎಲ್ಲ ಕ್ರಿಯೆಯಲ್ಲಿ ಅಧ್ಯಾತ್ಮವಾದಿಯಾದುದು ಏನೂ ಇಲ್ಲ. ಇದೇ ತಾಂತ್ರಿಕ. ತಾಂತ್ರಿಕವು ಜೀವನದ ಗತಿಯಲ್ಲಿ ಸೇರಿ ಹೋಗಿರುವುದಕ್ಕೆ 'ಪೂಜೆ'ಯೆ ಸಾಕ್ಷಿ. ಈ ವಿವರಣೆಯ ಮೂಲಕ ದೇವರು ಮತ್ತು ಪೂಜೆಯನ್ನು ಸಮರ್ಥಿಸುವದಲ್ಲ ನನ್ನ ಕೆಲಸ.

ದಲಿತರಾದ ದೇವರಗುಡ್ಡ ನೀಲಗಾರರು ಹೇಳುವ ಮಾದೇಶ್ವರ, ಮಂಟೇಸ್ವಾಮಿ ಮಹಾಕಾವ್ಯಗಳಲ್ಲಿ ತಾಂತ್ರಿಕ ಅಮ್ಮನ ವಿರಾಟ್ ಸ್ವರೂಪ ವ್ಯಕ್ತವಾಗಿದೆ. ವಿಶ್ವ ಸೃಷ್ಟಿಯಲ್ಲಿ ಆಕೆಯ ಪ್ರಧಾನ ಪಾತ್ರದ ಕುರಿತ ವಿವರಗಳು ಅಲ್ಲಿವೆ.

'ಕಂಬುಲ' 'ಸಿದ್ಧವೇಷ' (ಬಿಳಿಮಲೆ) ಅಸಾದಿಗಳ ಅಶ್ಲೀಲ ಹಾಡು, 'ನಾಗಮಂಡಲ', 'ಹಗರಣಗಳು', 'ಸಿಂದ್ ತುಳಿವ' ಆಚರಣೆ ಇಂಥವೆಲ್ಲ ಜನಪದರ ತಾಂತ್ರಿಕತೆ ಮತ್ತು ಅಮ್ಮನ ಸಂಬಂಧದ ಬೇರೆ ಬೇರೆ ವಿವರಗಳೇ.

ಶಿಷ್ಟ ತಂತ್ರ, ಜನಪದ ತಂತ್ರ ಎಂಬ ವಿಭಾಗೀಕರಣವೇ ಸರಿಯಲ್ಲದಿದ್ದರೂ ಅವುಗಳಲ್ಲಿ ಮಾತಂಗಿಯ ಕುರಿತ ವಿವರಣೆಗಳನ್ನು ಡಾ. ಸತ್ಯನಾರಾಯಣ ಅವರು ನೀಡಿದ್ದಾರೆ ("ಬೃಹದ್ದೇಶಿ") ಬೇಸಾಯ, ಜನ, ದನಗಳ, ಸಮೃದ್ಧಿಗೆ ಸಫಲತೆಗೆ ಕಾರಣಳಾದ ಆದಿಮ ತಾಯಿಯನ್ನು ತಾಂತ್ರಿಕ ಪಂಥ "ಜಾಗತಿಕ ದೃಷ್ಟಿಕೋನ"ದ ಸಿದ್ಧಾಂತವನ್ನಾಗಿ ಬೆಳೆಸಿರುವುದು ದೊಡ್ಡ ಸಾಧನೆ. ಅಲ್ಲಿ ಭೌತಿಕವಾದದ ಬೇರೆ ಬೇರೆ ಆಯಾಮಗಳೂ ಇವೆ.

**ದಲಿತರ ಸಾಧನೆ : ಕಲೆ – ಸಂಗೀತ ಕಲೆ :**

ಶ್ರೀಮತಂಗಮುನಿ ವಿರಚಿತ "ಬೃಹದ್ದೇಶಿ", ೧೯೯೮ರಲ್ಲಿ ಡಾ.ರಾ. ಸತ್ಯನಾರಾಯಣ ಅವರ ಸಂಪಾದಕತ್ವದಲ್ಲಿ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟವಾಯಿತು. "ಬೃಹದ್ದೇಶಿ", "ಭಾರತೀಯ ಸಂಗೀತ ಶಾಸ್ತ್ರದಲ್ಲಿ ಉಪಲಬ್ದವಾಗಿರುವ ಪ್ರಪ್ರಥಮ ಗ್ರಂಥ. ಅತ್ಯಂತ ಸುಲಲಿತವಾದ, ಪಾಂಡಿತ್ಯಪೂರ್ಣವಾದ, ನಮ್ಮ ಸಂಸ್ಕೃತಿ ಸಂಗೀತಗಳಿಗೆ ಹೊಸ ಆಯಾಮಗಳನ್ನು ನಿರ್ಮಿಸಿದ ಬಹು ಶ್ರುತವಾದ ಗ್ರಂಥವೂ ಹೌದು". (ಅರಿಕೆ)

ಇಂಥ ಅಪರೂಪದ ಗ್ರಂಥದ ಕರ್ತೃ ಮಾದಿಗಕುಲದ ಮುನಿ ಎಂಬುದೇ ನಮಗಿಲ್ಲಿ ಪ್ರಸ್ತುತ ಸಂಗತಿ. ಈ ಮತಂಗ ಬಹುಮುಖ ಪ್ರತಿಭೆಯುಳ್ಳವ. "ಸಂಗೀತದ ತ್ರಿಮುಖಗಳಾದ ಗೀತ, ವಾದ್ಯ ಮತ್ತು ನರ್ತನಗಳಲ್ಲಿ ಸಮಾನ ಪಾಂಡಿತ್ಯ ಪಡೆದಿದ್ದವ." "ಯೋಗ ಪಟುವೂ ಹೌದು. . . .ಮಂತ್ರ ಶಸ್ತ್ರಜ್ಞನೂ ಹೌದು...ವೈಯ್ಯಾಕರಣನೂ ಆಗಿದ್ದಾನೆ...." (೧೭) "ಆಯುರ್ವೇದ, ಆಗಮ, ಗಣೀತ ಶಾಸ್ತ್ರ, ಶಿಕ್ಷಾ ಶಾಸ್ತ್ರ, ನಾದ ವಿದ್ಯೆ" ಇವನ್ನೆಲ್ಲಾ ತಿಳಿದವ. (೧೮) ಅವನು ತಾಂತ್ರಿಕನಾಗಿದ್ದ. ಶ್ರೀ ವಿದ್ಯಾ ತಂತ್ರವಾದಿಯಾಗಿದ್ದ. ಹಂಪಿಯ ಮಾತಂಗ ಪರ್ವತದಲ್ಲಿದ್ದ.

ಇಂಥ ಜ್ಞಾನಿಯೊಬ್ಬ ಮಾದಿಗ ಕುಲದವನಾಗಿರುವುದು ಸಾಧ್ಯವೇ? ಇದು ಪಂಡಿತರ ತಲೆ ತಿನ್ನುವ ವಿಷಯ. ಒಪ್ಪಲೇ ಬೇಕಾದ ಅನಿವಾರ್ಯ ಸ್ಥಿತಿ ಇದೆ ಎನ್ನುವಾಗ ವಿದ್ವಾಂಸರು ಮಾಡುವ ಕೆಲಸವೇನು? ಇದಕ್ಕೆ ಈ ಗ್ರಂಥದ ಸಂಪಾದಕರೇ ಸಾಕ್ಷಿ. "ಬೃಹದ್ದೇಶಿಯ ಕರ್ತೃವು ಆಗಿನ ಕಾಲದಲ್ಲಿ ಬಹುಶಃ ಕೀಳೆಂದು ಎಣಿಸಿಕೊಳ್ಳಲಾಗುತ್ತಿದ್ದ ಸಾಮಾಜಿಕ ಧಾರ್ಮಿಕ ಸಾಂಸ್ಕೃತಿಕ ಸ್ತರದಲ್ಲಿ ಜನ್ಮ ತಾಳಿ ತನ್ನ ಶ್ರೇಷ್ಠ ಸಾಧನೆಯಿಂದ ಮುನಿಯೆಂದು ಹೆಸರಾದವನು ಎಂಬ ಅನುಮಾನವೂ ಹೊರಡುತ್ತದೆ. ಅಥವಾ ಶಿಷ್ಟ ಪಂಗಡದ ಮುನಿಯೊಬ್ಬನು ತನ್ನ ಉದಾರವಾದ ಸರ್ವಸಮ ದೃಷ್ಟಿಯ ದ್ಯೋತಕವಾಗಿ ಸಾಂಸ್ಕೃತಿಕ ಸಾಮಾನಾಧಿಕರಣ್ಯ ಸಾಧನೆಗಾಗಿ ತನ್ನನ್ನು ಈ ಹೆಸರಿನಿಂದ ಕರೆದುಕೊಂಡನು ಎಂದು ಭಾವಿಸಬಹುದು" (೧೬) ಇಲ್ಲಿಯ ಎರಡನೇ ವಾಕ್ಯದ ಒಳಮರ್ಮವೇನು?

ಮತಂಗ, ಮಾತಂಗಿ, ಶಿಷ್ಟ ತಂತ್ರದಲ್ಲಿ, ಜನಪದ ತಂತ್ರದಲ್ಲಿ ಮಾತಂಗಿ ಈ ಬಗೆಯ ಶೀರ್ಷಿಕೆಗಳಡಿ ಚರ್ಚೆ ಬೆಳೆಸಿರುವ ಡಾ. ಸತ್ಯನಾರಾಯಣರು "ಮತಂಗನು ಹುಟ್ಟಿನಿಂದ ಕೀಳು ಜಾತಿಯವನಾದರೂ ಸಾಧನೆಯಿಂದ ಮೇಲು ಜಾತಿಯವರಿಗೂ ಪೂಜ್ಯನೆನಿಸಿಕೊಂಡನು." (೪೭) ಎಂದು ಹೇಳುತ್ತ, ಬೃಹದ್ದೇಶಿಯ ಕರ್ತೃವಿನ ಹೆಸರು ಅನ್ವರ್ಥಕವೋ ಸಾಂಕೇತಿಕವೊ ಎಂದು (ಅದೇ) ಕ್ಯಾತೆ ತೆಗೆಯುತ್ತಾರೆ.

ಜಮದಗ್ನಿ ತನ್ನ ಹೆಂಡತಿಯ ತಲೆ ಕಡಿಯಲು ತನ್ನ ಮಗನಿಗೆ ಹೇಳುವುದೇ ಕ್ರೂರತನದ ಪರಮಾವಧಿ. ಇದನ್ನು ವೈದಿಕರ ಪುರುಷ ಪ್ರಧಾನ ಸಂಸ್ಕೃತಿಯ ಶೋಷಕ ಸ್ವಭಾವಕ್ಕೆ ತಕ್ಕನಾದ ಬುದ್ಧಿ ಎಂದು ಹೇಳಬೇಕಷ್ಟೇ. ಆದರೆ ಸಂಪಾದಕರು ಪರಶುರಾಮ ಕಡಿದ ರೇಣುಕೆಯ ತಲೆಯ ಜತೆ ಮಾದಿಗರ ಮಾತಂಗಿಯ ತಲೆಯೂ ಹೋದ ಪ್ರಸಂಗದಲ್ಲಿ ಹೇಳುತ್ತಾರೆ, "ಸಮಾಜದ ಒಂದು ಅಂಶಕ್ಕೆ ಕೇಡಾದರೆ ಉಳಿದದ್ದಕ್ಕೂ ಕೇಡಾಗದೇ ಇರದು. ಆದರೆ ಪರಸ್ಪರ ಹೊಂದಾಣಿಕೆ ಮಾಡಿಕೊಳ್ಳುವ, ಮಾಡಿಸುವ ಅನುಗ್ರಹ ಬುದ್ಧಿ, ಜಾಣ್ಮೆ, ಶಿಷ್ಟರಿಗೆ (ಉದಾ: ಜಮದಗ್ನಿಗೆ) ಇದ್ದರೆ ಅವು ಜೀವಂತವಾಗೇ ಇರುತ್ತವೆ." (ಪು. ೪೭) ಸತ್ಯನಾರಾಯಣರ ಈ ಜಾಣ್ಮೆಯ ನುಡಿಯನ್ನೆ ನಂಬುವುದಾದರೆ ಸಮಾಜದ ಒಂದಂಶವಾದ ದಲಿತರಿಗೆ ಎಷ್ಟೊಂದು ಕೇಡಾಗಿದೆ, ಆದರೆ ಇದರಿಂದ ಮೇಲ್ಜಾತಿಯವರಿಗೆಲ್ಲಿ ಕೇಡಾಯಿತು? ಜಮದಗ್ನಿಯದು ಅನುಗ್ರಹ ಬುದ್ಧಿ ಹೇಗಾಯಿತು? ಅವನದು ಕುತಂತ್ರ, ಕುಹಕ ಬುದ್ಧಿಯಲ್ಲವೇ?

ಸಂಪಾದಕರು ಕೊನೆಗೆ ಬರುವ ನಿರ್ಣಯವೆಂದರೆ “ಯಾವುದೇ ಸಮಾಜವು ವಿವಿಧ ಸ್ತರಗಳಿಂದ ವರ್ಗಗಳಿಂದ ಮಾತ್ರವೇ ಏರ್ಪಡುತ್ತದೆ. ಸ್ತರಗಳಿಲ್ಲದೇ ಅದು ಇರಲಾರದು. ಅವುಗಳಲ್ಲಿ ಆಗಾಗ ಹೊಂದಾಣಿಕೆಗಳೂ, ವ್ಯತ್ಯಾಸಗಳೂ ಆಗುತ್ತಿರುತ್ತವೆ.” (ಅದೇ ೪೮) ಈ ಅಪಾಯಕಾರಿ ನಿಲುವನ್ನು ಖಂಡಿಸಬೇಕಾಗುತ್ತದೆ. ವರ್ಗ–ಜಾತಿ ಶ್ರೇಣಿಕರಣವನ್ನು ಸಹಜವೆಂಬಂತೆ ಪ್ರತಿಪಾದಿಸುವ ಈ ವೈದಿಕರಿಗೆ, ‘ಸಮಾನತೆ’, ‘ಪ್ರಜಾಪ್ರಭುತ್ವ’, ‘ಸ್ವಾತಂತ್ರ್ಯ’ಗಳ ಅರ್ಥವೇ ಆಗಲಾರದು.

ಇಂಥ ಬುದ್ಧಿ ಮಾತ್ರ ಹೊಲೆಯ, ಮಾದಿಗರು ಹುಟ್ಟಿಸಿರುವ ‘ತಂತ್ರ’ವನ್ನು ‘ಶಿಷ್ಟ ತಂತ್ರ’, ‘ಜಾನಪದ ತಂತ್ರ’ ಎಂದು ವಿಭಜಿಸಬಲ್ಲದು. ಸಂಸ್ಕೃತ ಭಾಷೆ ಬ್ರಾಹ್ಮಣರ ಗುತ್ತಿಗೆ ಆಗಿರಲಿಲ್ಲ. ‘ಬೃಹದ್ದೇಶಿ’ ಸಂಸ್ಕೃತದಲ್ಲಿದೆ ಎಂಬ ಕಾರಣಕ್ಕೆ ಅದು ಬ್ರಾಹ್ಮಣರ ಸೃಷ್ಟಿ ಅಲ್ಲ. ಎಲ್ಲಮ್ಮನನ್ನು ಈ ವಿದ್ವಾಂಸರು ಶಿಷ್ಟಳೆಂದು ತಿಳಿದಿರುವುದೇ ತಪ್ಪು. ಈಕೆ ದ್ರಾವಿಡ ಪಶುಪಾಲಕ (?) ಸ್ತ್ರೀ ದೈವ. ಬೇಸಾಯಗಾರರ ಜತೆ ಇವರು ಬೆರೆತುದನ್ನು ಮಾತಂಗಿಯ ತಲೆ ಅದಲು ಬದಲಾದುದು ಧ್ವನಿಸುತ್ತದೆ. ತಂತ್ರದಲ್ಲಿ ಸತ್ಯನಾರಾಯಣರು ತಿಳಿದಿರುವಂತೆ ‘ಶಿಷ್ಟ’ ಎಂಬುದಿಲ್ಲ. ಸಂಸ್ಕೃತದಲ್ಲಿರುವುದೆಲ್ಲ ‘ಶಿಷ್ಟ’ವಲ್ಲ. ಜಾನಪದವನ್ನು ‘ಅಶಿಷ್ಟ’ ಎನ್ನುವುದೇ ತಪ್ಪು. ದೇವಿ ಪ್ರಸಾದ ಚಟೋಪಾಧ್ಯಾಯ ‘ತಂತ್ರ’, ಅವೈದಿಕ ಪರಂಪರೆಗೆ ಸೇರಿದ್ದು, ಅದನ್ನು ವೈದಿಕರು ತಮ್ಮ ಹಿತಗಳಿಗೆ ಹೇಗೆ ತಿರುಚಿಕೊಂಡು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡರೆಂಬುದನ್ನು ತಮ್ಮ ಅನೇಕ ಗ್ರಂಥಗಳಲ್ಲಿ ವಿವರಿಸಿದ್ದಾರೆ. (“ಲೋಕಾಯತ” “ಇಂಡಿಯನ್ ಅಥೇಯಿಸಂ”, “ವಾಟೀಜ್‌ಲಿವಿಂಗ್, ವಾಟೀಜ್ ಡೆಡ್ ಇನ್ ಇಂಡಿಯನ್ ಫಿಲಾಸಫಿ” ಇತ್ಯಾದಿ)

ದ್ರಾವಿಡರ ಜ್ಞಾನವನ್ನು ವೈದಿಕ ಸಂಸ್ಕೃತಿಯ ಜತೆ ಬೇಕಾಬಿಟ್ಟಿ ಕಲಬೆರಕೆಗೊಳಿಸಿ ಚಿಂತನೆಯನ್ನು ಗೋಜಲಾಗಿಸುವುದು ಸರಿಯಲ್ಲ. ಈ ವಿದ್ವಾಂಸರ ಪ್ರಕಾರ “ಮತಂಗ ಮುನಿಯ ವೈದಿಕ ಮಾರ್ಗದ ತಾಂತ್ರಿಕನಾಗಿದ್ದ.” (೧೯) ‘ವೈದಿಕ ಮಾರ್ಗ’ಕ್ಕೂ ತಾಂತ್ರಿಕಕ್ಕೂ ಸಂಬಂಧವೇ ಇಲ್ಲ.

ಸಾಂಸ್ಕೃತಿಕ ಸಂಘರ್ಷವನ್ನು ಸತ್ಯನಾರಾಯಣರಂಥ ವಿದ್ವಾಂಸರು ‘ಸಮನ್ವಯ’ ಎನ್ನುವುದು ವಿಚಿತ್ರವಾಗಿದೆ. ಅವರು ಬರೆಯುತ್ತಾರೆ: “ಭರತ, ಮತಂಗರ ಕಾಲದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಸಮಾನತೆಯನ್ನು ಸಾಧಿಸಲೆಳಸುವ ಒಂದು ಕ್ರಾಂತಿಯು ನಡೆಯುತ್ತಿತ್ತೆಂದು ಹೇಳಬಹುದು. ಜಾನಪದ ಪ್ರಸಿದ್ಧವಾದ ಎಲ್ಲಮ್ಮ–ಮಾತಂಗಿಯರ ಕಥೆಯು ಇಂತಹ ಶಿಷ್ಟ–ಅಶಿಷ್ಟ ಸಾಮಾನಾಧಿಕರಣ್ಯದ ನಿದರ್ಶನವಾಗಿದೆ.” (ಅದೇ ಪು. ೧೬)

ಭರತನ ನಾಟ್ಯಶಾಸ್ತ್ರ ವೈದಿಕ ಮತ್ತು ದ್ರಾವಿಡರ ನಡುವಿನ ಸಂಘರ್ಷವನ್ನು ಕತೆಯ ರೂಪದಲ್ಲಿ ಹೇಳುತ್ತದೆ. ಅಲ್ಲಿ ವರ್ಣವ್ಯವಸ್ಥೆಗೆ ಅನುಗುಣವಾಗಿ, ಅಂದರೆ ಬ್ರಾಹ್ಮಣರ ಹಿತಕ್ಕೆ ಹೊಂದುವಂತೆ ದ್ರಾವಿಡ ದಲಿತರ ನಾಟ್ಯ ಕಲೆಯನ್ನು ಬಳಸಿಕೊಳ್ಳುವ ಕುತಂತ್ರವಿದೆ. ಅದು ಸಮಾನತೆ ಸಾಧಿಸುವ ಕ್ರಾಂತಿ ಖಂಡಿತ ಅಲ್ಲ.

‘ಮಾದಿಗ’ ಎಂಬ ಪದವನ್ನು ವೈದಿಕ ಸಮಾಜ ‘ಮತಂಗ’ ಎಂದು ಅನುವಾದಿಸಿರಬೇಕು. ಮತಂಗರು ಆನೆ ಟೊಟೆಂ ಹೊಂದಿದವರು, ಹಿಂದೊಮ್ಮೆ ರಾಜ್ಯಗಳನ್ನು ಕಟ್ಟಿ ಆಳಿದವರು. ಮೂಷಿಕ (ಇಲಿ ಟೊಟೆಂ)ಯನ್ನು ಸೋಲಿಸಿದುದರ ಸಂಕೇತವೇ ಅವರ ಗಣಪತಿ ಇಲಿ ವಾಹನವಾಯಿತು ಎಂದು ವಿದ್ವಾಂಸರ ವಾದ (“ಲೋಕಾಯತ”).

‘ಬೃಹದ್ದೇಶಿ’ಯ ಕರ್ತೃ ಖಂಡಿತ ಮಾದಿಗ ಕುಲದ ಮತಂಗ ಮುನಿಯೇ. ಮಾದಿಗ ಸಮಾಜದ ಸಾಧನೆಯ ಪ್ರತೀಕ ಈ ಮುನಿ. ಆತ ಇದ್ದ ಪರ್ವತ (ಮಾತಂಗ ಪರ್ವತ) ಪ್ರದೇಶ ಸಂಗೀತಮಯವಾಗಿತ್ತೆಂದು ರಾಮಾಯಣದ ಅರಣ್ಯ ಕಾಂಡದಲ್ಲಿರುವುದರಿಂದ ಈ ಮಾದಿಗ ಮುನಿ

ದೊಡ್ಡ ಸಂಗೀತ ವಿದ್ಯಾಲಯವನ್ನೇ ನಡೆಸುತ್ತಿದ್ದಿರಬೇಕು. ಅವನ ಶಿಷ್ಯೆ ಶಬರಿ. "ರಾಮಲಕ್ಷ್ಮಣರು ಮತಂಗಾಶ್ರಮಕ್ಕೆ ಬರುವ ವೇಳೆಗೆ ಮತಂಗ ಋಷಿ" ತೀರಿದ್ದ.

"ಮತಂಗಲೀಲಾ" ಎಂಬ ಗಜ ಶಾಸ್ತ್ರವೂ ಮಾದಿಗ ವಿದ್ವಾಂಸನ ಸೃಷ್ಟಿಯಾಗಿರಲು ಸಾಕು. ಮತ್ತೊಬ್ಬ, ಮಾದಿಗ ಮುನಿ "ಹರವಿಲಾಸ" ಎಂಬ ಗ್ರಂಥ ಬರೆದಿದ್ದಾನೆ. 'ಜಕ್ಕಿಣೀ' ಎಂಬ ನೃತ್ಯ ಪ್ರಬಂಧ ರಚಿಸಿದವ ಮತ್ತೊಬ್ಬ 'ಮಾದಿಗ' ಮುನಿ ಇರಬೇಕು.

'ಮಾತಂಗನ ಹೆಸರಿನಲ್ಲಿ ಪುಣ್ಯ ಕ್ಷೇತ್ರಗಳಿವೆ. ತೀರ್ಥಗಳಿವೆ'. ಎಂದರೆ ಮಾದಿಗರು ಮುನಿಗಳಾಗಿ ಸಾಧಿಸಿದ ಹಿರಿಮೆ ಗರಿಮೆ ಇವು. "ಮಾತಂಗ ಎಂಬುದು ಒಂದು ವಿದ್ಯಾನಿಕಾಯದ ಅಂಗ. ಈ ನಿಕಾಯದಲ್ಲಿ ೮ ವಿದ್ಯೆಗಳಿವೆ" (೧೦) ಇದರರ್ಥವೇನು? 'ಮಾದಿಗ' ವಿದ್ಯೆ ಎಂಬುದೇ ದೊಡ್ಡ ಪರಂಪರೆಯಾಗಿತ್ತೆಂದೇ? ಅದು ತಾಂತ್ರಿಕ ವಿದ್ಯೆಯೇ, ಏಕೆಂದರೆ 'ತಾಂತ್ರಿಸಂ'ನಲ್ಲಿ ಮಾತಂಗಿಯೂ ದೊಡ್ಡ ವಿದ್ಯೆಯೇ. ಇದು ಮಾದಿಗ ಮಹಿಳೆಯರ ಸಾಧನೆಯನ್ನು ಹೇಳುತ್ತದೆ.

ಬುದ್ಧನ ಕಾಲದ ಕೋಸಲದ ಅರಸ ಪಸೇನದಿ ಮಾತಂಗರಾಜ. ಅಂದರೆ ಮಾದಿಗ ಅರಸನೇ.

'ಮಾತಂಗ ಜಾತಕ' ಎಂಬ ಕತೆ ಇದೆ. 'ಮಾತಂಗ' ಎಂಬ ಪ್ರತ್ಯೇಕ ಬುದ್ಧನೇ ಇದ್ದಾನೆ. (೧೨) ಹೀಗೆ ಸಂಸ್ಕೃತ–ಪ್ರಾಕೃತ ಪಾಲಿ ವಾಙ್ಮಯದಲ್ಲಿ ಮಾದಿಗರ (ಮತಂಗ) ಸಾಧನೆಯನ್ನು ಗುರುತಿಸಬಹುದು.

ಮಹಾತಾಂತ್ರಿಕರಾಗಿದ್ದ ಮಾದಿಗ ಕುಲದ ಮುನಿಗಳು ದೇಶಾದ್ಯಂತ ಪ್ರಖ್ಯಾತರಾಗಿದ್ದರು. ಇವರ ಪ್ರಭಾವದಿಂದಲೇ ಸಂಗೀತ ವಿದ್ಯೆಯ "ಸಾಮವೇದ" ಹುಟ್ಟಿತು. ಮಾಟ–ಮಂತ್ರ ಪ್ರಾಶಸ್ತ್ಯ ಹೆಚ್ಚಿರುವ "ಅಥರ್ವಣವೇದ" ಹುಟ್ಟಿತು. ಇದೇ ಕಾರಣಕ್ಕಾಗಿ ಬಹುದಿನಗಳವರೆಗೆ ಬ್ರಾಹ್ಮಣರು ವೇದಗಳಲ್ಲಿ 'ಅಥರ್ವಣ'ವನ್ನು ಸೇರಿಸಿದ್ದಿಲ್ಲ. ವೇದ 'ತ್ರಯೀ' ಮಾತ್ರ ಆಗಿತ್ತು.

**ನಾಟ್ಯಶಾಸ್ತ್ರ :**

ಭರತ'ಮುನಿ'ಯ ನಾಟ್ಯಶಾಸ್ತ್ರ ನಾಟಕ ಕಲೆಯ ಕುರಿತ ಮೊಟ್ಟ ಮೊದಲ ಗ್ರಂಥ. ಸಾಹಿತ್ಯ ಮೀಮಾಂಸೆಯಲ್ಲಿರುವ 'ರಸ' ಸಿದ್ಧಾಂತದ ಪ್ರತಿಪಾದನೆಯಿಂದಾಗಿಯೂ "ನಾಟ್ಯಶಾಸ್ತ್ರ" ಪ್ರಸಿದ್ಧವಿದೆ. 'ಮುನಿ'ಯಾದ ಭರತ ವೈದಿಕನಾಗಿರಲಿಲ್ಲ. ಅಲ್ಲದೆ ನಾಟ್ಯಶಾಸ್ತ್ರ ಒಬ್ಬ ಭರತನಿಂದ ರಚಿತವಾಗಿಲ್ಲ, ಹಲವರ ಕೈಸೇರಿವೆ ಎಂದೂ ಹೇಳಲಾಗುತ್ತದೆ. (ಆದ್ಯ ರಂಗಾಚಾರ್ಯ "ನಾಟ್ಯಶಾಸ್ತ್ರ" ನೀನಾಸಂ ೧೯೮೪)

"ಕಾಮಶಾಸ್ತ್ರ, ಶಿಲ್ಪಶಾಸ್ತ್ರ, ನಾಟ್ಯಶಾಸ್ತ್ರ, ನೃತ್ಯ–ನೃತ್ಯ–ಸಂಗೀತ, ನಾಸ್ತಿಕವಾದ ಮುಂತಾದ ಶಾಸ್ತ್ರಗಳನ್ನು" ರಚಿಸಿದವರು ದ್ರಾವಿಡ ಮುನಿಗಳೇ. ಇವರಲ್ಲಿ ಮಾದಿಗ ಕುಲದ ಮುನಿ ಮತ್ತು ಮಾತಂಗಿಯರ ಕೊಡುಗೆ ಅಪಾರ.

'ಭರತ'ನೆಂದರೆ, ನಟ, ನರ್ತಕನೆಂದಷ್ಟೇ, ಅಲ್ಲ ಶಬರನೆಂದೂ ಕೋಶಾರ್ಥವಿದೆ. ಮತಂಗ, ಮಾತಂಗಿ ಎಂಬ ಪದಗಳಿಗೂ ಶಬರ ಎಂಬರ್ಥ ಇದೆ. ಈ ತರ್ಕದ ಪ್ರಕಾರ ನಾಟ್ಯಶಾಸ್ತ್ರ ರಚಿಸಿದ ಮುನಿ ಮಾದಿಗ ಕುಲದವನೇ. ಐದನೇ ವೇದವಾಗಿರುವ 'ನಾಟ್ಯಶಾಸ್ತ್ರ'ವು ಶೂದ್ರರ ಶಾಸ್ತ್ರವೆಂದು ಆರ್.ಎಸ್.ಶರ್ಮಾ ಹೇಳುತ್ತಾರೆ. (ಪೂರ್ವೋಕ್ತ ೨೯೪)

ಆದರೆ ಮತಂಗ ಮುನಿಗಿಂತ ಭರತ ಹೆಚ್ಚು ಸಂಸ್ಕೃತೀಕರಣಕ್ಕೆ ಒಳಗಾಗಿರುವಂತಿದೆ. ಇಲ್ಲದಿದ್ದರೆ ನಾಟ್ಯಶಾಸ್ತ್ರದಲ್ಲಿ ವೈದಿಕರಪರ ವಿಚಾರಗಳನ್ನು ನಂತರದ ವೈದಿಕರೇ ಸೇರಿಸಿರುವ ಸಾಧ್ಯತೆ ಇದೆ.

ಬ್ರಾಹ್ಮಣ ಮತ್ತು ಕ್ಷತ್ರಿಯರ ಹಿತಾಸಕ್ತಿಯನ್ನು ರಕ್ಷಿಸುವಂತೆ ತೋರುವ ಈ ಗ್ರಂಥ ರಾಕ್ಷಸರನ್ನು ವಿರೋಧಿಸುತ್ತದೆ. ಆದರೂ ರಾಕ್ಷಸರಿಗೆ ಕಲೆಗಿದ್ದ ಸಂಬಂಧವನ್ನು ಬಚ್ಚಿಡದೇ ಹೋಗುತ್ತದೆ. "ಋಷಿಗಳ ಅಪಹಾಸ್ಯ ಮಾಡಿದ್ದಕ್ಕೆ ನಾಟಕವನ್ನಾಡುವ ಭರತನ ಮಕ್ಕಳಿಗೆ 'ಶೂದ್ರರಾಗಿರಿ' ಎಂದು ಶಾಪಕೊಟ್ಟುದರ ಅರ್ಥ ನಾಟಕವು ಕೆಳಗಿನದು ಎಂದು ತಿಳಿಯಲ್ಪಡುವ ಜಾತಿಯವರ ಸೊತ್ತಾಗಿತ್ತು ಎಂದು" ಎಂದು ಶ್ರೀರಂಗರು ಬರೆದಿದ್ದಾರೆ. (ಪ್ರಸ್ತಾವನೆ ಪು, ೯)

'ನಾಟ್ಯಶಾಸ್ತ್ರ'ದಲ್ಲಿ ಒಂದು ಕತೆಯಿದೆ. ಭರತ, ತನ್ನ ನೂರು ಮಕ್ಕಳೊಂದಿಗೆ ಇಂದ್ರ ಅಸುರರನ್ನು, ದಾನವರನ್ನು, ಕೊಂದ ನಾಟಕವನ್ನು, "ಇಂದ್ರನ ಉತ್ಸವ"ದಲ್ಲಿ ಆಡುತ್ತಾನೆ. ಇದರಿಂದ ದೇವತೆಗಳಿಗೆ ಹರ್ಷವಾಗುತ್ತದೆ. ಆದರೆ ದೈತ್ಯರೆಲ್ಲ ವಿರೂಪಾಕ್ಷನ ನೇತೃತ್ವದಲ್ಲಿ ನಾಟಕ ನಡೆದಾಗಲೇ ವಿಘ್ನವನ್ನುಂಟು ಮಾಡುತ್ತಾರೆ. ಇದರಿಂದ ನಟರೂ, ಸೂತ್ರಧಾರನೂ ಸ್ಮೃತಿ ತಪ್ಪಿ ಬೀಳುತ್ತಾರೆ. ಇಂದ್ರ ಸಿಟ್ಟಾಗಿ ಅಸುರರನ್ನು. ವಿಘ್ನಗಳನ್ನು ಸದೆಬಡಿಯುತ್ತಾನೆ. ಆ ನಂತರವೇ ನಾಟ್ಯಗೃಹ ನಿರ್ಮಾಣ ಮಾಡಲಾಗುತ್ತದೆ. (೧–೬)

"ವೇದಗಳು, ಶೂದ್ರ ಜಾತಿಗಳಿಗೆ ನಿಷಿದ್ಧವಾದುದರಿಂದ ಎಲ್ಲ ಜಾತಿ (ವರ್ಣ)ಗಳಿಗೂ ಲಭ್ಯವಾಗುವಂತಹ ಒಂದು ಅಯ್ದನೆಯ ವೇದವನ್ನು ರಚಿಸು, ಕೇಳಲು, ನೋಡಲು ರಂಜಿತ"ವಾಗಿರಬೇಕೆಂದು (ಪು. ೧) ಇಂದ್ರ ಬ್ರಹ್ಮನನ್ನು ಕೇಳಿಕೊಳ್ಳುತ್ತಾನೆ. ಏಕೆಂದರೆ ತ್ರೇತಾಯುಗ ಆರಂಭವಾದಾಗ ಜನತೆಯಲ್ಲಿ ಗ್ರಾಮ್ಯ (ಅಸಭ್ಯ) ನೀತಿ ತಲೆದೋರಿ ಕಾಮಲೋಭಾದಿಗಳು ಜಾಗೃತವಾದುವಂತೆ.

ಈ ಸಂಗತಿಗಳಿಂದ ಗೊತ್ತಾಗುವುದೇನು? ಶೂದ್ರರಿಗೆ ವೇದಸಾರವನ್ನು ನಾಟಕಗಳ ಮೂಲಕ ಹೇಳಲು ಆರ್ಯವೈದಿಕರು ಯತ್ನಿಸಿದರೆಂದಲ್ಲವೇ? ಶೂದ್ರರಲ್ಲೇ ಇದ್ದ 'ಬಯಲಾಟ'ವನ್ನು ಎತ್ತಿಕೊಂಡು ಅದರಲ್ಲಿ ತಮ್ಮ ಕತೆಗಳನ್ನು ತುರುಕಿ ಇವರು ಈ "ಆಟ ಹೂಡಿದರು". ಈ ಕುತಂತ್ರವನ್ನೇ ದ್ರಾವಿಡರು ಮೊದಲು ವಿರೋಧಿಸಿದರು.

ಇಂದ್ರನ ಇಚ್ಛೆಯಂತೆ ಬ್ರಹ್ಮ ವೇದಗಳಿಂದ ನಾಟ್ಯವೇದ ರಚಿಸಿದನೆಂದು ಕತೆ ಮುಂದುವರಿಯುತ್ತದೆ. ಅದನ್ನು ಪ್ರಯೋಗಿಸಲು ಇಂದ್ರನಿಗೆ ಹೇಳಿದರೆ ಆತ, ನಾಟ್ಯವನ್ನು ಓದಿ ಅರಗಿಸಿಕೊಂಡು ನಡೆಸಲು ದೇವತೆಗಳು ಅಸಮರ್ಥರು, ಮುನಿಗಳಿಗೆ ಹೇಳಬೇಕು ಎನ್ನುತ್ತಾನೆ. ಆಗ ಬ್ರಹ್ಮ ಭರತ ಮುನಿಗೆ ಹೇಳಬೇಕಾಯಿತು. (ಪು. ೧,೨)

ಕತೆಯೇ ಹೇಳುತ್ತಿರುವಂತೆ ಭರತ "ದೇವತೆ"ಗಳಲ್ಲಿ ಸೇರಿರಲಿಲ್ಲ. ಶಂ ಬಾ. ಜೋಷಿಯವರ ಶೋಧನೆಯ ಪ್ರಕಾರ ಮುನಿಗಳು ಆರ್ಯ ವೈದಿಕರೇ ಅಲ್ಲ. ಈ ಅಂಶಕ್ಕೇ ಪೂರಕವಾಗಿ ಭರತನ ನೂರು ಮಕ್ಕಳ ಹೆಸರುಗಳಿವೆ. ಅವು ವೈದಿಕರ ಹೆಸರುಗಳಂತೆ ಕೇಳಿಸುವುದೇ ಇಲ್ಲ. ನೋಡಿ: ಕಾಕಜಂಘ, ಭಲ್ಲಕ, ಕೇರಲ, ಹಿರಣ್ಯಾಕ್ಷ, ಭಯಾನಕ, ಬೀಭತ್ಸ, ಮಾಠರ, ಕರ್ತರಾಕ್ಷ, ಪುಂಡ್ರಾಕ್ಷ ಮೊದಲಾಗಿ ಅವೈದಿಕ, ರಾಕ್ಷಸರ ಹೆಸರುಗಳಲ್ಲವೇ ಇವು?

ನಾಟ್ಯಕಲೆ ವೈದಿಕರದ್ದಲ್ಲ, ಅವೈದಿಕ ದ್ರಾವಿಡರದ್ದು ಎಂಬುದಂತೂ ನಿಸ್ಸಂದೇಹವಾಯಿತು. ದ್ರಾವಿಡರಲ್ಲಿ ಪಶುಪಾಲಕರದ್ದೇ? ಕೃಷಿಕರದ್ದೇ? ಆರ್ಯವೈದಿಕರಂತೆ ಪಶುಪಾಲಕರಾಗಿದ್ದ ದ್ರಾವಿಡ ಪಶುಪಾಲಕರಿಂದ ನಾಟ್ಯ ಹುಟ್ಟಿಲ್ಲ. ಜಾನಪದ ಪರಂಪರೆಯೂ ಈ ಮಾತಿಗೆ ಸಾಕ್ಷಿ ಇದೆ. ಭೂತಾರಾಧನೆಯಿಂದ ಯಕ್ಷಗಾನ ಹುಟ್ಟಿದೆ. ದಲಿತರ ಹಬ್ಬ, ಜಾತ್ರೆಗಳ ಸಂದರ್ಭದ ಕುಣಿತ, ವೇಷ, ಹಾಡುಗಳೇ ನಾಟಕ ಕಲೆಯ ಮೂಲದಲ್ಲಿವೆ.

"ನಾಟ್ಯಶಾಸ್ತ್ರ"ದ ಕತೆ, ತನ್ನ ಕಾಲದ ಆರ್ಯ–ದಾವಿಡ ವರ್ಗ ಸಂಘರ್ಷವನ್ನೂ, ಅದರಲ್ಲಿ ಆರ್ಯವೈದಿಕರು ಗೆದ್ದುದನ್ನೂ ದಾಖಲು ಮಾಡುತ್ತಿದೆ. 'ಎಲ್ಲ ಜಾತಿ ಜನ ಕೇಳಲು, ನೋಡಲು ರಂಜಿತವಾದ' ಎಂದು ಇಂದ್ರ ಹೇಳಿದ್ದರೂ ಭರತ, ರಾಕ್ಷಸರು ಸೋತ, ಇಂದ್ರ ಗೆದ್ದ ನಾಟಕ ಆಡುತ್ತಿರುವುದನ್ನು ಗಮನಿಸಿ. ಇಂದ್ರನೇ ಈ ಅಸುರರನ್ನು ವಿಘ್ನಗಳನ್ನು ಹತ್ತಿಕ್ಕುತ್ತಾನೆ ಕೂಡ. ಹಾಗಾಗಿ ಮೊದಲು ಹೇಳಿದಂತೆ ಇದು ನಿಷ್ಪಕ್ಷಪಾತಿಯಲ್ಲ, ಏಕಪಕ್ಷೀಯ.

'ರಾಮಾಯಣ', 'ಮಹಾಭಾರತ'ಗಳನ್ನು ಬರೆದವರಾದರೂ ಯಾರೂ? ಬೇಡ ಕುಲದ ಮುನಿ "ವಾಲ್ಮೀಕಿ", ಶ್ವಪಚಕುಲದ ಪರಾಶರ ಮುನಿ ಮತ್ತು ಮೀನುಗಾರ ಕುಲದ ಮತ್ಸ್ಯಗಂಧಿಗೆ ಹುಟ್ಟಿದ ಮುನಿ "ವ್ಯಾಸ"ರಿಂದ ಅಲ್ಲವೇ? ಇವುಗಳ ಮೂಲರೂಪಗಳೇ ಬೇರೆ. ಕಾಲಾಂತರದಲ್ಲಿ ಬ್ರಾಹ್ಮಣ ಪಂಡಿತರುಗಳಿಂದ ಅವು ಪಡೆದ ಆಕಾರಗಳೇ ಬೇರೆ. ಮೂಲ ರೂಪಗಳಾದರೂ ಕೂಡ ಜನಪದ ಕತೆಗಳ ಆಧಾರದಿಂದ ಹುಟ್ಟಿದವು. ಮಹಾನಾಟಕಕಾರ ಕಾಳಿದಾಸನ ಕುಲವೂ 'ಕೀಳು'.

**ಶಿಲ್ಪಶಾಸ್ತ್ರ :**

'ಮಾನಸಾರ', 'ಮಯಮತ', 'ಕಶ್ಯಪ', 'ವೈಖಾನಸ', 'ಸಕಲಾಧಿಕಾರ' ಮೊದಲಾದ ವಾಸ್ತು ಶಾಸ್ತ್ರ ಗ್ರಂಥಗಳು ದ್ರಾವಿಡರಿಂದ ಆರ್ಯವೈದಿಕರು ಕಲಿತುದನ್ನೇ ಸೂಚ್ಯವಾಗಿ ತಿಳಿಸುತ್ತವೆ. (ಮುಂದೆ ನೋಡಿ) ಇದಕ್ಕೆ ಹರಪ್ಪ ನಾಗರಿಕತೆಯ ಶಿಲ್ಪಿಗಳು, ಬಡಗಿಗಳು, ತಂತ್ರಜ್ಞರು, ಕಾರಣರಾಗಿದ್ದಾರೆ. ಈ ಪರಂಪರೆಯನ್ನೇ ಮುಂದೆ ವೈದಿಕಶಾಹಿ ಬಳಸಿಕೊಂಡಿದೆ.

**ಇಂಜನಿಯರಿಂಗ್ ಕುಶಲತೆ :**

ಋಗ್ವೇದಾದಿ ಗ್ರಂಥಗಳಲ್ಲಿ ಸುಟ್ಟ ಇಟ್ಟಿಗೆಗಳ ಪ್ರಸ್ತಾಪವಿಲ್ಲ. "ಆರ್ಯರು ಭಾರತಕ್ಕೆ ಬಂದ ನಂತರ ಒಂದು ಸಾವಿರ ವರ್ಷಗಳ ಕಾಲ ದೊಡ್ಡದಾಗಿ ಏನನ್ನೂ ಕಟ್ಟಲಿಲ್ಲ." ("ಭಾರತೀಯ ವಿಜ್ಞಾನದ ಹಾದಿ": ಜಿ. ರಾಮಕೃಷ್ಣ. ಕ.ವಿ.ವಿ. ೧೯೯೭)

ಆದರೆ ಮೊದ ಮೊದಲು ದ್ರಾವಿಡರ ಜೊತೆ ಸಂಘರ್ಷಕಿಳಿದಿದ್ದ ಆರ್ಯವೈದಿಕರು ಬರಬರುತ್ತ ಅವರಲ್ಲಿದ್ದ ಜ್ಞಾನ–ವಿಜ್ಞಾನವನ್ನೆಲ್ಲ ಕರಗತ ಮಾಡಿಕೊಂಡು ಸಂಸ್ಕೃತದಲ್ಲಿ ಬರೆದು ಅದರ ವಾರಸುದಾರರೆನಿಸಿಕೊಂಡರು. ಇದಕ್ಕಾಗಿ ಕೃತಜ್ಞರಾಗುವುದಿರಲಿ ದ್ರಾವಿಡರನ್ನು, ರಾಕ್ಷಸ, ದಸ್ಯು, ದಾನವ ಮುಂತಾಗಿ ಕರೆದು ಕೀಳು ಮಾಡಿದರು. ಮನೆಗಳ ನಿರ್ಮಾಣಕ್ಕೆ ಅಗತ್ಯವಿದ್ದ ತಾಂತ್ರಿಕತೆಯನ್ನು, ಇಟ್ಟಿಗೆಗಳ ನಿರ್ಮಾಣ ಕೌಶಲವನ್ನು ವೈದಿಕರು ಹರಪ್ಪ ಜನರಿಂದ ಕಲಿತರು, ಎಂದು ಶುಲ್ಬ ಸೂತ್ರಗಳ ಆಧಾರದಲ್ಲಿ ರಾಮಕೃಷ್ಣ ಸ್ಪಷ್ಟ ಪಡಿಸಿದ್ದಾರೆ.

ಹರಪ್ಪ ಜನ ಕೃಷಿಕರಾಗಿದ್ದರಿಂದ ಖಗೋಲ ವಿಜ್ಞಾನದ ಪ್ರಾಥಮಿಕ ಜ್ಞಾನ, ಪಂಚಾಂಗದ ಲೆಕ್ಕಾಚಾರ, ತಿಳಿದು ಕೊಂಡಿದ್ದರು. ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ನಕ್ಷತ್ರಗಳ ಹೆಸರೂ ಕೂಡ ಇಲ್ಲ. ಅಥರ್ವಣವೇದದಲ್ಲಿ ಅವು ಮೊದಲ ಬಾರಿ ಕಾಣ ಸಿಗುತ್ತವೆ. ಅಥರ್ವಣವೇದ, ಮಾಟ, ತಂತ್ರ ಇಂಥವುಗಳಿಂದ ತುಂಬಿದ್ದು, ಆರ್ಯವೈದಿಕ ಬ್ರಾಹ್ಮಣರಿಂದ ಮೊದ ಮೊದಲು ಸ್ವೀಕೃತವಾಗಿರಲಿಲ್ಲ. ಅಥರ್ವಣವೇದದಲ್ಲಿರುವ ಜ್ಞಾನ ಭಂಡಾರಕ್ಕೆ ದ್ರಾವಿಡರೇ ಕಾರಣರಾಗಿದ್ದರು. ಶ್ರೌತ ವಾಙ್ಮಯದಲ್ಲಿ ತ್ರಯಿವಿದ್ಯೆ (ಋಗ್, ಯಜುಸ್, ಸಾಮ)ಗೂ, ಅಥರ್ವಣಕ್ಕೂ ತಿಕ್ಕಾಟವಿತ್ತು,. ತ್ರಯಿವಿದ್ಯೆ ಮಾತ್ರ ಗೌರವಾರ್ಹವಾಗಿತ್ತು. ಅಥರ್ವಣ ವೇದವನ್ನು ಬ್ರಾಹ್ಮಣರು ತಿರಸ್ಕಾರದಿಂದ ಕಂಡರು. ಈ ವೇದವನ್ನು ತಿಳಿದ ಋಷಿಗೆ, ಯಜ್ಞಗಳ ಮುಖ್ಯ ಸ್ಥಾನಗಳಲ್ಲಿ ಒಂದಾದ ಬ್ರಹ್ಮ ಸ್ಥಾನವನ್ನು ಕೊಡುತ್ತಿರಲಿಲ್ಲ. ಬಹುಶಃ ವೇದವ್ಯಾಸ ಅದಕ್ಕೆ ವೇದಗಳಲ್ಲಿ ಸ್ಥಾನಕಲ್ಪಿಸಿದ ನಂತರವೇ ವೇದಗಳು ನಾಲ್ಕು ಎಂದಾದವು.

**ವೈದ್ಯಕೀಯ :**

ವೈದ್ಯರನ್ನು, ವೈದ್ಯಕೀಯ ಜ್ಞಾನವನ್ನು ವಿರೋಧಿಸುತ್ತಿದ್ದ ಬ್ರಾಹ್ಮಣರು (ರಾಮಕೃಷ್ಣ: ಅದೇ ಪು. ೧೧೦, ೧೧೧) ಕಾಲಾಂತರದಲ್ಲಿ ಸಂಸ್ಕೃತದಲ್ಲಿ ಅದನ್ನು ದಾಖಲಿಸಿದರು.

ವೈದ್ಯ ಶಾಸ್ತ್ರ ನಿರ್ಮಾಪಕರು, “ದನ ಕಾಯುವವರು, ತಪಸ್ವಿಗಳು, ಬೇಡರು, ಕಾಡಿನಲ್ಲಿ ಸಂಚರಿಸತಕ್ಕ ಇತರ ಜನಗಳು.” (ಅದೇ ಪು. ೧೧೦) ಭಾರದ್ವಾಜನೆ ಆದ್ಯ ಮಾನವ ವೈದ್ಯ. ಆದರೆ ಈತ ಆರು ಪದಾರ್ಥಗಳನ್ನು ಮಾತ್ರ ನಿರೂಪಿಸಿದ್ದಾನೆ. ಅದರಿಂದಲೇ ಮಹರ್ಷಿಗಳಿಗೆ ಆಯುರ್ವಿಜ್ಞಾನ ಬೋಧೆಯಾಯಿತಂತೆ. ಈ ಪದಾರ್ಥಗಳು ವೈಶೇಷಿಕ ದರ್ಶನದಲ್ಲಿ ಹೇಳುವ ಆರು ಪದಾರ್ಥಗಳೇ. ‘ವೈಶೇಷಿಕ’ವು ನಾಸ್ತಿಕವಾದವಾಗಿತ್ತು. (ದೇ. ಪ್ರ.ಚ. “ಇಂಡಿಯನ್ ಅಥೇಯಿಸಂ” ಪು. ೨೫೪) ನ್ಯಾಯ ವೈಶೇಷಿಕರು ವೇದಗಳಿಂದ ತೀರ ದೂರವಿದ್ದರೂ, “ನ್ಯಾಯ ಸೂತ್ರ”, “ವೈಶೇಷಿಕ ಸೂತ್ರಗಳು”, (ಗೋತಮ, ಕಣಾದರವು) ವೇದಗಳಿಗೆ ಗೌರವ ತೋರಿಸುವ ಮೂಲಕ ಬ್ರಾಹ್ಮಣರಿಂದ ಬಚಾವಾದವು. (ವಾಟೀಜ್ ಲಿವಿಂಗ್.... ದೇ ಪು.ಚ. ೨೫೭ ಪು.) ಬ್ರಾಹ್ಮಣರನ್ನು ಎದುರು ಹಾಕಿಕೊಂಡು ಬದುಕುಳಿಯಲು ಸಾಧ್ಯವೇ ಇಲ್ಲದಾಗ ಹಿಂದಲ ವಿಜ್ಞಾನಿಗಳು, ಶಾಸ್ತ್ರಕಾರರು, ತತ್ವಜ್ಞರು ವೇದಗಳಿಗೆ ಸುಳ್ಳು ಗೌರವ ಸೂಚಿಸಿ, ತಮ್ಮ ಅನನ್ಯ ವಾದಗಳನ್ನು ಮಂಡಿಸುತ್ತಿದ್ದರೆಂದು ದೇವಿಪ್ರಸಾದ ವಿವರಿಸುತ್ತಾರೆ. ಇದಕ್ಕೆ ವರಹಮಿಹಿರ, ಬ್ರಹ್ಮಗುಪ್ತ ಮೊದಲಾದವರ ಉದಾಹರಣೆ ನೀಡಿದ್ದಾರೆ. ವೈದ್ಯಶಾಸ್ತ್ರ ದ್ರಾವಿಡರ ವೈಶೇಷಿಕದಿಂದ ಹುಟ್ಟಿತೆಂಬುದು ಗಮನಾರ್ಹ.

“ಗಣೀತ ಶಾಸ್ತ್ರ, ರೇಖಾಗಣಿತ, ಖಗೋಳ ಶಾಸ್ತ್ರಗಳು ಸಿಂಧೂ ನಾಗರಿಕತೆಯ ವೇಳೆಯಲ್ಲಾಗಲೇ ಗಮನಾರ್ಹವಾಗಿ ದಾಪು ಹೆಜ್ಜೆಗಳನ್ನು ಹಾಕಿದ್ದವು” (ರಾಮಕೃಷ್ಣ ಜಿ. ಅದೇ ೧೧೬).

**ರಸಾಯನ ಶಾಸ್ತ್ರ :**

ಹಿಂದೆ ಇದಕ್ಕೆ 'ರಸವಿದ್ಯೆ' ಎಂಬ ಹೆಸರಿತ್ತು. ತಂತ್ರವಿದ್ಯೆಗೂ, ರಸವಿದ್ಯೆಗೂ ನಿಕಟ ಸಂಬಂಧವಿತ್ತು. ದ್ರಾವಿಡ ದೈವಗಳಾದ ಶಿವ, ಪಾರ್ವತಿಯರು, ಪಾದರಸ ಮತ್ತು ಅಭ್ರಕವಾಗಿದ್ದರು. ಇಲ್ಲಿರುವ ಪ್ರಖ್ಯಾತ ಮಂತ್ರವೆಂದರೆ "ಓ ದೇವಿ ಅಭ್ರಕವು ನಿನ್ನ ಬೀಜ, ಪಾದರಸವು ನನ್ನ ಬೀಜ. ಇವೆರಡ ಸಂಯೋಗವು ಮೃತ್ಯು ಮತ್ತು ದಾರಿದ್ರ್ಯಗಳನ್ನು ನಾಶಮಾಡುತ್ತವೆ." (ಅದೇ ೨೦೮) ರಸಾಯನ ಶಾಸ್ತ್ರದ ಅಧಿದೇವಿ ಸ್ತ್ರೀ ದೈವ (ಅದೇ ೨೦೯) ಹರಪ್ಪದ ಮಡಕೆಗಳ ಮೇಲಿನ ಮಾಸಿ ಹೋಗದ ಬಣ್ಣದ ಚಿತ್ರಗಳ ತಯಾರಿಕೆಗೆ ರಸಾಯನ ಶಾಸ್ತ್ರದ ಅರಿವು ಅಗತ್ಯವಿದ್ದು, ಅದನ್ನು ಆ ಜನ ಪಡೆದಿದ್ದಿರಲೇಬೇಕು. (ಅದೇ ಪು. ೨೧೧)

**ಖಗೋಲ ಶಾಸ್ತ್ರ :**

'ಆರ್ಯಭಟ' ಪ್ರಖ್ಯಾತ ಖಗೋಳಶಾಸ್ತ್ರಜ್ಞ, ಗಣೀತ ಶಾಸ್ತ್ರದಲ್ಲೂ ಪಾರಂಗತ. ಕ್ರಿ.ಶ. ೪೭೬ರಲ್ಲಿ ಹುಟ್ಟಿದ. ಯಾವುದೋ ಕೆಳಜಾತಿಗೆ ಸೇರಿದ್ದವ "ಇಷ್ಟೊಂದು ಪ್ರಚಂಡ ಪಾಂಡಿತ್ಯ ದೊರಕಿಸಿಕೊಳ್ಳಲು ಅವನಿಗೆ ಹೇಗೆ ಸಾಧ್ಯವಾಯಿತು?" (ರಾಮಕೃಷ್ಣ ೨೩೧) "ಕಳೆದ ಒಂದು ದಶಕದಲ್ಲಿ ಕೆಲವು ವಿದ್ವಾಂಸರು ಹಾಗೂ ಅವರ ರಾಜಕೀಯ ಅನುಯಾಯಿಗಳು ಆರ್ಯಭಟನಿಗೆ ಜನಿವಾರ ಹಾಕಿ ಅವನನ್ನು ಆರ್ಯಭಟ್ಟನನ್ನಾಗಿಸಿದ್ದಾರೆ." (ಅದೇ) 'ಆರ್ಯಭಟ' ಯಾವ ಜಾತಿಯವ? ಭೂಮಿ ತನ್ನ ಅಕ್ಷದ ಸುತ್ತ ತಿರುಗುತ್ತದೆಂಬ ಮಹತ್ವದ ವಿಚಾರ ಹೇಳಿದವನೀತ.

**ತತ್ವಜ್ಞಾನ :**

ದಲಿತರ (ಶೂದ್ರರ) 'ಯೋಗ', 'ಸಾಂಖ್ಯ'ಗಳು ಗುಪ್ತರ ಕಾಲಕ್ಕೆ ತಮ್ಮ ಅಂತಿಮರೂಪ ಧರಿಸಿದವೆಂದು ಆರ್.ಎಸ್.ಶರ್ಮಾ ಹೇಳುತ್ತಾರೆ. ಭಾರತದ ತೊಂಬತ್ತಕ್ಕೂ ಹೆಚ್ಚು ತತ್ವ ಶಾಸ್ತ್ರಗಳು ನಾಸ್ತಿಕವೆಂದೂ, ಅವೆಲ್ಲ ಅವೈದಿಕ ಪರಂಪರೆಯವು ಎಂದೂ ದೇ.ಪ್ರ.ಚ ಹೇಳುತ್ತಾರೆ. ಲೋಕಾಯತ, ಚಾರ್ವಾಕ, ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ತಾಂತ್ರಿಕ, ಪೂರ್ವಮೀಮಾಂಸೆ, ಕಾಳಾಮುಖ, ಪಾಶುಪತ, ಭೈರವ, ನಾಥ, ಸಿದ್ಧ, ಇವೆಲ್ಲವೂ ಅವೈದಿಕರ ಅಂದರೆ ದ್ರಾವಿಡಾದಿ ಆರ್ಯೇತರರ ತತ್ತ್ವಗಳು. ಇವುಗಳಲ್ಲಿ ದಲಿತರ ಕೊಡುಗೆ ಅಪಾರ. ಭಾರತೀಯ ಜೀವನ ಮತ್ತು ಚಿಂತನೆಯ ಮೇಲೆ ಅತ್ಯಂತ ಆಳವಾದ ಪ್ರಭಾವ ಬೀರಿರುವ ತಾಂತ್ರಿಕ, ಯೋಗಗಳಿಗೆ ಕಾರಣರು ದಲಿತರೇ.

**ಬ್ರಾಹ್ಮಣರು ಮತ್ತು ದಲಿತ ಸಂಸ್ಕೃತಿ :**

"The Brahmin of the Punjab is racially of the same stock as the chamar of Punjab and Brahmin of Madras is of the same race as the paraiah of Madras." (ಡಾ. ಅಂಬೇಡಕರ)

ಬ್ರಾಹ್ಮಣ, ದಲಿತ ಎಂಬ ಈ ವೈರುದ್ಯಾತ್ಮಕ ಪರಿಕಲ್ಪನೆಗಳು ಭಾರತದ ಸಾಂಸ್ಕೃತಿಕ ಸಂಘರ್ಷದ ಕೇಂದ್ರ ನೆಲೆಗಳು. ಈ ಘರ್ಷಣೆಗೆ ದೀರ್ಘಕಾಲದ ಇತಿಹಾಸವಿದೆ. ಇದು ವರ್ಗೀಯ ಸಂಘರ್ಷ ಮಾತ್ರವಲ್ಲ, ವರ್ಣ, ಜಾತಿ, ಧರ್ಮ, ಸಿದ್ಧಾಂತದ ಸಂಘರ್ಷವಾಗಿದೆ. ಜಗತ್ತಿನ ಯಾವ ದೇಶಗಳಲ್ಲೂ ಕಾಣದ ಒಂದು ವಿಶಿಷ್ಟ ಸ್ವರೂಪ ಇದಕ್ಕಿದೆ.

**ಕಾರಣವೇನು ? :**

ಪಶುಪಾಲಕ ಸಂಸ್ಕೃತಿಯಲ್ಲೇ ತಮ್ಮ ಬದುಕಿನ ಧನ್ಯತೆಯನ್ನು ಕಂಡುಕೊಂಡಿದ್ದ ಆರ್ಯವೈದಿಕರು, ದ್ರಾವಿಡರ ಕೃಷಿ ಸಂಸ್ಕೃತಿಗೆ ಸಂಪೂರ್ಣ ವಿರುದ್ಧವಿದ್ಧವಿದ್ದರು. ವೇದ ಸಾಹಿತ್ಯದಿಂದ ಇದಕ್ಕೆ ಬೇಕಾದಷ್ಟು ನಿದರ್ಶನಗಳನ್ನು ನೀಡಬಹುದು. ವೈದಿಕರ ಸೈನಿಕ ನೇತಾರ ಇಂದ್ರ, ಸಿಂಧು ಪ್ರದೇಶದ ಪುರ, ಅಣೆಕಟ್ಟುಗಳನ್ನು ನಾಶಮಾಡುತ್ತಾನೆ. ಕುದುರೆ, ಆಕಳು ಮೊದಲಾದ ಪಶುಗಳ ಮಾಂಸವನ್ನು ತಿನ್ನುತ್ತಿದ್ದ ವೈದಿಕರು, ಭೂಮಿಯನ್ನು ಉತ್ತರೆ ಅಲ್ಲಿದ್ದ ಕ್ರಿಮಿಕೀಟ ಸತ್ತು ಪಾಪ ಬರುತ್ತದೆಂಬ ವಿತಂಡವಾದಕ್ಕೆ ಜೋತು ಬಿದ್ದಿದ್ದರು. ಷಟ್‌ಕರ್ಮಗಳಲ್ಲಿ ಯಾವ ವಿಧದ ದೈಹಿಕ ಶ್ರಮವೂ ಇಲ್ಲದಿರುವಾಗ ಬೇಸಾಯಗಾರಿಕೆ ದೂರ ಉಳಿಯಿತು.

ಬೌದ್ಧಾಯನನ ಪ್ರಕಾರ ವೇದಾಭ್ಯಾಸವು ಕೃಷಿ ಕಸುಬುಗಳನ್ನು ಅಡ್ಡಿ ಮಾಡುತ್ತದೆ, ಕೃಷಿ ಕಸಬು ವೇದಭ್ಯಾಸವನ್ನು ತಡೆಯುತ್ತದೆ ಎಂಬ ಮಾತು ಮೇಲಿನವಿಚಾರಕ್ಕೆ ಪೂರಕವಾಗಿದೆ.

ವರ್ಣವ್ಯವಸ್ಥೆಯ ನಿಯಮಾನುಸಾರ ಮೊದಲ ಎರಡು ಉತ್ತಮ ವರ್ಣದವರು ಒಕ್ಕಲುತನ ಮಾಡುವಂತಿರಲಿಲ್ಲ. ವೈಶ್ಯ, ಶೂದ್ರರು ವರ್ಣವ್ಯವಸ್ಥೆಗೆ ನಂತರ ಸೇರಿಸಲ್ಪಟ್ಟವರು. ಅವರು ಮಾತ್ರ ಭೂಮಿಗೆ ಸಂಬಂಧಪಟ್ಟವರು. ಇದರರ್ಥ ವರ್ಣವ್ಯವಸ್ಥೆಯೊಳಗೇ ವೈರುದ್ಯಾತ್ಮಕ ವೃತ್ತಿಗಳಿಗೆ, ತನ್ಮೂಲಕ ಸಾಂಸ್ಕೃತಿಕ ಮುಖಾಮುಖಿಗೆ ಆಸ್ಪದವಾಗುವಂತಾಯಿತು. ದೇಶಾದ್ಯಂತ ಕೃಷಿಯೇ ಪ್ರಧಾನ ವೃತ್ತಿಯಾಗಿ ಉಳಿದುದರಿಂದ ವೈದಿಕ ಸಂಸ್ಕೃತಿ ಅನೇಕ ರೀತಿಯ ಒಪ್ಪಂದಗಳಿಗೆ ಬರುವುದು ಅನಿವಾರ್ಯವಾಯಿತು. ಸಂಘರ್ಷದೊಟ್ಟಗೇ ಇರುವ ಸಮೀಕರಣದ ಇಕ್ಕಟ್ಟು ಇದು. ಮಡಿ ಮೈಲಿಗೆ, ಎಡ–ಬಲ ದ್ವಂದದಲ್ಲಿ ಇದು ಢಾಳಾಗಿ ಕಂಡುಬರುತ್ತದೆ.

ವೈದಿಕ ಸಂಸ್ಕೃತಿಯ ಪ್ರಕಾರ ಭೂಮಿ ಕೆಲಸ, ಅದಕ್ಕೆ ಪೂರಕವಾದ ಕರಕುಶಲ ಕರ್ಮಗಳು, ವ್ಯಾಪಾರ ಇವೆಲ್ಲ ಅಸ್ಪೃಶ್ಯ ದಂಧೆಗಳಾಗಿದ್ದವು. ಅನ್ನವಿಲ್ಲದೆ ಬದುಕಲು ಯಾರಿಗೂ ಸಾಧ್ಯವಿಲ್ಲ. ಹೀಗಿದ್ದೂ ಅನ್ನ ನೀಡುವ ಭೂಮಿ, ಮತ್ತು ಅದಕ್ಕಾಗಿ ದುಡಿಯುವ ಜನರನ್ನು ವೈದಿಕ ಪರಂಪರೆ ಯಾಕಿಷ್ಟು ದ್ವೇಷಿಸಿತು?

ಏಕೆಂದರೆ ಪಶುಪಾಲಕ ವೈದಿಕ ಸಂಸ್ಕೃತಿಗೆ ನೇರ ವಿರುದ್ಧವಾಗಿದ್ದುದ್ದು ಕೃಷಿಕ ದಲಿತ ಸಂಸ್ಕೃತಿ. ಮಾತೃದೈವಗಳ ವಿರುದ್ಧ ಪಿತೃ ದೈವಗಳಿದ್ದವು, ಮಾತೃ ಪ್ರಧಾನ ಸಮಾಜದ ವಿರುದ್ಧ ಪಿತೃ ಪ್ರಧಾನ ಸಮಾಜವಿತ್ತು.

ಈ ಮುಖಾಮುಖಿ ತೀವ್ರತರ ಸಂಘರ್ಷಗಳಿಗೆ ಎಡಮಾಡಿತ್ತು. ಆದರೆ ಇದು ಬಹುಕಾಲ ಮುಂದುವರೆಯುವಂತಿರಲಿಲ್ಲ. ವರ್ಗ ಸಮಾಜದ ಬೇರೆ ಬೇರೆ ವೈರುದ್ಯಗಳು ಪ್ರಧಾನ ನೆಲೆಗೆ ಬರುತ್ತಿದ್ದವು. ಅಂತಿಮ ನಿರ್ಣಯ ಆಗಲೆ ಬೇಕಿತ್ತು. ಹಾಗಾದುದರ ಪರಿಣಾಮವೆಂದರೆ ಇಡೀ ಶೋಷಕ ವ್ಯವಸ್ಥೆಯ ಬೆಂಬಲಿದಿಂದ ಬ್ರಾಹ್ಮಣರು ಸರ್ವ ಶ್ರೇಷ್ಠರೆಂದೂ, ದಲಿತರು ಸರ್ವಕನಿಷ್ಟರೆಂದೂ ನಿರ್ಧಾರವಾದುದು. ಇಲ್ಲಿಂದ ಪ್ರಾರಂಭವಾದ ದಲಿತ ವಿರೋಧಿ ಮನೋಭಾವ ಯಾವ ಮಟ್ಟದ ಕೀಳುತನಕ್ಕೂ ಇಳಿಯಲು ಹೇಸಲಿಲ್ಲ. ಅಸ್ಪೃಶ್ಯತೆ ಅದರ ಒಂದು ಮುಖ.

ದ್ರಾವಿಡ ಕುಲಗಳ ಒಳಮೈಯನ್ನು ಪ್ರವೇಶಿಸಿ, ಸಂಪೂರ್ಣ ನಾಶನ ಕ್ರಿಯೆಯ ಹುಂಬತನಕ್ಕಿಳಿಯಲು ಯತ್ನಿಸಿದ ವೈದಿಕರು 'ವರ್ಣಧರ್ಮ'ದ ಚೌಕಟ್ಟನ್ನು ತಮ್ಮ ಪರವಾಗಿ

ನಿರ್ಮಿಸಿಕೊಂಡು ಜಾತಿ ಶ್ರೇಣೀಕರಣದಲ್ಲಿ, 'ಧರ್ಮ-ಶಾಸನದಲ್ಲಿ', ದಲಿತರನ್ನು ಸಂಪೂರ್ಣ ತುಳಿದು ಹಾಕಿದರು. ಇದು ನಡೆದುದು ಕ್ರಿ.ಪೂ. ೬೦೦ರ ಸುಮಾರು.

ಆದರೆ ಮೇಲೆ ಹೇಳಿದಂತೆ ಬ್ರಾಹ್ಮಣರು ಅನೇಕ ಬಗೆಯ ಸಾಂಸ್ಕೃತಿಕ ಒಪ್ಪಂದಗಳನ್ನು ಮಾಡಿಕೊಳ್ಳದೇ ದಲಿತ ಸಂಸ್ಕೃತಿಯನ್ನು ಕೀಳು ಮಾಡುವುದು ಶಕ್ಯವಿರಲಿಲ್ಲ. ಅದಕ್ಕೆ ಅವರು ಯಾವ ವಿಧದ ಬೆಲೆ ತೆರಲು ಸಿದ್ಧರಿದ್ದರು. ಕೃಷಿ ಪ್ರಾಧಾನ್ಯತೆಯಿಂದಾಗಿ ಮಾತೃದೈವ, ತಾಂತ್ರಿಕಪಂಥಗಳನ್ನು ಒಳಗೊಂಡ ದಲಿತ ಸಂಸ್ಕೃತಿಯ ಹಲವಾರು ಆಶಯಗಳನ್ನು ಸಮೀಕರಿಸಿಕೊಂಡರು. ಇದು ಒಂದು ವಿಧದ ಒಪ್ಪಂದ ಅಥವಾ ಸೋಲಾದರೆ, ಇನ್ನೊಂದೆಡೆ ದಲಿತರ ಶ್ರೇಷ್ಠ ಸಾಂಸ್ಕೃತಿಕತೆಗಳನ್ನು ಕನಿಷ್ಠಗೊಳಿಸುವುದಕ್ಕೆ ಎಲ್ಲ ಬಗೆಯ ಪ್ರಯತ್ನ ಮಾಡಿದುದು. 'ಅಮ್ಮ', ಬ್ರಾಹ್ಮಣರ ಹುಡುಗಿಯೆಂದೂ, ಕೋಣಾಸುರ ದಲಿತ ಹುಡುಗನೆಂದೂ ಕಟ್ಟಿದ ಕತೆ, ಎಲ್ಲಮ್ಮ ರೇಣುಕೆಯಾಗಿ ಪುರಾಣ ಸೇರಿದ್ದು, ಮೈಲಾರ ಮಾರ್ತಂಡನಾದದ್ದು, ಭೂತನಾಥ ಶಿವನಾದದ್ದು, ಮುಂತಾದವು ಇಂಥ ನಿದರ್ಶನಗಳು.

ಸಮೀಕರಣದ ಸಂದರ್ಭದಲ್ಲಿ ಬ್ರಾಹ್ಮಣರು ಅನುಸರಿಸಿದ ಕ್ರಮಗಳು ತುಂಬ ಕುತೂಹಲಕಾರಿಯಾಗಿವೆ. ಇದರ ಬಗ್ಗೆ ವೀಣಾದಾಸ್, ಡ್ಯೂಮಾಂಟ್ ಮೊದಲಾದವರ ಚಿಂತನೆಗಳು ವಿಶೇಷವಾಗಿದ್ದರೂ, ನನಗೆ ಅವು ಕಾಣಿಸುವ ಕ್ರಮವೇ ಬೇರೆ.

ಎಡ-ಬಲ, ಮೈಲಿಗೆ-ಮಡಿಗಳ ಬಗ್ಗೆ ಬ್ರಾಹ್ಮಣರು ಯಾವ ಮಟ್ಟಕ್ಕಿಳಿದರೆಂದರೆ, 'ವರ್ಣ' ಪರಿಕಲ್ಪನೆ ಹುಟ್ಟು ಹಾಕಿದ್ದ, ತಲೆ, ಭುಜ, ತೊಡೆ ಕಾಲುಗಳ ಶ್ರೇಣಿಕರಣದ ಬದಲಿ ಇಡೀ ದೇಹವನ್ನು ಎಡ-ಬಲ ಎಂದು ಸೀಳಿ ಹಾಕಿದರು. ಈಗ ದ್ರಾವಿಡರಲ್ಲಿರುವ ಹೊಲೆಯ-ಮಾದಿಗ ಸಂಸ್ಕೃತಿ ಎಡಭಾಗವಾಯಿತು. ಆರ್ಯ ವೈದಿಕರು ಬಲಭಾಗದವರು. ವೈದಿಕರ ಈ 'ದ್ರಾವಿಡೀಕರಣಕ್ರಿಯೆ' ಪೂರ್ಣ ಸ್ವರೂಪ ತಾಳಿತು. ಸಾಮಾಜಿಕವಾಗಿ, ದಲಿತರನ್ನು ತುಳಿದು ಹಾಕಿದ ಬ್ರಾಹ್ಮಣರು ತಮ್ಮ ದೇಹದಲ್ಲೇ ದಲಿತರ ಶ್ರೇಷ್ಠ ಸಂಸ್ಕೃತಿಯನ್ನು ಆವಾಹಿಸಿಕೊಂಡು, ದರ್ಶಿಸಿಕೊಳ್ಳುವ ಅನಿವಾರ್ಯತೆಗಿಳಿದರು. ಶಂಕರಾಚಾರ್ಯರ ಅದ್ವೈತ ದರ್ಶನಕ್ಕೆ ಅವರು ಹುಟ್ಟಿ ಬೆಳೆದ ಪ್ರದೇಶದ ತಾಂತ್ರಿಕ ಸಿದ್ಧಾಂತ ಬಹುಮಟ್ಟಿಗೆ ಕಾರಣವಾಗಿತ್ತು. 'ಸೌಂದರ್ಯ ಲಹರಿ'ಯಲ್ಲೂ ಅದು ಪ್ರಕಟಗೊಂಡಿದೆ. ಶ್ರೀ ಚಕ್ರಪೂಜೆಯಂತೂ ಸ್ಪಷ್ಟ ಸಾಕ್ಷಿಯಾಗಿದೆ. ರಾಮಾನುಜಾಚಾರ್ಯರ ಗುರುಗಳಲ್ಲಿ ಒಬ್ಬರು ದಲಿತರಿದ್ದುದನ್ನು ಇನ್ನೊಂದು ಉದಾಹರಣೆಯಾಗಿ ನೋಡಬೇಕು. ಮಾಧ್ವರು ಸ್ಥಳೀಯ ಬುಡಕಟ್ಟು ಮೂಲದ 'ಹನುಮಂತ'ನನ್ನು ದೈವವಾಗಿ ಒಪ್ಪಿ ಆರಾಧಿಸಿದ್ದು ಹೀಗೆಯೆ.

ಮಡಿ, ಬಲಗಳು; ಮೈಲಿಗೆ, ಎಡಗಳಿಗೆ ಸಾಪೇಕ್ಷವಾಗಿವೆ. ಅವು ಪರಸ್ಪರ ವಿರುದ್ಧವಾದರೂ ಅಂತರ್‌ಸಂಬಂಧಿತವಾಗಿವೆ ಎಂಬ ಡೈಲೆಕ್ಟಿಕಲ್ ಅನುಭವಕ್ಕೆ ಬರಬೇಕಾಯಿತು ವೈದಿಕರು.

ನಮಗಿಲ್ಲಿ ಮುಖ್ಯವಾಗುವ ಅಂಶ ಮೈಲಿಗೆ, ಎಡಗಳಲ್ಲಿ ದಲಿತ ಸಂಸ್ಕೃತಿಯನ್ನು ಅಳವಡಿಸಿಕೊಂಡಿರುವ ವಿಚಾರ.

ಎಡಭಾಗಕ್ಕೆ ಸಂಬಂಧಿಸಿದ ಬ್ರಾಹ್ಮಣೀಯ ಆಚರಣೆಗಳಲ್ಲಿ, ನಾಗಪೂಜೆ, ಹಿರಿಯರ ಪೂಜೆ, ಭೂತದೆವ್ವ, ಸಾವುಗಳಿಗೆ ಸಂಬಂಧಿಸಿದ ವಿಧಿಯಾಚರಣೆಗಳೀವೆ.

ಈ ಕ್ರಮದ ಸಾಮಾಜಿಕ ಪರಿಣಾಮ ಹೇಗೆ ಬೆಳೆಯಿತೆಂದರೆ, ದಕ್ಷಿಣ ಭಾರತದಲ್ಲಿ ಇಡೀ ಜಾತಿ ವ್ಯವಸ್ಥೆಯನ್ನು ಎಡಗೈ ಜಾತಿಗಳು, ಬಲಗೈ ಜಾತಿಗಳು ಎಂಬ ಪಣ ವ್ಯಾಜ್ಯಕ್ಕೀಡು ಮಾಡಲಾಯಿತು.

ಮಧ್ಯಯುಗದ ರಾಜಕೀಯ ದುರುದ್ದೇಶಕ್ಕೆ ಇದು ಬಳಕೆಯಾಯಿತು. ಸ್ವತಃ ಹೊಲೆಯ ಮಾದಿಗರನ್ನೇ ಸೀಳಿಹಾಕಿತು. ಪ್ರಭುತ್ವದ, ಪುರೋಹಿತಶಾಹಿಯ ಒಡೆದಾಳುವ ಕುತಂತ್ರಕ್ಕೆ ಜನತೆ ಬಲಿಯಾಯಿತು.

"ಅಶುಭ ಪ್ರಸಂಗಗಳಲ್ಲಿ ಬ್ರಾಹ್ಮಣರು ಎಡಕ್ಕೆ ಬರುವಂತೆ ಜನಿವಾರವನ್ನು ಧರಿಸಬೇಕೆಂಬ ನಿಯಮವಿದೆ."

"ಹೆಣವು ಶಿವನೆಂದು ಗರುಡ ಪುರಾಣ ಹೇಳುತ್ತದೆ. ದೇಹದಲ್ಲಿರುವ ಪ್ರೇತಕ್ಕೆ ರಾಕ್ಷಸರಿಂದ ಅಪಾಯವಾಗದಂತೆ ಪಿಂಡದಾನ ಮಾಡುವುದು ಕಡ್ಡಾಯ. ಸ್ಮಶಾನದ ಸಪಿಂಡೀಕರಣ ಎಂಬ ಕೊನೆಯ ದಾನದ ಮೂಲಕ ಪ್ರೇತ, 'ಪಿತೃ' ಆಗುವುದು. ಹೆಣ ಸುಡುವುದೆಂದರೆ ಯಜ್ಞಕ್ಕೆ ಆಹುತಿ ನೀಡಿದಂತೆ" (ವಿವರಗಳಿಗೆ ನೋಡಿ: ವೀಣಾದಾಸ್, "ಸ್ಟ್ರಕ್ಚರ್ ಏಂಡ್ ಕಾಗ್ನಿಶನ್" ೧೯೭೭).

ಇಲ್ಲಿರುವ ಪ್ರೇತದ ಕಲ್ಪನೆ ದಲಿತರಲ್ಲಿರುವ ಭೂತದೈವದ ಕಲ್ಪನೆಯೇ. ಕರಾವಳಿ ಭಾಗದ ದಲಿತರು ಈ ದೈವವನ್ನು ಆರಾಧಿಸಿದರು. ಬ್ರಾಹ್ಮಣರಾದಿಯಾಗಿ ಇತರರೂ ಆರಾಧಿಸುವಂತೆ ಮಾಡಿದರು. ಬ್ರಾಹ್ಮಣರು ಪ್ರೇತದ ಹಂತಕ್ಕೆ ನಿಲ್ಲದೆ ವಿಧಿಗಳ ಮೂಲಕ ಅದನ್ನು 'ಪಿತೃ'ವಾಗುವಂತೆ ಕಲ್ಪಿಸಿದರು. ಪ್ರೇತ ಪ್ರಪಂಚ ಇವರ ದೃಷ್ಟಿಯಲ್ಲಿ 'ದುರ್ಗತಿ', ಪಿತೃಲೋಕ 'ಸದ್ಗತಿ'. ಅಗ್ನಿ ಹೆಣವನ್ನು ಸುಡುವ ಮೂಲಕ ಆತ್ಮವನ್ನು ಪಿತೃಲೋಕಕ್ಕೆ ಒಯ್ಯುವುದೆಂದು ಭಾವಿಸಿದರು.

"ನಿರ್ದಿಷ್ಟ ದಿನಗಳವರೆಗೆ ಇರುವ ಪ್ರೇತ ಸ್ಥಿತಿ ಸಪಿಂಡೀಕರಣದಿಂದ ಪಿತೃ ಆಗುತ್ತದೆ. ಅಲ್ಲಿಯವರೆಗೆ ಕುಟುಂಬ 'ಸೂತಕ'ದಲ್ಲಿರುತ್ತದೆ. (ಸು=ಹಡೆ, ಸೂತ್ರಿ=ಯೋನಿ, ಸೂತಿಕ=ಹಡೆದವಳು, ಸೂತಕ=ಮೈಲಿಗೆ)"

ಸೂತಕವನ್ನು "ಹೆಣ್ಣಿನಿಂದಾಗಿ" ಕಲ್ಪಿಸಿಕೊಳ್ಳುತ್ತಿರುವುದನ್ನು ಗಮನಿಸಿ. ಹೆಣ್ಣು ತನಗಷ್ಟೇ ಅಲ್ಲ ಇಡೀ ಕುಟುಂಬಕ್ಕೇ 'ಮೈಲಿಗೆ' ತರುವವಳೆಂದು ಭಾವಿಸಲಾಯಿತು. ಇದು ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಗೆ ತೋರಿದ ವಿರೋಧಾತ್ಮಕ ಪ್ರತಿಕ್ರಿಯೆ.

ಹುಟ್ಟಿನ ಸಂದರ್ಭದಲ್ಲಿ ಮಾಡುವ "ಸೂತಿಕಾ ಷಷ್ಠಿ" ಬ್ರಾಹ್ಮಣ ಸಂಸ್ಕೃತಿಗೆ ದಲಿತರಿಂದ ಸೇರಿರಬೇಕು. ೬ನೇ ದಿನ ಮಗುವನ್ನು ಷಷ್ಠಿದೇವಿಗೆ ಅರ್ಪಿಸುವ ಈ ಕ್ರಮ ದ್ರಾವಿಡರಲ್ಲಿ ಶೆಟ್ಟೆವ್ವನ ಆಚರಣೆ. ಇಲ್ಲಿ ಮಗುವಿನ ಹಣೆಬರಹ ಬರೆಯುವ ಕೆಲಸ ಪುರುಷದೈವ (ಬ್ರಹ್ಮ)ದ್ದಲ್ಲ. ಶೆಟ್ಟೆವ್ವ, (ಷಷ್ಠಿ) ಜೋಕುಮಾರನ ತಾಯಿ.

ಮೇಲೆ ಹೇಳಿದ ಈ ಯಾವ ವಿಧಿಗಳೂ ವೇದಕಾಲದವಲ್ಲ. ಅಂದರೆ ಆರ್ಯವೈದಿಕರ ಜೀವನದಲ್ಲಿ ಅವು ದ್ರಾವಿಡರ ಸಂಪರ್ಕದ ನಂತರವೇ ಪ್ರವೇಶಿಸಿದವು.

ಬ್ರಾಹ್ಮಣರು ಋಗ್ವೇದದ ಕಾಲದಲ್ಲಿ ಶ್ರೌತವಿಧಿ ಆಚರಿಸುತ್ತಿದ್ದರು. ನೆಲಸುಗಾರ ದಲಿತರ ಸಂಪರ್ಕದಿಂದ ವಲಸೆಗಾರಿಕೆ ಕೈಬಿಟ್ಟು ಮನೆಗಳಲ್ಲಿ ವಾಸಿಸತೊಡಗಿದಾಗ 'ಗೃಹ್ಯಸೂತ್ರ'ಗಳನ್ನು ರಚಿಸಿಕೊಂಡರು. ಈ ಸೂತ್ರಗಳ ಕಾಲ ಕ್ರಿ.ಪೂ. ೬೦೦–೩೦೦. ಈ ಹಂತದಲ್ಲೇ ಎಡ–ಬಲ, ಮಡಿ–ಮೈಲಿಗೆ, ಪವಿತ್ರ–ಅಪವಿತ್ರಗಳ ತಾರತಮ್ಯ ಪ್ರಬಲಿಸಿದ್ದು.

"ಸತ್ತಾಗ ಇರುವ ಮೂರು ಬೆಂಕಿ ಶ್ರೌತ ಬೆಂಕಿಯೆ ಹೊರತು ಗ್ರಹ್ಯ ಬೆಂಕಿಯಲ್ಲ. ಗ್ರಹ್ಯ ಬೆಂಕಿಯಿಂದ ಹೆಣ ಸುಡುವಂತಿಲ್ಲ."

"ಉತ್ತರ ಭಾರತದ ಮರಣ ಸಂಸ್ಕಾರ ವಿಧಿ ಮಾಡುವ ಪುರೋಹಿತನಿಗೆ 'ಮಹಾ ಬ್ರಾಹ್ಮಣ' ಎನ್ನುತ್ತಾರೆ. ಈತ ಅಸ್ಪೃಶ್ಯ. ಈ ಸಂದರ್ಭ ಬಿಟ್ಟರೆ ಬೇರಾವ ಸಂದರ್ಭದಲ್ಲಿ ಈತನ ಜೊತೆ ಸಂಬಂಧವಿರುವುದಿಲ್ಲ." (ಡ್ಯೂಮಾಂಟ್, ಪು. ೯೭)

'ಮದುವೆ'ಹುಟ್ಟಿದ್ದು ಕೃಷಿ ಸಂಸ್ಕೃತಿಯಲ್ಲಿ. ವಿವಾಹದ ಆಚರಣೆಗಳೆಲ್ಲ ಬಹುತೇಕ ಕೃಷಿ ಸಂಸ್ಕೃತಿಯ ಸಂಕೇತಗಳಿಂದ ತುಂಬಿ ಹೋಗಿವೆ. 'ಕೃಷಿ', ಹೊಲೆಯ–ಮಾದಿಗರ ಶೋಧನೆಯಾದ್ದರಿಂದ 'ಮದುವೆ'ಯೂ ಅವರ ಕೊಡುಗೆಯೇ. ಇದಕ್ಕೆ ಒಂದು ಸ್ಪಷ್ಟ ಸಾಕ್ಷಿ ಇಲ್ಲಿದೆ–

"any Brahman who did not worship the goddess Matangi during the weddings was to be carefully avoided by every one," (ವೀಣಾದಾಸ್ ಪು. ೬೩)

ಮಾದಿಗರ ಮೂಲತಾಯಿ 'ಮಾತಂಗಿ', 'ಫರ್ಟಿಲಿಟಿ' ಪಂಥದ ಕೇಂದ್ರ ಶಕ್ತಿ. ಮದುವೆ ಈ ಪಂಥದ ಅವಿಭಾಜ್ಯ ಭಾಗ.

ಬ್ರಾಹ್ಮಣರು ಬಲಗೈಯಿಂದ ಪವಿತ್ರ ಕೆಲಸ ಮಾಡಬೇಕು. ಎಡಗೈಯಿಂದ ಭೂತ, ಮಾಟ, ಸಂಬಂಧಿ ಕ್ರಿಯೆ ಮಾಡಬೇಕು. ಮನೆಯ ಅಗ್ನಿ ಉರಿಸುವಾಗ, ಮದುವೆ, ಗರ್ಭಿಣಿ, ಹುಟ್ಟು, ಚೌಲ, ಸುಗ್ಗಿ ಸಂಬಂಧಿ ಆಚರಣೆಗಳ ಸಂದರ್ಭದಲ್ಲಿ ಜನಿವಾರವನ್ನು ಎಡ ಹೆಗಲ ಮೇಲೆ ಧರಿಸಬೇಕು."

ಪಶುಪಾಲಕ ಸಂಸ್ಕೃತಿಯ ವೇದವಿಹಿತ ಯಜ್ಞ ಕರ್ಮದಿಂದ ಬಿಡುಗಡೆಗೊಂಡು ಹೊಲೆಯ–ಮಾದಿಗರ ಕೃಷಿ ಸಂಸ್ಕೃತಿಗೆ ಪ್ರವೇಶಿಸುತ್ತರುವುದನ್ನೇ ಅವರ ಗೃಹ್ಯ ಸಂಬಂಧಿ ವಿಧಿಯಾಚರಣೆಗಳು ಸ್ಪಷ್ಟವಾಗಿ ಸೂಚಿಸುತ್ತವೆ. ಅಂತೆಯೇ "ಬ್ರಾಹ್ಮಣರು ನಾಗಗಳಿಂದ ರಕ್ಷಣೆ ಪಡೆಯಲು, ಹಿರಿಯರ ವಿಧಿ ಪೂರೈಸಲು, ದೆವ್ವ ಓಡಿಸಲು, ಸುಗ್ಗಿಯ ಮೊದಲ ಫಲ ಪಡೆಯಲು ಮಾಡುವ ವಿಧಿಯಾಚರಣೆ (ಯಜ್ಞ)ಯಲ್ಲಿ ಎಡಭಾಗಕ್ಕೆ, ಎಡಗೈಗೇ ಪ್ರಾಮುಖ್ಯತೆ" ನೀಡುವುದು. ಇವೆಲ್ಲ ಬ್ರಾಹ್ಮಣ ಪ್ರಪಂಚಕ್ಕೆ ದಲಿತರಿಂದ ಸೇರಿವೆ. "ಆ ಸಂದರ್ಭಗಳಲ್ಲಿ ಬ್ರಾಹ್ಮಣ 'ಯಜ್ಞೋಪವೀತನ್" ಅಲ್ಲ 'ಪ್ರಚಿನವಿತನ್'.

"ಆಗ ಅನ್ನದಲ್ಲಿ ಸವುಟನ್ನು ಬಲದಿಂದ ಎಡಕ್ಕೆ ತಿರುಗಿಸಬೇಕು. ಸಾಧನೆ, ಸಲಕರಣೆಗಳನ್ನು ಬಲದಿಂದ ಎಡಕ್ಕೆ ತರಬೇಕು. ಹೊಟ್ಟೆಯ ಎಡಭಾಗಕ್ಕೆ ಬರುವಂತೆ ಜನಿವಾರ ಧರಿಸಬೇಕು."

"ದೇವರುಗಳಿಗೆ ಹಗಲಿನಲ್ಲಿ ಬಲಗೈಯಿಂದ, ಸಸ್ಯಹಾರ ಬಳಸಿ ವಿಧಯಾಚರಣೆ ಮಾಡಿದರೆ, ಹಿರಿಯರಿಗೆ, ಭೂತಗಳಿಗೆ, ರಾತ್ರಿ ಹೊತ್ತು, ಎಡಗೈಯಿಂದ, ಮಾಂಸಾಹಾರದ ಮೂಲಕ ಆಚರಣೆ ಮಾಡಬೇಕು."

ಭೂತ, ಹಿರಿಯರು, ರಾತ್ರಿ, ಮಾಂಸಾಹಾರ ಇವೆಲ್ಲ ದಲಿತ ಸಂಸ್ಕೃತಿ.

"ದೇವರ ವಿಧಿಗೆ ದರ್ಭೆಹುಲ್ಲು, ಹಿರಿಯರ ವಿಧಿಗೆ ದರ್ಭೆ ಬೇರು ಬಳಸಬೇಕು. ದೇವರ ವಿಧಿಯ ಅನ್ನ 'ಅಗ್ಯ', ಹಿರಿಯರ ವಿಧಿಯ ಅನ್ನ ಪಿಂಡ,"

ಪಿಂಡವು ದ್ರಾವಿಡ ದಲಿತರ 'ಬಲಿ', 'ಪೊಲಿ'ಯ ರೂಪವಾಗಿರುವ ಸಾಧ್ಯತೆ ಇದೆ.

"ಹಿರಿಯರ ವಿಧಿಯ ಸಂದರ್ಭದಲ್ಲಿ ಬ್ರಾಹ್ಮಣ "ಓ, ಪಿತೃ ಮನೆಯನ್ನು ಕೊಡು" ಎಂದು ಹೇಳುತ್ತ ತನ್ನ ಮನೆಯನ್ನು ನೋಡುವನು. ಪಿಂಡದ ಕಡೆ ನೋಡಿ, "ನಾವು ನಿನಗೆ ಮನೆ ಕೊಡುವೆವು

ಪಿತೃಗಳೇ" ಎನ್ನುವನು. ಆಹಾರ, ವಸ್ತ್ರಾದಿಗಳಿಗೂ ಹೀಗೆಯೇ ಹೇಳುವನು. ಹಿರಿಯರು ಭಯ ಅಸುಖ ನಿವಾರಿಸುವವರು, ಭೌತಿಕ ಸುಖ ನೀಡುವವರು.

'ಮನೆ ಸಂಸ್ಕೃತಿ'ಯೆ ಪರಕೀಯವಾಗಿದ್ದ ಬ್ರಾಹ್ಮಣರು, ದಲಿತ ಸಂಸ್ಕೃತಿಯಿಂದ ಅದನ್ನು ಪಡೆದುಕೊಂಡರು. ಅಂತೆಯೇ ವೈದಿಕರು ವೈಶ್ಯರನ್ನು 'ಗೃಹಪತಿ' ಎನ್ನುತ್ತಿದ್ದರು. ಭೂಹಿಡುವಳಿದಾರರು, ಕರಕುಶಲಕರ್ಮಿಗಳಿಗೆ 'ಗಹಪತಿ' ('ಗಾಭಾವೈ'–ಜೈನ ಕೃತಿಗಳಲ್ಲಿ) ಎನ್ನುತ್ತಿದ್ದರು. (ಶರ್ಮಾ ಪು. ೧೧೭)

ದ್ರಾವಿಡರ ದೈವ 'ರುದ್ರ', –ಬ್ರಾಹ್ಮಣರ ಪ್ರಕಾರ ಸಹಜವಾಗಿ 'ಎಡ'ದ ದೇವತೆ. ತಾಂತ್ರಿಕರ ದೈವ.

ಒಟ್ಟಾರೆ ದ್ರಾವಿಡ ದಲಿತರ ಪಂಥ ಪರಂಪರೆ, ಶಕ್ತಿ ಸಾಮರ್ಥ್ಯಗಳನ್ನು ವೈದಿಕ ಬ್ರಾಹ್ಮಣರು "ಎಡ"ದ ಮೂಲಕ ಒಳಹಾಕಿಕೊಂಡರು. ಅಂತೆಯೇ ಇವರಲ್ಲಿ ಎಡಕ್ಕೆ ಸಂಬಂಧಿಸಿಯೇ ಹೆಣ್ಣು ದೇವರಿವೆ, ಮಾಟ, ಮದ್ದುಗಳಿವೆ. ಹಾವು–ಕತ್ತಲೆಗಳಿವೆ. ("ಬೆಕ್")

"ಹಿರಿಯರ ಪೂಜೆಯಲ್ಲಿ ಉತ್ತರದಿಂದ ದಕ್ಷಿಣಕ್ಕೆ ಗೆರೆ ಎಳೆದು 'ಅಸುರರನ್ನು ಎಳೆದು ಹಾಕಲಾಯಿತು' ಎನ್ನುತ್ತಾರೆ." ಇದು ದಕ್ಷಿಣಕ್ಕೆ ಹೊಲೆಯ–ಮಾದಿಗರನ್ನು ಓಡಿಸಲಾಯಿತು ಎಂಬುದರ ಸೂಚನೆ ಇರುವಂತಿದೆ.

ಮೊಢ, ತ್ರಿವೇದಿ, ಚತುರ್ವೇದಿ ಬ್ರಾಹ್ಮಣರಲ್ಲಿ ಒಳಪಂಗಡಗಳಾಗಲು 'ಶುದ್ಧ ಬ್ರಾಹ್ಮಣ್ಯ"ವನ್ನು ಅಷ್ಟಷ್ಟೇ ಬಿಡುತ್ತ ದ್ರಾವಿಡ ಸಾಂಸ್ಕೃತಿಕಾಂಶಗಳನ್ನು ಅಳವಡಿಸಿಕೊಂಡುದೇ ಕಾರಣವೆಂದು ವೀಣಾದಾಸ್ ಅವರ ಕೃತಿಯನ್ನು ಓದುತ್ತ ಹೋದಂತೆ ಅನಿಸುತ್ತದೆ. ಇದಕ್ಕೆ ಕೆಲವು ನಿದರ್ಶನಗಳು–

ಪ್ರತಿ ಬ್ರಾಹ್ಮಣ ಜಾತಿಗೂ ಪ್ರತ್ಯೇಕ ಶಕ್ತಿ ದೇವತೆ 'ಕುಲದೇವಿ'ಯಾಗಿರುವಳು. ಇವು ಭದ್ರಿಕಾ, ನಿಂಬಜ, ಛತ್ರ, ಪರಮರಂದ ಮುಂತಾದವು.

ಮೊಢ ಬ್ರಾಹ್ಮಣರಲ್ಲಿ ಮಾತಂಗಿ ಪೂಜೆ ಕಡ್ಡಾಯ.

'ಕೀಳು ಬ್ರಾಹ್ಮಣರು', ಕೀಳುಜಾತಿಯವರ (ಅಗಸ, ಕ್ಷೌರಿಕ, ಚಮ್ಮಗಾರ, ನಟುವ, ವಾದ್ಯಗಾರ, ಮೀನುಗಾರ. ಬಿಲ್ಲ) ಯಜ್ಞ ಕರ್ಮ ಮಾಡುವರು.

ತ್ರಿವೇದಿ ಬ್ರಾಹ್ಮಣ ಹುಡುಗರು ವಿಧವೆಯರು ಮತ್ತು ಅವಿವಾಹಿತ ಹುಡುಗಿಯರನ್ನು ಕೆಡಿಸಿದಾಗ 'ಧೆನುಜ' ಎಂಬ ಬ್ರಾಹ್ಮಣ ಪಂಗಡವಾಯಿತಂತೆ.

